



# ದೇವೀಭಾಗವತ

ಪೌರಾಣಿಕ ವಾತಾವರಣವೆಂದು ಪ್ರಸಿದ್ಧವಾದ ನೈಮಿಶಾರಣ್ಯದಲ್ಲಿ ಸೂತನೆಂಬ ಮಹಾಪುರಾಣಿಕನು, ತಾನು ವ್ಯಾಸಮುನಿಯಿಂದ ಕೇಳಿಕೊಂಡ ಅನೇಕ ಪುರಾಣಗಳನ್ನು ಅಲ್ಲಿಯ ಮುನಿಗಳ ಮುಂದೆ ಹೇಳಿದನು.

ಹಾಗೆ ಹೇಳುತ್ತಾ ಯಾವುದೋ ಸಂದರ್ಭದಲ್ಲಿ ಸೂತನು ಶೌನಕಾದಿ ಮುನಿಗಳೊಂದಿಗೆ ದೇವೀ ಭಾಗವತವೆಂಬ ದಿವ್ಯ ಪುರಾಣವೊಂದಿರುವುದಾಗಿ ಸೂಚಿಸಿದ್ದನು. ಅದನ್ನು ನೆನಪಿಟ್ಟುಕೊಂಡು ಒಂದು ದಿನ ಶೌನಕಮುನಿ ಸೂತಪುರಾಣಿಕನಿಗೆ ಆ ವಿಷಯವನ್ನು ಜ್ಞಾಪಕ ಪಡಿಸಿ, ಅದನ್ನು ಹೇಳಬೇಕೆಂದು ಕೇಳಿಕೊಂಡನು.

ಸೂತನು ಒಪ್ಪಿಕೊಂಡು ಅಲ್ಲಿ ಸೇರಿದ ಶೌನಕಾದಿ ಮುನಿಗಳಿಗೆ ದೇವೀ ಭಾಗವತವನ್ನು ವಿವರಿಸಿ ಹೇಳತೊಡಗಿದನು. ಮೊದಲುಸೂತನು ಆದಿಶಕ್ತಿಯನ್ನು ಕುರಿತು ಪ್ರಾರಂಭಿಸಿದನು: "ಆದಿಶಕ್ತಿಯೇ ಮಹಾಶಕ್ತಿ. ಸಕಲ ವಿದ್ಯೆಗಳೂ ಅವಳೇ. ಎಲ್ಲಾ ಲೋಕಗಳೂ ಅವಳನ್ನೇ ಆಶ್ರಯಿಸಿಕೊಂಡಿವೆ. ಸೃಷ್ಟಿ ಸ್ಥಿತಿ ಲಯಗಳನ್ನು ಉಂಟುಮಾಡುವವಳೂ ಅವಳೇ. ಅವುಗಳಲ್ಲಿ ಅವಳು ಪ್ರತ್ಯಕ್ಷ ಕಾಣಿಸದಿದ್ದರೂ. ಅವಳ ಪ್ರೇರಣೆಯಿಂದಲೇ ತ್ರಿಮೂರ್ತಿಗಳು ಆ ವಿಧಿಗಳನ್ನು ನಿರ್ವಹಿಸುತ್ತಾರೆ. ಬ್ರಹ್ಮನು ವಿಷ್ಣುವಿನ ನಾಭಿಕಮಲದಲ್ಲಿ ಹುಟ್ಟಿದನು. ವಿಷ್ಣುವಿಗೆ ಆಧಾರವಾಗಿರುವವನು ಆದಿಶೇಷ. ಜಲದ ಆಧಾರದಲ್ಲಿ ಆದಿಶೇಷನಿದ್ದಾನೆ. ಆ ಜಲಕ್ಕೆಲ್ಲಾ ಆಧಾರವಾದವಳು ಮಹಾಶಕ್ತಿ. ಅವಳೇ ಆದಿಶಕ್ತಿ. ಲೋಕಮಾತೆ. ಅಂತಹ ಮಹಾದೇವಿಗೆ ಸಂಬಂಧಿಸಿದ್ದೇ ದೇವೀಭಾಗವತ.

ಸೂತಪುರಾಣಿಕನಿಂದ ದೇವೀಭಾಗವತವನ್ನು ಕೇಳುವ ಕುತೂಹಲದಲ್ಲಿರುವ ಮುನಿಗಳಿಗೆ ಆದಿಶಕ್ತಿಯ ಮಹತ್ವ ತಿಳಿದಾಗ, ಒಂದು ಹಳೆಯ ನೆನಪು ಬಂದಿತು. ಆಗ ಮುನಿಗಳ ಪರವಾಗಿ ಶೌನಕನು ಸೂತನೊಂದಿಗೆ "ಅಯ್ಯಾ, ಒಂದು ಕಾಲದಲ್ಲಿ ಬ್ರಹ್ಮನು ನಮಗೊಂದು ಚಕ್ರವನ್ನು ಕೊಟ್ಟು, ಅದರ

೧. ಸೂತಪುರಾಣಿಕರು, ಶೌನಕಾದಿಗಳು



ನೇಮಿ ಯಾವ ಪ್ರದೇಶದಲ್ಲಿ ಒಡೆಯುವುದೋ ಆ ಪ್ರದೇಶವು ಪವಿತ್ರವಾಗುವುದರಿಂದ, ಆ ಪ್ರಾಂತಕ್ಕೆ ಕಲಿಯ ಪ್ರವೇಶವಾಗದು ಎಂದು ಹೇಳಿದನು. ಆ ಚಕ್ರವು ಈ ಅರಣ್ಯಪ್ರದೇಶದಲ್ಲಿ ಒಡೆದುಹೋಯಿತು. ಆದುದರಿಂದ ಇದಕ್ಕೆ ನೈಮಿಶಾರಣ್ಯವೆಂಬ ಹೆಸರೂ ಬಂತು. ನಾವೆಲ್ಲಾ ಇಲ್ಲಿಯೇ ಇದ್ದುಬಿಟ್ಟೆವು. ಕೃತ ಯುಗವು ಬರುವವರೆಗೂ ಇರುತ್ತೇವೆ. ಕಲಿಯ ಭಯವೇ ನಮಗಿಲ್ಲ. ಇಲ್ಲಿ ನಮಗೆ ಪುಣ್ಯಕಥಾಕಾಲ ಕ್ಷೇಪದ ಹೊರತು ಬೇರೇನೂ ಇಲ್ಲ. ಅಂತೆಯೇ ಈಗ ನೀವು ಪುಣ್ಯಪ್ರದವಾದ ದೇವೀಭಾಗವತವೆಂಬ ಹೊಸ ಪುರಾಣ ಪ್ರಾರಂಭಿಸಿದ್ದೀರಿ. ಮುಂದು ವರಿಸಿರಿ" ಎಂದನು.

ಸೂತನು ಹೇಳತೊಡಗಿದನು: "ವ್ಯಾಸಮಹಾಮುನಿ ನನಗೆ ಹೇಗೆ ಹೇಳಿದನೋ ಹಾಗೆಯೇ ನಿಮಗೆ ದೇವೀಭಾಗವತ ಹೇಳುತ್ತೇನೆ. ಈಗ ಇಪ್ಪತ್ತೇಳು ದ್ವಾಪರಗಳು ಕಳೆದು ಇಪ್ಪತ್ತೆಂಟನೆಯ ದ್ವಾಪರವು ನಡೆಯುತ್ತಿದೆ. ಪ್ರತಿ ದ್ವಾಪರದಲ್ಲಿ ಒಬ್ಬ ವ್ಯಾಸನು ಹುಟ್ಟಿದ್ದಾನೆ. ವೇದಗಳನ್ನು ವಿಭಜಿಸಿ ಪುರಾಣಗಳನ್ನು ರಚಿಸಿದವನು ಸಾತ್ಯವತೀಯನೆಂಬ ವ್ಯಾಸನೇ (ಸತ್ಯವತಿಯ ಮಗ) ನಮಗೆ ಗುರು. ಆತನು ತನ್ನ ಮಗನಾದ ಶುಕನಿಗೆ ಈ ದೇವೀಭಾಗವತವನ್ನು ಹೇಳುತ್ತಿದ್ದಾಗ ನಾನು ಭಕ್ತಿಶ್ರದ್ಧೆಗಳಿಂದ ಕೇಳಿ ತಿಳಿದುಕೊಂಡೆನು. ಅಳಿಯನ ಜತೆ ತಿನ್ನಬೇಕು, ಕಿವಿಗಳ ಜತೆ ಕೇಳಬೇಕು ಎನ್ನುವರಷ್ಟೆ? ಈ ದೇವೀಭಾಗವತವನ್ನು ಕೇಳಿ ಶುಕನು ತಾರಕನಾದನು. ನಿಜಕ್ಕೂ ಈ ಪುರಾಣ ಕೇಳಿದವರು ಕಷ್ಟಗಳನ್ನು ದಾಟುವರು"

ಇದನ್ನು ಕೇಳಿ ಮುನಿಗಳು ಸೂತನನ್ನು ಕುರಿತು, "ಶುಕನು ವ್ಯಾಸನ ಮಗನು ಹೇಗಾದನು? ಅವನು ಅರಣಿಯಲ್ಲಿ ಹುಟ್ಟಿದವನೆಂದು ಹೇಳುವುದನ್ನು ಕೇಳಿದ್ದೇವಲ್ಲಾ?" ಎಂದು ಕೇಳಿದರು. ಆಗ ಸೂತನು ಮುನಿಗಳಿಗೆ ಶುಕನ ಜನ್ಮವೃತ್ತಾಂತವನ್ನು ವಿಸ್ತಾರವಾಗಿ ಹೇಳಿದನು:

ಒಂದುಸಾರಿ ವ್ಯಾಸನು ಸರಸ್ವತೀನದಿಯ ತೀರದಲ್ಲಿ ತಪಸ್ಸು ಮಾಡುತ್ತಿದ್ದಾಗ ಪಕ್ಷಿಗಳು ಜೋಡಿಜೋಡಿಯಾಗಿ ಜೀವಿಸುತ್ತ ಮರಿಗಳನ್ನು ಪಡೆಯುವುದನ್ನೂ ಅವುಗಳ ಬಾಯಿಗೆ ಆಹಾರ ಊಡುವುದನ್ನೂ, ಅವು ನುಂಗುವ ಚಂದ ನೋಡಿ ಆನಂದಿಸುವುದನ್ನೂ ನೋಡುತ್ತಿರುವಾಗ ತನಗೂ ಸಂತಾನಭಾಗ್ಯವಿರುತ್ತಿದ್ದರೆ ಹೀಗೆ ಸಂತೋಷಪಡಬಹುದಿತ್ತಲ್ಲಾ ಎಂದು ತೋರಿತು. ಮದುವೆಯಾಗಿ ಹೆಂಡತಿಯೊಂದಿಗೆ ಜೋಡಿಯಾಗಿರುವುದೂ ಆನಂದದಾಯಕವೆನಿಸಿತು. ಆಗ ಮಗನನ್ನು ಪಡೆಯಬಹುದು. ಅವನು ಬೆಳೆದು ದೊಡ್ಡವನಾಗಲು, ಅವನಿಗೆ ಮದುವೆ ಮಾಡಿ ಮುದ್ದಾದ ಸೊಸೆಯನ್ನು ನೋಡಿ ಆನಂದಿಸಬಹುದು. ಪುತ್ರರಿದ್ದರೆ ಎಷ್ಟೆಲ್ಲ ಲಾಭಗಳು? ಮುದುಕತನದಲ್ಲಿ ಶ್ರದ್ಧೆಯಿಂದ ಸೇವೆ ಮಾಡುತ್ತಾರೆ. ಧನವನು ಸಂಪಾದಿಸಿ ತರುತ್ತಾರೆ.

ಸತ್ತರೆ ಬಾಯಿಗೆ ನೀರು ಸುರಿದು ಅಗ್ನಿಸಂಸ್ಕಾರ ಮಾಡುತ್ತಾರೆ. ಉತ್ತಮ ಲೋಕಗಳು ಸಿಗಬೇಕಾದರೆ ಪುತ್ರರು ಮಾಡುವ ಪಿಂಡಪ್ರದಾನಗಳು ಬೇಕು. ಆದುದರಿಂದ ಮನುಷ್ಯನಿಗೆ ಮಕ್ಕಳಿಗಿಂತ ಹೆಚ್ಚಿನ ಸುಖ ಬೇರೊಂದಿಲ್ಲ. ಪ್ರಪಂಚದಲ್ಲಿ ಹುಟ್ಟಿದ ಮೇಲೆ ಹೇಗಾದರೂ ಪುತ್ರಭಾಗ್ಯ ಪಡೆಯಲೇಬೇಕು.

ಹೀಗೆಂದುಕೊಂಡು ವ್ಯಾಸನು ಪುತ್ರರನ್ನು ಪಡೆಯುವ ನಿಮಿತ್ತವಾಗಿ ಕಾಂಚನಾದ್ರಿಗೆ ಹೋಗಿ, ಯಾವ ದೇವನನ್ನು ಆರಾಧಿಸಿದರೆ ತನ್ನ ಕೋರಿಕೆ ಬೇಗನೆ ನೆರವೇರುವುದೋ ಎಂದು ಆಲೋಚಿಸತೊಡಗಿದನು.

ಆಗ ತ್ರಿಲೋಕಸಂಚಾರಿಯಾದ ನಾರದನು ಆತನ ಬಳಿಗೆ ಬಂದು ನಿಂತನು. ಅವನನ್ನು ನೋಡಿದ ಕೂಡಲೇ ವ್ಯಾಸನು ನಮಸ್ಕಾರ ಮಾಡಿ "ಸ್ವಾಮಿ! ಸಮಯಕ್ಕೆ ಸರಿಯಾಗಿ ಬಂದಿರಿ. ತ್ರಿಕಾಲಜ್ಞಾನಿಗಳಾದ ನೀವು ನನ್ನ ಕೋರಿಕೆತೀರಿಸಲಿಕ್ಕಾಗಿಯೇ ಬಂದಿರಬೇಕು" ಎಂದನು.

"ನೀವು ಸರ್ವಜ್ಞರು. ನಿಮಗೆ ಒಬ್ಬರ ಸಹಾಯ ಬೇಕಾಗುವುದುಂಟೆ? ಆದರೂ ನಿಮ್ಮ ಕೋರಿಕೆ ಏನೆಂಬುದನ್ನು ದಯವಿಟ್ಟು ನೀವೇ ಹೇಳಿಬಿಡಿ" ಎಂದನು ನಾರದ.

"ಪುತ್ರನಿಲ್ಲದವನಿಗೆ ಪರಲೋಕವಿಲ್ಲವಷ್ಟೆ? ಅದೇ ನನಗೆ ಬೇಕು. ಯಾವ ದೇವನನ್ನು ಪ್ರಾರ್ಥಿಸಿದರೆ ನನಗೆ ಪುತ್ರ ಭಾಗ್ಯ ಸಿಗುತ್ತದೆಂದು ನೀವೇ ಹೇಳಬೇಕು" ಎಂದನು ವ್ಯಾಸ.

ಅದಕ್ಕೆ ನಾರದನು ಹೀಗೆ ಹೇಳಿದನು: "ಹಿಂದೆ ಒಂದುಸಾರಿ ನನ ತಂದೆಯಾದ ಬ್ರಹ್ಮನಿಗೆ ಇದೇ ಸಂದೇಹ ಬಂದಿತು. ಅವನು ವಿಷ್ಣುಲೋಕಕ್ಕೆ ಹೋಗಿ ವಿಷ್ಣುವನ್ನು ನೋಡಿ, "ಮಹಾವಿಷ್ಣುವೇ! ಎಲ್ಲಾ ದೇವತೆಗಳಿಗಿಂಲೂ ಮೇಲಾಗಿ ನೀನೇ ಸರ್ವೋತ್ತಮನಾಗಿರುವವನೆಂದು ಭಾವಿಸಿದ್ದೇನೆ. ಇದು



ಸರಿಯೋ ತಪ್ಪೋ ಎಂಬುದನ್ನು ನೀನೇ ಹೇಳಬೇಕು" ಎಂದು ಕೇಳಿಕೊಂಡನು.

ಅದಕ್ಕೆ ವಿಷ್ಣು, "ಬ್ರಹ್ಮಾ, ನೀನು ಸೃಷ್ಟಿಸುವವನೆಂದೂ, ನಾನು ಅಭಿವೃದ್ಧಿಪಡಿಸುವವನೆಂದೂ, ಶಿವನು ಸಂಹರಿಸಿ ಲಯಮಾಡುವವನೆಂದೂ ಸರ್ವಸಾಧಾರಣವಾಗಿ ಎಲ್ಲರೂ ಅಂದುಕೊಂಡಿದ್ದಾರೆ. ಇದು ಸರಿಯಲ್ಲ. ತೇಜಸ್ಸಿನೊಂದಿಗೆ ಕೂಡಿದ ಆದಿಶಕ್ತಿ ಮಾತ್ರವೇ ಸೃಷ್ಟಿ ಮಾಡುವಳೆಂದು ಬುದ್ಧಿವಂತರಾದವರು ತಿಳಿದುಕೊಳ್ಳುತ್ತಾರೆ. ನಾವು ಮೂವರೂ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುತ್ತಿದ್ದೇವೆಂದರೆ, ಅದಕ್ಕೆ ನಿನ್ನ ರಜಸ್ಸೂ, ನನ್ನ ಸತ್ವವೂ, ಶಿವನ ತಮಸ್ಸೂ ಕಾರಣವಾಗುತ್ತವೆ. ಅದು ನಮ್ಮ ನಮ್ಮಲ್ಲಿ ಇಲ್ಲದೆ ಹೋಗಿದ್ದರೆ ನಮಗೆ ಕವಡಿಯ ಬೆಲೆಯೂ ಇಲ್ಲ. ನಾನು ಈ ಶೇಷತಲ್ಪದಲ್ಲಿ ಮಲಗಿದ್ದರೂ, ಲಕ್ಷ್ಮಿಯೊಂದಿಗೆ ಆರಾಮಗಳಲ್ಲಿ ವಿಹರಿಸುತ್ತಿದ್ದರೂ, ಗರ್ವಿಷ್ಠರಾದ ರಾಕ್ಷಸರನ್ನು ಕೊಂದರೂ



"ಆದರಂತೆ ವ್ಯಾಸನು ಲೋಕಮಾತೆಯನ್ನು ಕುರಿತು ತಪಸ್ಸು ಮಾಡಿದನು" ಎಂದು ಸೂತ ಪುರಾಣಿಕನು ಶೌನಕಾದಿಗಳಿಗೆ ಹೇಳಿದನು.

ಕೂಡಲೇ ಮುನಿಗಳು, "ವಿಷ್ಣುವಿನ ತಲೆ ಹಾರಿ ಹೋಯಿತೆಂದಿರಲ್ಲಾ ! ಇದು ಬಹಳ ಅದ್ಭುತವಾದ ಸಂಗತಿ. ಅದು ಹೇಗಾಯಿತು ? ಆತನಿಗೆ ಕುದುರೆಯ ತಲೆ ಹೇಗೆ ಅಂಟಿಸಿದರು ? ಇದನ್ನೆಲ್ಲಾ ವಿವರಿಸಿ ಹೇಳಬೇಕು" ಎಂದರು.

## ಹಯಗ್ರೀವಾವತಾರ

ಪೂರ್ವಕಾಲದಲ್ಲಿ ವಿಷ್ಣು ರಾಕ್ಷಸರೊಂದಿಗೆ ಎಡ ತೆರವಿಲ್ಲದೆ ಹತ್ತು ಸಾವಿರ ವರ್ಷಗಳ ವರೆಗೆ ಯುದ್ಧ ಮಾಡಿ ಜಯಿಸುತ್ತ, ತುಂಬಾ ಆಯಾಸಗೊಂಡನು. ನಾಣೆಳೆದು ಬಿಗಿಯಲ್ಪಟ್ಟ ತನ್ನ ಬಿಲ್ಲನ್ನು ಗಡ್ಡದ ಕೆಳಗೆ ಆನಿಸಿಕೊಂಡು ಕುಳಿತು ದಣಿವಾರಿಸಿಕೊಳ್ಳುತ್ತ ನಿದ್ರಿಸಲಾರಂಭಿಸಿದನು.

ಆ ಸಮಯದಲ್ಲಿ ದೇವತೆಗಳು ಒಂದು ಯಜ್ಞ ವನ್ನು ಪ್ರಾರಂಭಿಸಿ, ಅದಕ್ಕಾಗಿ ವಿಷ್ಣುವನ್ನು ಹುಡು ಕುತ್ತ ಬಂದು, ಅವನು ನಿದ್ದೆಯಲ್ಲಿರುವುದನ್ನು ನೋಡಿ, ಏನು ಮಾಡಬೇಕೆಂದು ತೋರದೆ, ಒಬ್ಬರನ್ನೊಬ್ಬರು ನೋಡುತ್ತ ನಿಂತರು.

ಆಗ ಶಿವನು ಬ್ರಹ್ಮನೊಂದಿಗೆ "ಒಂದು ಉಪಾಯ ಮಾಡು. ನೀನು ಒಂದು ಹುಳವನ್ನು ಸೃಷ್ಟಿಸಿ, ಅದರಿಂದ ಬಿಲ್ಲಿನ ನಾರನ್ನು ಕಡಿಸಿಬಿಡು. ನಾರು ಕಡಿದ ಕೂಡಲೇ ಬಿಲ್ಲು ಮೇಲಕ್ಕೇಳುತ್ತದೆ. ಕೂಡಲೇ ವಿಷ್ಣು ನಿದ್ದೆಯಿಂದೇಳುತ್ತಾನೆ. ಯಜ್ಞ ನಿರ್ವಿಘ್ನವಾಗಿ ಸಾಗುತ್ತದೆ" ಎಂದನು.

ಬ್ರಹ್ಮನು ಕೂಡಲೇ ಹುಳವನ್ನು ಹುಟ್ಟಿಸಿ ಬಿಲ್ಲಿಗೆ ಕಟ್ಟಿದ ನಾರು ದಾರವನ್ನು ಕಡಿಯಲು ಹೇಳಿದನು. ಅದಕ್ಕೆ ಹುಳ ಹೆದರಿ, "ಮಹಾತ್ಮಾ, ಇಂಥಾ ಕೆಲಸ ನಾನು ಹೇಗೆ ಮಾಡಲಿ ? ಮಹಾಪಾಪವಲ್ಲವೆ ? ತಾಯಿ ಮಕ್ಕಳನ್ನು ಬೇರ್ಪಡಿಸುವುದು, ಗಂಡ ಹೆಂಡಿ

ಆದಿಶಕ್ತಿಯ ದಯದಿಂದಲೇ ಎಂದು ತಿಳಿ. ನಾನು ಸ್ವತಂತ್ರನೆಂದು ಎಂದಿಗೂ ಭಾವಿಸಬೇಡ. ಹಿಂದೆ ನಾನು ಮಧುಕೈಟಭರೆಂಬ ದಾನವರೊಂದಿಗೆ ಐದು ಸಾವಿರ ವರ್ಷ ಹೋರಾಡಿ ಕಡೆಗೆ ಜಯಪಡೆದುದು ಆದಿಶಕ್ತಿಯ ಸಹಾಯದಿಂದತಾನೇ ? ಹಿಂದೆ ಒಂದು ಸಾರಿ ಬಿಲ್ಲು ಹಗ್ಗ ಕಡಿದು ನನ್ನ ತಲೆ ಹಾರಿ ಹೋದಾಗ ನೀನು ದೇವಶಿಲ್ಪಿಯಿಂದ ಕುದುರೆಯ ತಲೆಯನ್ನು ಹೊಂದಿಸಿ ಕೊಟ್ಟೆಯಷ್ಟೆ ? ಆ ವಿಧ ವಾಗಿ ನಾನು ಹಯಗ್ರೀವನಾದುದು ನೆನಪಿದೆ ಯಷ್ಟೆ ? ಆದುದರಿಂದ ನಾನು ಕೂಡಾ ಆದಿಶಕ್ತಿಗೆ ಅಧೀನನಾದವನೇ. ಆ ಶಕ್ತಿಗೆ ಮೀರಿದುದು ಲೋಕ ಗಳಲ್ಲಿ ಮತ್ತೊಂದಿಲ್ಲವೆಂದು ನಾನು ಗಟ್ಟಿಯಾಗಿ ಹೇಳುತ್ತೇನೆ" ಎಂದನು.

ಹೀಗೆಂದು ನಾರದನು ವ್ಯಾಸನೊಂದಿಗೆ, "ನೀವು ಆದಿಶಕ್ತಿಯನ್ನು ಬೇಡಿಕೊಂಡರೆ ನಿಮ್ಮ ಕೋರಿಕೆ ಈಡೇರುತ್ತದೆ" ಎಂದನು.



ರನ್ನು ಅಗಲಿಸುವುದು, ನಿದ್ದೆಯನ್ನು ಭಗ್ನಪಡಿಸುವುದು ಇವೆಲ್ಲಾ ಬ್ರಹ್ಮಹತ್ಯದಂತಹ ಮಹಾಪಾಪಗಳಲ್ಲವೇ? ಇಂಥಾ ಕೆಲಸ ನನ್ನನ್ನು ಮಾಡಲು ಹೇಳುವಿರಾ ?" ಎಂದು ಕೇಳಿತು.

"ಅದಕ್ಕಾಗಿ ಚಿಂತಿಸಬೇಡ. ಯಜ್ಞದಲ್ಲಿ ಅಗ್ನಿಗೆ ಆಹುತಿ ಮಾಡುವಾಗ ಕೆಳಗೆ ಚೆಲ್ಲುವ ವಸ್ತುಗಳನ್ನು ಹೆಕ್ಕಿತಿನ್ನುವ ಪುಣ್ಯ ಕೆಲಸ ನಿನಗೆ ಕೊಡುತ್ತೇನೆ. ನಿನಗೇನೂ ಪಾಪಬಾರದು" ಎಂದನು ಬ್ರಹ್ಮ.

ಹುಳವು ಸಂತೋಷದಿಂದ ಬಿಲ್ಲಿನ ನಾರು ದಾರವನ್ನು ಕಡಿದು ತುಂಡರಿಸಿತು. ಆಗ ದೊಡ್ಡದೊಂದು ಕಠೋರಧ್ವನಿ ಹುಟ್ಟಿ, ಭೂಮಿ ನಡುಗಿತು. ಬಿಲ್ಲಿನ ಕೊನೆ ತಟ್ಟನೆ ಮೇಲಕ್ಕೆ ಹಾರುವಾಗ ವಿಷ್ಣುವಿನ ತಲೆಯೂ ಹಾರಿಹೋಯಿತು.

ಅದನ್ನು ನೋಡಿ ದೇವತೆಗಳು ಹೆದರಿ ಏನೂ ತೋರದೆ, "ಹೇ ದೇವರ ದೇವಾ! ನೀನೇ ಸರ್ವೇಶ್ವರನಾಗಿ, ಎಲ್ಲಾ ಲೋಕಗಳನ್ನೂ ಪಾಲಿಸುವವನಾಗಿರುವಾಗ, ನಿನಗೇ ಇಂಥಾ ಗತಿ ಏಕೆ ಬಂತು? ಯಾವ ರಾಕ್ಷಸರಿಂದಲೂ ಆಗದ ಕೆಲಸ ಈಗ ಹೇಗಾಯಿತು? ನೀನು ಮಾಯೆಗಳಿಗೂ ಅತೀತನಾದವನಲ್ಲವೇ? ಮಾಯೆ ನಿನ್ನನ್ನು ಹೀಗೆ ಮಾಡಿರಲು ಸಾಧ್ಯವೇ?" ಎಂದು ವಿಲಪಿಸಿದರು.

ಆಗ ದೇವಗುರುವಾದ ಬೃಹಸ್ಪತಿ ಅವರೊಂದಿಗೆ, "ಹೀಗೆ ಅಳುತ್ತಾ ಕುಳಿತರೆ ಏನೂ ಸಾಗಲಾರದು. ನಡೆದುಹೋದುದಕ್ಕೆ ಉಪಾಯವೇನೆಂಬುದನ್ನು ಈಗ ಯೋಚಿಸಬೇಕು" ಎಂದನು.

"ದೇವತೆಗಳೆಲ್ಲರ ಕಣ್ಣೆದಿರಿನಲ್ಲಿಯೇ ವಿಷ್ಣುವಿನ ತಲೆ ಹಾರಿಹೋಗಿದೆ. ಇನ್ನು ನಮ್ಮ ಪ್ರಯತ್ನದಲ್ಲಿ ಏನಿದೆ? ವಿಶೇಷ ದೈವಬಲದಿಂದಲೇ ಏನಾದರೂ ನಡೆಯ ಬೇಕಾಗಿದೆ" ಎಂದನು ಇಂದ್ರ.

ಆಗ ಬ್ರಹ್ಮನು, "ಯಾವ ಕೆಲಸಕ್ಕಾದರೂ ಜಗದೀಶ್ವರಿಯ ಅನುಗ್ರಹವು ಬೇಕು. ಸೃಷ್ಟಿ ಸ್ಥಿತಿ ಲಯಕಾರಕಳಾದವಳು ಅವಳೇ. ಆದುದರಿಂದ ನೀವೆಲ್ಲರೂ ಆದಿಶಕ್ತಿಯನ್ನು ಪ್ರಾರ್ಥಿಸಿರಿ" ಎಂದು ದೇವತೆಗಳಿಗೆ ಹೇಳಿದನು.

ಎಲ್ಲಾ ದೇವತೆಗಳೂ ಒಂದಾಗಿ ಆದಿಶಕ್ತಿಯನ್ನು ಪ್ರಾರ್ಥಿಸತೊಡಗಿದರು. ಅವರ ಮೇಲೆ ದಯೆ ತಾಳಿ ಮಹಾದೇವಿ ಪ್ರತ್ಯಕ್ಷಳಾದಳು.

"ಮಹಾತಾಯಿಯೇ! ವಿಷ್ಣುವಿಗೆ ಈ ಗತಿ ಏಕೆ ಬಂದಿತು? ಆತನ ತಲೆ ಏನಾಯಿತು? ನಾವು ಮಾಡಬೇಕಾದ ಕರ್ತವ್ಯವೇನು?" ಎಂದು ದೇವತೆಗಳು ದೇವಿಯನ್ನು ಕೇಳಿದರು.

ದೇವಿ ಈ ರೀತಿ ಪ್ರತ್ಯುತ್ತರ ಕೊಟ್ಟಳು: "ವಿಷ್ಣುವಿಗೆ ಈ ಗತಿ ಏಕೆ ಬಂದಿತೆಂದು ನೀವೆಲ್ಲಾ ಕೇಳುವಿರಿ. ಒಂದು ದಿನ ವಿಷ್ಣು ಶಯ್ಯಾಗಾರದಲ್ಲಿದ್ದ ಲಕ್ಷ್ಮಿಯನ್ನು ನೋಡಿ ನೆಗಾಡಿದನು. ಅದನ್ನು ನೋಡಿ ಲಕ್ಷ್ಮಿ ಗಾಬರಿಯಾದಳು. ವಿಷ್ಣು ತನ್ನ ಮುಖ ನೋಡಿ ನಗಲು ಕಾರಣವೇನಿರಬೇಕು? ತನ್ನ

ಮುಖವು ಅನಾಕಾರಿಯಾಗಿದೆಯೋ? ತನಗಿಂತ ಸುಂದರಿಯಾದ ಯಾರನ್ನಾದರೂ ನೋಡಿ ಮೋಹಿಸಿದನೇನು? ಹೀಗೆಂದುಕೊಂಡು ಲಕ್ಷ್ಮಿ ಸವತಿಯ ಕಾಟಕ್ಕಿಂತ ಗಂಡನ ಸಾವೇ ಮೇಲು ಎಂದುಕೊಂಡು ತನ್ನ ಗಂಡನ ತಲೆ ಸಮುದ್ರದಲ್ಲಿ ಬೀಳಲೆಂದು ಶಾಪ ಕೊಟ್ಟಳು. ಆ ಶಾಪ ತಾಗಿ ವಿಷ್ಣುವಿಗೆ ಈ ಗತಿ ಬಂದಿದೆ. ಇದು ಹೀಗಿರುವಾಗ ಹಯಗ್ರೀವನೆಂಬ ರಾಕ್ಷಸನು ನನ್ನನ್ನು ಧ್ಯಾನಿಸಿ ಸಾವಿರ ವರ್ಷಗಳವರೆಗೆ ತಪಸ್ಸು ಮಾಡಿದನು. ನಾನು ಅವನ ಮುಂದೆ ಪ್ರತ್ಯಕ್ಷಳಾಗಿ ವರ ಕೇಳಿಕೋ ಅಂದೆನು. ಅವನು ತನಗೆ ಯಾರಿಂದಲೂ ಸಾವು ಬರಬಾರದೆಂದು ವರ ಕೇಳಿದನು. ಹುಟ್ಟಿದ ಪ್ರಾಣಿಗೆ ಸಾವು ತಪ್ಪದು ಎಂದಿರುವುದರಿಂದ ಬೇರೇನಾದರೂ ವರ ಕೇಳುವಂತೆ ಹೇಳಿದೆನು. ಅದಕ್ಕೆ ಅವನು ತಾನು ಹಯಗ್ರೀವನಾದುದರಿಂದ ಹಯಗ್ರೀವನಿಂದಲೇ ತನಗೆ ಮರಣ ಬರುವಂತೆ ವರ ಕೇಳಿದನು. ನಾನೂ ಹಾಗೆಯೇ ವರವನ್ನು ಕೊಟ್ಟೆ. ಆ ರಾಕ್ಷಸನು ತುಂಬಾ ಕೊಬ್ಬಿ ಲೋಕಗಳನ್ನೆಲ್ಲಾ ಕ್ಷೋಭಿಸಿಕೊಂಡಿದ್ದಾನೆ. ಮೂರು ಲೋಕಗಳಲ್ಲಿಯೂ ಅವನನು ಜಯಿಸುವವರು ಯಾರೂ ಇಲ್ಲ. ಆದುದರಿಂದ ನೀವು ಒಂದು ಕುದುರೆಯ ತಲೆಯನ್ನು ತಂದು ವಿಷ್ಣುವಿನ ಶರೀರಕ್ಕೆ ತಗಲಿಸಿ ಹಯಗ್ರೀವನನ್ನು ಸೃಷ್ಟಿಸಿರಿ. ಹಾಗೆ ಮಾಡಿದರೆ ಈ ವಿಷ್ಣು ಹಯಗ್ರೀವ ರಾಕ್ಷಸನನ್ನು ಕೊಂದು ಬಿಡುತ್ತಾನೆ. ಲೋಕದ ಕಂಟಕವು ಪರಿಹಾರವಾಗುತ್ತದೆ. ನಿಮ್ಮ ಕೋರಿಕೆ ನೆರವೇರುತ್ತದೆ."

ಹೀಗೆ ಹೇಳಿ ಆದಿಶಕ್ತಿ ಅಂತರ್ಹಿತೆಯಾದ ಕೂಡಲೇ, ದೇವತೆಗಳು ದೇವಶಿಲ್ಪಿಯನ್ನು ಕರೆದು ಕುದುರೆಯ ತಲೆಯನ್ನು ತಂದು ವಿಷ್ಣುವಿನ ಶರೀರಕ್ಕೆ ಅಂಟಿಸಲು ಹೇಳಿದರು.

ಅದರಂತೆ ದೇವಶಿಲ್ಪಿ ಸುಂದರವಾದ ಕುದುರೆಯ ತಲೆಯನ್ನು ಮಾಡಿ ತಂದು ವಿಷ್ಣು ಶರೀರಕ್ಕೆ ಹೊಂದಿ



ಸಿದನು. ಈ ರೀತಿಯಾಗಿ ವಿಷ್ಣು ಹಯಗ್ರೀವ ಅವತಾರವನ್ನೆತ್ತಿ ವಿಜೃಂಭಿಸಿಕೊಂಡು ಹೋಗಿ, ಹಯಗ್ರೀವ ರಾಕ್ಷಸನನ್ನು ಕೆಣಕಿ, ಮಹಾಯುದ್ಧದಲ್ಲಿ ಕೊಂದು ಲೋಕಗಳಿಗೆ ಕ್ಷೇಮವನ್ನುಂಟುಮಾಡಿದನು. ದೇವತೆಗಳ ಯಜ್ಞವೂ ಪೂರ್ತಿಯಾಯಿತು.

### ಮಧುಕೈಟಭರು

ಇದನ್ನೆಲ್ಲಾ ಕೇಳಿ ಶೌನಕಾದಿ ಮುನಿಗಳು ಸೂತ ಪುರಾಣಿಕನನ್ನು ಕುರಿತು, ಮಧುಕೈಟಭರ ಕಥೆಯನ್ನು ಹೇಳಬೇಕೆಂದು ಕೇಳಿದರು. ಸೂತನು ಅವರಿಗೆ ಆ ವೃತ್ತಾಂತವನ್ನು ಹೇಳತೊಡಗಿದನು:

ಹಾಲಿನ ಸಮುದ್ರದಲ್ಲಿ ಶೇಷತಲ್ಪದ ಮೇಲೆ ಮಹಾವಿಷ್ಣು ನಿದ್ದೆ ಮಾಡಿಕೊಂಡಿದ್ದ ಸಮಯದಲ್ಲಿ ಅವನ ಕಿವಿಗಳಿಂದ ಇಬ್ಬರು ರಾಕ್ಷಸರು ಹುಟ್ಟಿ ಕ್ಷೀರ ಸಾಗರಕ್ಕೆ ಬಿದ್ದರು. ಅವರು ನೀರಿನಲ್ಲಿ ಈಜುತ್ತಾ ತಮ್ಮ ಜನ್ಮಕ್ಕೆ ಆಧಾರವೇನೆಂದು ತಿಳಿಯದೆ ಆಶ್ಚರ್ಯಪಡುತ್ತಿದ್ದರು. ಅವರಲ್ಲಿ ಕೈಟಭನೆಂಬವನು

ಮಧುವಿನೊಂದಿಗೆ "ಆಧಾರವಿಲ್ಲದೆ ನಾವು ಹುಟ್ಟಲು ಸಾಧ್ಯವೇ ಇಲ್ಲ. ಈ ಮಹಾಸಮುದ್ರಕ್ಕೂ ನಮಗೂ ಏನೋ ಆಧಾರವಿದ್ದೇ ಇರಬೇಕು" ಎಂದನು.

ಅವನು ಹಾಗೆ ಹೇಳಿ ನಿಲಿಸಿದ್ದೇ ತಡ, ಆಕಾಶದಿಂದೊಂದು ಅಶರೀರವಾಣಿ ಕೇಳಿಸಿತು. ಅದೊಂದು ಮಂತ್ರದಂತಿರಲು, ಮಧುಕೈಟಭರು ಆ ಮಾತನ್ನೇ ಹಿಡಿದುಕೊಂಡು ಜಪಿಸತೊಡಗಿದರು. ಆಗ ಆಕಾಶದಲ್ಲಿ ಮಿಂಚಿನಂತೆ ಹೊಳೆಯುವ ವಸ್ತುವೊಂದು ಕಂಡು ಬಂತು. ಮಧುಕೈಟಭರು ಅದನ್ನು ನೋಡಿ, ಅದು ತಾವು ಜಪಿಸುವ ಆದಿಶಕ್ತಿಯ ಮಂತ್ರದ ತೇಜಸ್ಸೇ ಎಂದು ನಿಶ್ಚಯಿಸಿ, ತಮಗೆ ಮೊದಲು ಕೇಳಿದ ಅದೇ ಧ್ವನಿಮಂತ್ರವನ್ನು ಇನ್ನಷ್ಟು ಭಕ್ತಿಯಿಂದ ಜಪಿಸುತ್ತ ಸಾವಿರ ವರ್ಷ ತಪಸ್ಸು ಮಾಡಿದರು. ಅವರ ತಪಸ್ಸಿಗೆ ಮೆಚ್ಚಿ ಆದಿಶಕ್ತಿ ಪ್ರತ್ಯಕ್ಷಳಾಗಿ ವರ ಕೇಳುವಂತೆ ಹೇಳಿದಳು. ಅವರು ತಮಗೆ ಸ್ವೇಚ್ಛಾಮರಣ ಬರಬೇಕೆಂದು ಕೇಳಿಕೊಂಡರು. ದೇವಿ ಹಾಗೆಯೇ ವರ ಕೊಟ್ಟು ಅಂತರ್ಧಾನಳಾದಳು.

ತರುವಾಯ ಅವರು ಕ್ಷೀರಸಾಗರದಲ್ಲಿಯೇ ಸಂಚರಿಸುತ್ತ ಒಂದು ಕಡೆಯಲ್ಲಿ ಬ್ರಹ್ಮನನ್ನು ನೋಡಿ ತಮ್ಮೊಂದಿಗೆ ಯುದ್ಧಕ್ಕೆ ಬಾರೆಂದು ಕರೆದರು.

"ಬಾ, ನಮ್ಮೊಂದಿಗೆ ಯುದ್ಧಮಾಡು. ಯುದ್ಧ ಮಾಡಲು ಕೈಲಾಗದೆ ಹೋದ ಪಕ್ಷದಲ್ಲಿ ನಿನ್ನ ಪದ್ಮಾಸನವನ್ನು ಬಿಟ್ಟು ಎತ್ತಾದರೂ ಹೊರಟುಹೋಗು" ಎಂದರು ಬ್ರಹ್ಮನೊಂದಿಗೆ ಆ ರಾಕ್ಷಸರು.

ಬ್ರಹ್ಮನು ಹೆದರಿ ಯೋಗಸಮಾಧಿಯಲ್ಲಿದ್ದ ವಿಷ್ಣುವನ್ನು ನೋಡಿ, "ಅಪ್ಪಾ! ಏಳು ಏಳು! ಇಬ್ಬರು ರಾಕ್ಷಸರು ನನ್ನನ್ನು ಕೊಲ್ಲುವುದಕ್ಕೇ ಬಂದಿದ್ದಾರೆ. ನನ್ನನ್ನು ಕಾಪಾಡು ತಂದೆಯೇ!" ಎಂದು ಬೇಡಿಕೊಂಡನು.

ಬ್ರಹ್ಮನ ಕೂಗಿಗೆ ವಿಷ್ಣು ಯೋಗನಿದ್ರೆಯಿಂದ ಎಚ್ಚರವಾಗಲಿಲ್ಲ. ಆಗ ಬ್ರಹ್ಮನಿಗೆ ವಿಷ್ಣುವನ್ನು ಆಕ್ರಮಿಸಿದುದು ಆದಿಶಕ್ತಿಯ ಯೋಗನಿದ್ರೆ ಎಂದು ತಿಳಿಯಿತು. ಆಗ ಅವನು ಆದಿಶಕ್ತಿಯಾದ ಯೋಗನಿದ್ರೆಯನ್ನೇ ಪ್ರಾರ್ಥಿಸತೊಡಗಿದನು.

"ತಾಯೇ! ಈ ರಾಕ್ಷಸರ ಕಾಟದಿಂದ ನನ್ನನ್ನು ಕಾಪಾಡಲು ಮಹಾವಿಷ್ಣುವನ್ನು ಎಬ್ಬಿಸು. ಅಥವಾ ನೀನಾದರೂ ಬಂದು ನನ್ನನ್ನು ಕಾಪಾಡು" ಎಂದು ಮೊರೆಯಿಟ್ಟನು ಬ್ರಹ್ಮ.

ಕೂಡಲೇ ಯೋಗನಿದ್ರೆ ವಿಷ್ಣುವನ್ನು ಬಿಟ್ಟು ಹೊರಟುಹೋದಳು. ಮರುಕ್ಷಣದಲ್ಲಿ ವಿಷ್ಣು ನಿದ್ರೆಯಿಂದ ತಟ್ಟನೆದ್ದು ಕುಳಿತನು. ಅದನ್ನು ನೋಡಿ ಬ್ರಹ್ಮನಿಗೆ ಪರಮಾನಂದವಾಯಿತು. ಮಹಾವಿಷ್ಣುವಿನ ಮುಂದೆ ಸಾಷ್ಟಾಂಗ ನಮಸ್ಕಾರ ಮಾಡಿದನು.





# ದೇವೀಭಾಗವತ

ಈ ರೀತಿಯಾಗಿ ಪುರಾಣ ಹೇಳುತ್ತಿರುವ ಸೂತ ಪುರಾಣಿಕನನ್ನು. ಶೌನಕಾದಿಮುನಿಗಳು ನಡುವೆ ತಡೆದು ಹೀಗೆಂದರು: "ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳು ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಕರಾದವರೆಂದು, ಆ ಮೂವರಲ್ಲಿ ವಿಷ್ಣುವೇ ಉತ್ತಮನೆಂದು ಕೇಳಿದ್ದೇವೆ. ಅಂತಹ ಮಹಾವಿಷ್ಣುವನ್ನು ಯೋಗನಿದ್ರೆ, ವಶಪಡಿಸಿಕೊಳ್ಳುವಾಗ, ವಿಷ್ಣುವಿನ ಮಹಾಶಕ್ತಿಗಳೆಲ್ಲ ಏನಾದುವು? ಇಷ್ಟಕ್ಕೂ ಆದಿಶಕ್ತಿಗೆ ವಿಷ್ಣುವನ್ನೂ ಮೀರಿಸುವಂತಹ ಶಕ್ತಿ ಹೇಗೆ ಬಂದಿತು? ನಾರದನೇ ಮೊದಲಾದ ದೇವತೆಗಳ ನಿಕಟವರ್ತಿಗಳಾದವರು ವಿಷ್ಣುವೇ ಕಾರಣಗಳಿಗೆಲ್ಲಾ ಕಾರಣನೆಂದು ಹೇಳುತ್ತಾರಲ್ಲಾ? ನೀವೇನೋ ಶಕ್ತಿಯೇ ಎಲ್ಲದಕ್ಕೂ ಕಾರಣವೆನ್ನುವಿರಿ? ನಿಜವು ಏನೆಂಬುದು ನಮಗೆ ಗೊತ್ತಾಗುವಂತೆ ಹೇಳಬೇಕು"

## ಶಕ್ತಿಯ ಸ್ವರೂಪ

ಮುನಿಗಳ ಮಾತಿಗೆ ಸೂತನು ಹೀಗೆಂದು ಹೇಳಿದನು: ಮುನಿಗಳೇ ನಿಮ್ಮ ನ್ಯಾಯವಾದ ಕುತೂಹಲಗಳಿಗೆ ಸಂತೋಷವಾಗಿದೆ. ನೀವು ಕೇಳಿದುದಕ್ಕೆ ಸಮಾಧಾನಗಳನ್ನು ಹೇಳುತ್ತೇನೆ, ಶ್ರದ್ಧೆಯಿಂದ ಕೇಳಿರಿ. ನಾರದನೇ ಮೊದಲಾದವರು ಅನಂತವಾಗಿರುವ ಶಕ್ತಿಯ ಪ್ರಭಾವವನ್ನು ಅರ್ಥಮಾಡಿಕೊಳ್ಳಲಾಗದೆ, ತಮಗೆ ಅರ್ಥವಾದ ವಿಷ್ಣುವನ್ನೇ ಸರ್ವಶಕ್ತಿವಂತನೆಂದು ಭ್ರಮೆ ಪಟ್ಟಿದ್ದಾರೆ. ಹಾಗೆಯೇ ಕೆಲವರು ಶಿವನೇ ಪರದೈವವೆಂದೂ, ಮತ್ತೆ ಕೆಲವರು ಸೂರ್ಯನೆಂದೂ. ಇನ್ನು ಕೆಲವರು ಅಗ್ನಿಯೆಂದೂ, ಬೇರೆ ಕೆಲವರು ಚಂದ್ರನೆಂದೂ, ಇಂದ್ರನೆಂದೂ, ಉಳಿದವರು ಇನ್ನೂ ಯಾವ ಯಾವುದೋ ಎಂದೂ, ಮಾಯೆಯಲ್ಲಿ ಬಿದ್ದು ಬಗೆಬಗೆಯಾಗಿ ಅಭಿಪ್ರಾಯ ಪಡುತ್ತಾರೆ. ಅವರವರ ಶಕ್ತಿಗೆ ತಕ್ಕ ಹಾಗೆ ಈ ಅಭಿಪ್ರಾಯಗಳಿಂದ ತಪ್ಪಿಲ್ಲವೆನಿಸಿದರೂ. ಎಲ್ಲಾ ಪ್ರಮಾಣಗಳಿಗೂ ಅತೀತವಾದ ಆ ಪರಶಕ್ತಿಯೊಂದೇ ನಿಜವಾದ ಶಕ್ತಿ. ಅದು ವಿಷ್ಣುವಿನಲ್ಲಿಯೂ. ಶಿವನಲ್ಲಿಯೂ. ಸೂರ್ಯನಲ್ಲಿಯೂ. ವಾಯುವಿನಲ್ಲಿಯೂ ಅಗ್ನಿಯಲ್ಲಿಯೂ ಸೇರಿ

೨. ಮಧುಕೈಟಭರ ವಧೆ



ಕೊಂಡಿದೆ. ಅಂತಹ ಶಕ್ತಿಯಿಂದ ಎಚ್ಚರಿಸಲ್ಪಟ್ಟ ವಿಷ್ಣು, ತನ್ನ ಬಳಿ ನಿಂತಿದ್ದ ಬ್ರಹ್ಮನನ್ನು ನೋಡಿ, "ಏನಿದು ಬ್ರಹ್ಮಾ, ನೀನು ತಪಸ್ಸು ಮಾಡುವುದನ್ನು ಬಿಟ್ಟು ಹೀಗೆ ಬಂದ ಕಾರಣವೇನು?" ಎಂದು ಕೇಳಿದನು.

"ದೇವದೇವಾ! ನನಗೆ ಇನ್ನೆಲ್ಲಿಯ ತಪಸ್ಸು? ನಿನ್ನ ಕಿವಿಗಳಿಂದ ಉದ್ಭವಿಸಿದ ಮಧುಕೈಟಭರೆಂಬ ಇಬ್ಬರು ರಾಕ್ಷಸರು ನನ್ನನ್ನು ಕೊಲ್ಲುವೆವೆನ್ನುತ್ತ, ಯುದ್ಧಕ್ಕೆ ಕರೆಯುತ್ತಿದ್ದಾರೆ" ಎಂದನು ಬ್ರಹ್ಮ.

"ಇಷ್ಟೊಂದು ಸಣ್ಣ ವಿಷಯಕ್ಕೆ ಹೆದರುವೆಯಾ? ನಾನು ಎಷ್ಟುಮಂದಿ ರಾಕ್ಷಸರನ್ನು ಕೊಂದಿದ್ದೇನೆ! ಇದೇನು ಮಹಾ?" ಎಂದು ವಿಷ್ಣು ಹೇಳುವಷ್ಟರಲ್ಲಿ ಆ ರಾಕ್ಷಸರು ಅಲ್ಲಿಗೇ ರಭಸದಿಂದ ಬಂದುಬಿದ್ದು, ಬ್ರಹ್ಮನನ್ನು ನೋಡಿ, "ಇಲ್ಲಿಗೆ ಓಡಿ ಬಂದು ಅಡಗಿರುವೆಯಾ? ನಾವು ಕಂಡುಹಿಡಿಯದಿರುವೆವೇ? ಏನು ಕತೆ? ಇವನು ನಿನ್ನನ್ನು ರಕ್ಷಿಸುವನಂತೇನು? ಸಾಯಲಿರುವ ನೀನು ಒಬ್ಬನೇ ಸಾಯುವ ಬದಲಿಗೆ ಇವನನ್ನೂ ಜತೆಯಲ್ಲಿ ಸಾಯಿಸುವೆಯೇನು? ವೀರನಾದರೆ ಬಾ ಮುಂದೆ. ನಮ್ಮೊಂದಿಗೆ ಯುದ್ಧಮಾಡು. ಇಲ್ಲದಿದ್ದರೆ ನಮ್ಮ ದಾಸನಾದೆನೆಂದು ಒಪ್ಪಿಕೋ" ಎಂದು ಮೇಲೆ ಮೇಲೆ ಬೀಳಲು ಬಂದರು.

ವಿಷ್ಣು ಬ್ರಹ್ಮನನ್ನು ತನ್ನ ಹಿಂಗೆ ನಿಲ್ಲುವಂತೆ ಹೇಳಿ, ರಾಕ್ಷಸರೊಂದಿಗೆ, "ಬಾಯಿಗೆ ಬಂದ ಹಾಗೆ ಬೊಗಳುವಿರೇನಿದು? ಮದ ತಲೆಗೇರಿದೆಯೋ? ಅವಸರಪಡಬೇಡಿ. ನಿಮ್ಮ ತೀಟೆ ಚೆನ್ನಾಗಿ ತೀರಿಸಿಬಿಡುತ್ತೇನೆ" ಎಂದವನೇ ಯುದ್ಧಕ್ಕೆ ಎದ್ದನು.

ಮಹಾದೇವಿ ಆಕಾಶದಲ್ಲಿ ನೋಡುತ್ತಿರಲು, ವಿಷ್ಣು ಮಧುವಿನೊಂದಿಗೆ ಯುದ್ಧಕ್ಕೆ ತೊಡಗಿದನು. ಅವರ ಯುದ್ಧಹತಿಗಳಿಂದ ಸುಳಿಗಾಳಿಯೆದ್ದು ಸಮುದ್ರವು ಉಕ್ಕಿಹೊರಳಾಡತೊಡಗಿತು. ಮಧು ದಣಿದು ಉಸಿರುಬಿಡುವುದನ್ನು ನೋಡಿ ಕೈಟಭನು ವಿಷ್ಣುವಿನೊಂದಿಗೆ ಮಲ್ಲಯುದ್ಧಕ್ಕೆ ಬಂದನು. ಸ್ವಲ್ಪಹೊತ್ತಿನಲ್ಲಿ ರಾಕ್ಷಸರಿಬ್ಬರೂ ವಿಷ್ಣುವಿನೊಂದಿಗೆ ಕಲೆಬಿದ್ದು ಹೋರಾಡುತ್ತಿರಲು, ಕ್ರಮವಾಗಿ ವಿಷ್ಣುವಿಗೆ ಆಯಾಸವಾಗತೊಡಗಿತು. ಮುಂದೇನು ಮಾಡುವುದೆಂದು ವಿಷ್ಣುವಿಗೆ ಗೊತ್ತಾಗಲಿಲ್ಲ. ಈ ರಾಕ್ಷಸರನ್ನು ಹೇಗೆ ಕೊಲ್ಲಲಿ? ತನಗಿನ್ನು ಯಾರು ದಿಕ್ಕು? ಹೀಗೆಂದು ವಿಷ್ಣು ಕಳವಳಿಸತೊಡಗಿದನು.

ವಿಷ್ಣುವಿನ ಮುಖದಲ್ಲಿ ಚಿಂತೆ ಸುಳಿದುದನ್ನು ನೋಡಿ ರಾಕ್ಷಸರು ಅವನೊಂದಿಗೆ, "ಸಾಕುಬಿಡು. ಯುದ್ಧಮಾಡಲು ನಿನ್ನಿಂದಾಗದೆ ಹೋದರೆ ದಾಸೋಹಂ ಅಂತ ಅಡ್ಡ ಬಿದ್ದುಬಿಡು. ಇಲ್ಲದಿದ್ದರೆ ನಿನ್ನನ್ನು ಕೊಂದು ಆಮೇಲೆ ಬ್ರಹ್ಮನನ್ನು ತೀರಿಸುತ್ತೇವೆ" ಎಂದರು.

ವಿಷ್ಣು ಸೌಮ್ಯಸ್ವರದಲ್ಲಿ ಅವರೊಂದಿಗೆ, "ಸ್ವಲ್ಪ ಆಯಾಸದಲ್ಲಿದ್ದೇನೆ ಅಷ್ಟೇ. ಆಯಾಸಗೊಂಡವ

ರನ್ನೂ, ಹಿಂದೆ ತಿರುಗಿದವರನ್ನೂ, ಹೆದರಿದವರನ್ನೂ, ಯುದ್ಧದಲ್ಲಿ ಬಿದ್ದುಬಿಟ್ಟವರನ್ನೂ ಇದಿರಿಸುವುದು ವೀರಧರ್ಮವಲ್ಲವಷ್ಟೆ ? ಅದು ಹಾಗಿರಲಿ, ನೀವಂತೂ ಇಬ್ಬರಿದ್ದೀರಿ. ನಾನೋ ಒಬ್ಬನೇ. ಒಂದು ನಿಮಿಷ ವಿಶ್ರಾಂತಿ ತೆಗೆದುಕೊಂಡು ಯುದ್ಧಮಾಡುತ್ತೇನೆ. ಸ್ವಲ್ಪ ಸಹನೆಯಿಂದಿರಿ. ನಿಮಗೆ ಮಾತ್ರ ಯುದ್ಧಧರ್ಮ ಗೊತ್ತಿಲ್ಲವೇನು ?" ಎಂದನು.

"ಸರಿ ಸರಿ ! ವಿಶ್ರಾಂತಿ ತಕ್ಕೋ ! ನಾವೂ ಸ್ವಲ್ಪ ವಿಶ್ರಮಿಸಿಬಿಡುತ್ತೇವೆ" ಎಂದರು ರಾಕ್ಷಸರು. ವಿಷ್ಣು ರಾಕ್ಷಸರ ಬಲವನ್ನು ಎಣಿಕೆ ಹಾಕುತ್ತ, ದಿವ್ಯದೃಷ್ಟಿಯಿಂದ ನೋಡಿ, ಇವರು ವರ ಬಲಪಡೆದವರೆಂಬುದನ್ನು ಅರಿತು, "ಸುಮ್ಮಸುಮ್ಮನೆ ಇವರ ಹತ್ತಿರ ಯುದ್ಧಮಾಡಿದೆನಲ್ಲ ! ಇವರು ಸ್ವೇಚ್ಛಾಮರಣವನ್ನು ವರವಾಗಿ ಪಡೆದವರು. ಇಂಥವರನ್ನು ಹೇಗೆ ಕೊಲ್ಲಲಿ ?" ಎಂದು ಆಂದೋಳನೆಗೊಳಗಾದನು. ಕಡೆಗೆ ವಿಷ್ಣು ಜಗದಂಬೆಯನ್ನು ಪ್ರಾರ್ಥಿಸತೊಡಗಿದನು. "ಅಮ್ಮಾ, ನಿನ್ನ ಸಹಾಯವಿಲ್ಲದೆ ಈ ರಾಕ್ಷಸರನ್ನು ಕೊಲ್ಲಲು ನನ್ನಿಂದ ಸಾಧ್ಯವಿಲ್ಲ. ಬಹುಶಃ ಇವರೇ ನನ್ನನ್ನು ಕೊಲ್ಲುವ ಹಾಗಿದೆ. ಇವರಿಗೆ ವರ ಕೊಟ್ಟವಳು ನೀನೇ ಅಲ್ಲವೇ ? ಇವರು ಸಾಯುವ ಉಪಾಯ ಕೂಡಾ ನೀನೇ ಹೇಳಬೇಕು."

ಹೀಗೆ ದೀನನಾಗಿ ಬೇಡುವ ವಿಷ್ಣುವನ್ನು ನೋಡಿ ದೇವಿ ಕಿರುನಗೆ ನಕ್ಕು, "ಯುದ್ಧಮಾಡುತ್ತಿರು. ನಾನು ಈ ರಾಕ್ಷಸರ ಮೇಲೆ ನನ್ನ ಮಾಯೆಯನ್ನು ಹರಡುತ್ತೇನೆ. ಆಗ ಅವರನ್ನು ಜಯಿಸಬಹುದು. ನಿನ್ನ ಬುದ್ಧಿ ಶಕ್ತಿಯೂ ಹರಿತವಾಗಿರಲಿ" ಎಂದಳು.

ರಾಕ್ಷಸರು ವಿಷ್ಣುವಿನೊಂದಿಗೆ, "ಎಷ್ಟು ಹೊತ್ತಯ್ಯಾ ವಿಶ್ರಾಂತಿ ? ಸೋತು ಹೋಗುವೆನೆಂದು ಏಕೆ ಹೆದರುವೆ ? ಶೂರರಿಗೆ ಜಯವೂ ಅಪಜಯವೂ ಸಹಜವೇ. ಎರಡನ್ನೂ ಸಮಾನವಾಗಿ ನೋಡಬೇಕು. ನೀನೇನೋ ಮಹಾಶೂರನೇ !



ಎಷ್ಟೋ ರಾಕ್ಷಸರನ್ನು ಕೊಂದವನಲ್ಲವೇ ? ಹಾಗಂತ ಯಾವಾಗಲೂ ಜಯವೇ ಸಿಗುವುದೇನು ?" ಎಂದು ತಿವಿನುಡಿಗಳನ್ನಾಡಿದನು.

## ಮಧುಕೈಟಭರ ಯುದ್ಧ

ರಾಕ್ಷಸರ ಮಾತುಗಳಿಂದ ವಿಷ್ಣು ಮಹಾಕೋಪದಿಂದ ಗರ್ಜಿಸಿ, ರಾಕ್ಷಸರ ಮೇಲೆ ಹಾರಿಬಿದ್ದನು. ಮುಷ್ಟಿಗಳಿಂದ ಸಿಡಿಲಿನಂತೆ ಗುದ್ದಿದನು. ರಕ್ತ ಒಸರುತ್ತಿರಲು ರಾಕ್ಷಸರು ಕೂಡಾ ವಿಷ್ಣುವಿನ ಎದೆಗೆ ಗುದ್ದಿದರು. ಹೀಗೆ ಬಹಳ ಕಾಲ ಮುಷ್ಟಿಯುದ್ಧ ಸಾಗಿತು. ವಿಷ್ಣುವಿನ ಶರೀರದಲ್ಲಿ ರಕ್ತ ಹರಿಯುತ್ತಿರಲು, ಆಯಾಸದಿಂದ ಆಕಾಶದಲ್ಲಿರುವ ದೇವಿಯನ್ನು ನೋಡಿದನು.

ಅದೇ ಸಮಯದಲ್ಲಿ ದೇವಿ ರಾಕ್ಷಸರ ಮೇಲೆ ಮನ್ಮಥ ಬಾಣಗಳಂತಹ ದೃಷ್ಟಿಯನ್ನು ಪಸರಿಸಿದಳು. ಅದರಿಂದ ಪರವಶರಾದ ರಾಕ್ಷಸರು ಯುದ್ಧದ ಮಾತು ಮರೆತು ಮೋಹಪಾಶಕ್ಕೆ ಸಿಕ್ಕಿಕೊಂಡರು.



ಆ ಸ್ಥಿತಿಯಲ್ಲಿ ವಿಷ್ಣು ಆ ರಾಕ್ಷಸರೊಂದಿಗೆ, "ನಾನು ಎಷ್ಟೋ ಮಂದಿ ರಾಕ್ಷಸರನ್ನು ನೋಡಿರುವೆನಾದರೂ ಯುದ್ಧವಿದ್ಯೆಯಲ್ಲಿ ನಿಮಗೆ ಸಮಾನರಾದವರನ್ನು ನೋಡಲಿಲ್ಲ. ನಿಮ್ಮ ಯುದ್ಧನೈಪುಣ್ಯ ನೋಡಿ ನನಗೆ ಬಹಳ ಸಂತೋಷವಾಗಿದೆ. ನಿಮಗೇನಾದರೂ ಆಸೆಯಿದ್ದರೆ ಕೇಳಿರಿ. ನಿಮ್ಮ ಪ್ರಿಯವಾದ ಆಸೆ ನೆರವೇರುವ ಹಾಗೆ ವರ ಕೊಡುತ್ತೇನೆ" ಎಂದನು.

ದೇವಿಯ ಪ್ರಭಾವದಿಂದ ಮಾಯಾಮೋಹಿತರಾದ ಆ ರಾಕ್ಷಸರು, ವಿಷ್ಣುವಿನ ಮಾತು ಕೇಳಿ ಅಭಿಮಾನದಿಂದ ಬೀಗಿ, ವಿಷ್ಣುವನ್ನು ತಿರಸ್ಕಾರದಿಂದ ನೋಡುತ್ತ, "ನಾವು ನಿನ್ನನ್ನು ಕೇಳಿ ಪಡೆದುಕೊಳ್ಳುವವರೆಂಬಷ್ಟು ಗರ್ವವೋ ನಿನಗೆ? ನೀನು ನಮಗೆ ವರ ಕೊಡುವವನೇನು? ಬೇಕಾದರೆ ನೀನೇ ಕೇಳು. ನಾವು ಕೊಡುತ್ತೇವೆ" ಎಂದರು.

"ನಾನು ಕೇಳುವುದನ್ನು ನೀವು ಕೊಡುವಿರಾ? ನನ್ನ ಯುದ್ಧವನ್ನು ನೋಡಿ ನಿಮಗೆ ಆನಂದವಾಗಿರುವುದು ನಿಜವಾದ ಪಕ್ಷದಲ್ಲಿ ನನ್ನ ಕೈಯಲ್ಲಿ ನಿಮ್ಮ ಜೀವ ಹೋಗಬೇಕು. ಧೈರ್ಯವಿದ್ದರೆ ಕೊಡಿರಿ ನಿಮ್ಮ ಜೀವ" ಎಂದನು ವಿಷ್ಣು.

ರಾಕ್ಷಸರು ಕಳವಳಪಟ್ಟು ತುಸು ಆಲೋಚಿಸಿ, "ಕೊಡುತ್ತೇವೆ. ನಾವು ಮಾತು ತಪ್ಪುವವರಲ್ಲ. ನೀನು ಕೂಡಾ ಮಾತು ತಪ್ಪದವನಾಗಿದ್ದರೆ ನಮಗೆ ಕೊಡುವುದಾಗಿ ಹೇಳಿದ ವರವನ್ನು ಈಗ ಕೊಡು. ನೀರಿಲ್ಲದ ವಿಶಾಲಪ್ರದೇಶದಲ್ಲಿ ನಮ್ಮನ್ನು ಕೊಲ್ಲು. ಹಾಗಾದರೇನೇ ನಾವು ನಿನ್ನ ಕೈಯಲ್ಲಿ ಸಾಯುತ್ತೇವೆ" ಎಂದರು.

ವಿಷ್ಣು ನಗುತ್ತ ತನ್ನ ತೊಡೆಗಳನ್ನು ತಟ್ಟಿ ಬೆಳೆಸುತ್ತ "ರಾಕ್ಷಸರೇ, ಬನ್ನಿ ನನ್ನ ತೊಡೆಯ ಮೇಲೆ" ಎಂದನು.

ರಾಕ್ಷಸರು ತಮ್ಮ ಶರೀರವನ್ನು ವಿಷ್ಣುವಿನ ತೊಡೆಗಳಿಗಿಂತಲೂ ದೊಡ್ಡದಾಗಿ ಬೆಳೆಸುತ್ತ ಹೋದರು. ವಿಷ್ಣು ತನ್ನ ತೊಡೆಗಳನ್ನು ಅವರಿಗಿಂತ ಮೇಲೆ ಬೆಳೆಸಿದನು. ಕಟ್ಟಕಡೆಗೆ ರಾಕ್ಷಸರ ಶರೀರಗಳಿಗಿಂತ ವಿಷ್ಣುವಿನ ತೊಡೆಗಳೇ ದೊಡ್ಡದಾದುವು. ಆಗ ವಿಷ್ಣು ತನ್ನ ಚಕ್ರವನ್ನು ಧ್ಯಾನಿಸಿದನು. ಕೂಡಲೇ ವಿಷ್ಣುಚಕ್ರವು ಬಂದು, ವಿಷ್ಣುವಿನ ತೊಡೆಯ ಮೇಲಿದ್ದ ಇಬ್ಬರು ರಾಕ್ಷಸರ ತಲೆಗಳನ್ನೂ ಕತ್ತರಿಸಿಬಿಟ್ಟಿತು. ಬೆಳೆದ ಅವರ ಮೆದುಳಿನ ಮುದ್ದೆಗಳೇ ನೀರಿಗೆ ಬಿದ್ದು ಭೂಮಿಯಾಯಿತು. ಆದುದರಿಂದಲೇ ಭೂಮಿಗೆ "ಮೇದಿನಿ" ಎಂಬ ಹೆಸರು ಬಂತು. ಮಣ್ಣು ತಿನ್ನಬಾರದ ವಸ್ತುವಾದುದೂ ಆಗಿನಿಂದಲೇ.

### ವ್ಯಾಸನ ತಪಸ್ಸು

ಹೀಗೆ ಸೂತನು ಹೇಳಿ ಮುಗಿಸಲು ಶೌನಕಾದಿಗಳು ಅವನನ್ನು ಕುರಿತು, "ಮಹನೀಯರೇ, ಪ್ರಸಂಗವಶಾತ್ ಬೇರೆಬೇರೆ ಅಪೂರ್ವ ವಿವರಗಳನ್ನು ನಿಮ್ಮಿಂದ ಕೇಳಿದೆವು. ಇನ್ನು ಪುತ್ರವಾಂಛೆಯಿಂದ

ತಪಸ್ಸು ಮಾಡಲು ಹೋದ ವ್ಯಾಸನ ಸಂಗತಿ ಹಾಗೇ ಉಳಿದಿದೆ. ಅದನ್ನು ದಯವಿಟ್ಟು ಮುಂದುವರಿಸಿರಿ" ಎಂದರು. ಸೂತನು ಹೀಗೆಂದನು:

ನಾರದನು ಹೇಳಿದ ಮಂತ್ರವನ್ನು ಜಪಿಸುತ್ತಾ ಸುವರ್ಣಗಿರಿಯ ಮೇಲೆ ಕರ್ಣಿಕಾರವನದಲ್ಲಿ ವ್ಯಾಸನು ತಪಸ್ಸು ಮಾಡಲು ಪ್ರಾರಂಭಿಸಿದನು. ಆತನು ಶಕ್ತಿದೇವಿಯನ್ನು ಮನಸ್ಸಿನಲ್ಲಿ ನಿಲ್ಲಿಸಿ ತಪಸ್ಸು ಮಾಡಿಕೊಂಡಿರುವಾಗ, ಆತನ ತಪೋಜ್ವಾಲೆಗೆ ಭೂವ್ಯಾಕಾಶಗಳು ಕಂಪಿಸಿದುವು. ಇಂದ್ರನಂತೂ ತುಂಬ ಹೆದರಿ ಇತರ ದೇವತೆಗಳನ್ನು ತನ್ನೊಂದಿಗೆ ಕರೆದುಕೊಂಡು ಶಿವನ ಬಳಿಗೆ ಹೋಗಿ, "ಮಹಾದೇವಾ! ವ್ಯಾಸನು ತೀವ್ರವಾದ ತಪಸ್ಸಿನಲ್ಲಿ ಪ್ರಪಂಚವನ್ನು ಸುಡುತ್ತಿರುವನು. ಬಹುದೊಡ್ಡ ಅಪಾಯ ಬರಲಿದೆ. ನಮ್ಮನ್ನು ನೀನೇ ಕಾಪಾಡಬೇಕು" ಎಂದು ಪ್ರಾರ್ಥಿಸಿದನು.

"ಏನಾದರೂ ತಪಸ್ಸಿನಲ್ಲಿರುವವರಿಗೆ ಕೆಡುಕು ಮಾಡುವುದು ತಪ್ಪು. ಅವರು ಬೇರೆಯವರಿಗೆ ಕೆಡುಕು ಮಾಡಲಾರರು. ವ್ಯಾಸನು ಪುತ್ರನಿಗಾಗಿ ಶಕ್ತಿಯೊಂದಿಗೆ ಕೂಡಿದ ನನ್ನನ್ನು ಕುರಿತು ತಪಸ್ಸು ಮಾಡುತ್ತಿದ್ದಾನೆ. ನಾನು ಹೋಗಿ ನೋಡುತ್ತೇನೆ" ಎಂದು ದೇವತೆಗಳಿಗೆ ಅಭಯವಿತ್ತು, ಶಿವನು ವ್ಯಾಸನ ಮುಂದೆ ಪ್ರತ್ಯಕ್ಷನಾದನು. ಶಿವನಿಂದ ಪುತ್ರಭಾಗ್ಯ ಪಡೆಯುವ ವರವನ್ನು ಹೊಂದಿದ ಮೇಲೆ ವ್ಯಾಸನು ತನ್ನ ಆಶ್ರಮಕ್ಕೆ ಹಿಂದಿರುಗಿದನು.

ಆಶ್ರಮದಲ್ಲಿ ವ್ಯಾಸನು ಅರಣಿ ಮಥಿಸಿ ಅಗ್ನಿಯನ್ನು ಬೆಳಗಿಸಿ, ಇಂತಹ ಅಗ್ನಿಯಂತೆ ಬೆಳಗುವ ಮಗನನ್ನು ತನಗೆ ಕೊಡುವಂತಹ ಸ್ತ್ರೀ ಯಾವಳೋ? ಆದರೂ ಸ್ತ್ರೀಯ ಸಂಬಂಧವು ತನಗೆ ಪ್ರತಿಬಂಧಕವೇ! ಅದಕ್ಕೇನು ಉಪಾಯವೆಂದು ಆಲೋಚಿಸುತ್ತಿರುವಾಗ, ಆಕಾಶದಲ್ಲಿ ಘೃತಾಚಿ ಎಂಬ ದೇವಸುಂದರಿ ಕಾಣಿಸಿದಳು. ಅವಳ ಸಮೀಪದಲ್ಲಿ



ಮನ್ಮಥನೂ ಇದ್ದನು. ಆ ಮನ್ಮಥನ ಪ್ರಭಾವದಿಂದ ವ್ಯಾಸನು ಪರವಶನಾಗಿ ಕೂಡ, ಸುಧಾರಿಸಿಕೊಳ್ಳುತ್ತ, "ಇವಳು ನನ್ನನ್ನು ಭಪ್ಪಗೊಳಿಸಲಿಕ್ಕಾಗಿಯೇ ಬಂದಿರಬೇಕು. ಆದರೂ ಇವಳೊಂದಿಗೆ ಸ್ವಲ್ಪಕಾಲ ಸುಖವಾಗಿರುವುದರಿಂದ ನಷ್ಟವೇನಿಲ್ಲ. ಹಾಗಂತ ಇವಳನ್ನು ನನ್ನೊಂದಿಗೇ ಇಟ್ಟುಕೊಂಡರೆ ಇತರ ಮುನಿಗಳು ನಗುತ್ತಾರೇನೋ? ಅವರು ನಕ್ಕ ಮಾತ್ರಕ್ಕೆ ನನಗಾಗುವ ನಷ್ಟವೇನಿದೆ? ಬರಲಿ, ಬಂದ ಮಾತ್ರಕ್ಕೆ ಇವಳು ನನ್ನ ಮೇಲೆ ಮನಸ್ಸಿಟ್ಟು, ಸುಖನೀಡುವಳೆಂದು ಹೇಗೆ ನಂಬುವುದು? ಹಿಂದೆ ಊರ್ವಶಿ ಪುರೂರವನಿಗೆ ಮಾಡಿದ ಹಾಗೆ ವಿರಹವೇದನೆಯಲ್ಲಿ ಮುಳುಗಿಸಿಬಿಡುವಳೋ? ಪುತ್ರನೇನೋ ಬೇಕು, ಹೆಣ್ಣು ಮಾತ್ರ ಬೇಡವೆಂದರೆ ಹೇಗೆ ಸಾಧ್ಯವೋ? ಅದಕ್ಕೇನು ಉಪಾಯವೋ?" ಎಂದು ತನ್ನೊಳಗೇ ಮಥನಪಡಲಾರಂಭಿಸಿದನು. ಆಗ ಶೌನಕಾದಿ ಮುನಿಗಳು ಸೂತನ ಮಾತಿಗೆ



ಅಡ್ಡ ಬಂದು, "ಆ ಪುರೂರವನು ಯಾರು ? ಅವ ನಿಗೇನಾಯಿತು ?" ಎಂದು ಕೇಳಿದರು. ಸೂತನು ಹೀಗೆ ಹೇಳಿದನು:

## ಬುಧನ ಜನ್ಮ

ದೇವಗುರುವಾದ ಬೃಹಸ್ಪತಿಗೆ ತಾರೆ ಎಂಬ ತ್ರಿಲೋಕಸುಂದರಿ ಹೆಂಡತಿಯಾಗಿದ್ದಳು. ಒಂದು ದಿನ ಅವಳು ಬೃಹಸ್ಪತಿಯ ಶಿಷ್ಯನಾದ ಚಂದ್ರನ ಮನೆಗೆ ಹೋದಳು. ಅವಳನ್ನು ನೋಡಿ ಚಂದ್ರನು ಮೋಹ ಗೊಂಡನು. ಅವಳೂ ಚಂದ್ರನನ್ನು ಮೋಹಿಸಿದ್ದಳು. ಇಬ್ಬರ ಮನಸ್ಸುಗಳೂ ಒಂದಾದುದರಿಂದ ತಾರೆ ಚಂದ್ರನ ಮನೆಯಲ್ಲೇ ಇದ್ದುಬಿಟ್ಟಳು.

ಅವಳು ಮತ್ತೆ ತನ್ನ ಮನೆಗೆ ಹಿಂದಿರುಗಿ ಬಾರದಿರುವುದನ್ನು ನೋಡಿ, ಬೃಹಸ್ಪತಿ ಅವಳನ್ನು ಕರೆದುಕೊಂಡು ಬರಲು ಒಬ್ಬ ಶಿಷ್ಯನನ್ನು ಕಳುಹಿಸಿದನು. ತಾರೆ ಶಿಷ್ಯನ ಮಾತನ್ನು ಲಕ್ಷ್ಯಮಾಡದೆ ಶಿಷ್ಯನನ್ನು ಸುಮ್ಮನೆ ಹಿಂದಿರುಗಿಸಿಬಿಟ್ಟಳು. ಬೃಹಸ್ಪತಿ ಮತ್ತೆ ಅನೇಕ ಮಂದಿಯನ್ನು ಕಳುಹಿಸಿದರೂ ಏನೂ ಪ್ರಯೋಜನವಾಗಲಿಲ್ಲ. ಕಡೆಗೆ ಬೃಹಸ್ಪತಿ ಕೋಪದಿಂದ ಉರಿಯುತ್ತ ತಾನೇ ಚಂದ್ರನ ಮನೆಗೆ ಹೋದನು. ಅವನನ್ನು ನೋಡಿ ಚಂದ್ರನು "ನೀವೇ ಬಂದಿರೇನು ?" ಎಂದು ಗಹಗಹಿಸಿ ನಕ್ಕನು.

ಬೃಹಸ್ಪತಿ ಸಂತಾಪದಿಂದ, "ಎಲೋ ಗುರುದ್ರೋಹಿ ! ಗುರುಪತ್ನಿ ತಾಯಿಗೆ ಸಮಾನಳೆಂದು ತಿಳಿಯದೇನು ? ಬ್ರಾಹ್ಮಣನನ್ನು ಕೊಲ್ಲುವವನೂ, ಹೆಂಡಕುಡುಕನೂ, ಚಿನ್ನವನ್ನು ಅಪಹರಿಸುವವನೂ, ಗುರುಪತ್ನಿಯನ್ನು ಬಯಸುವವನೂ, ಈ ನಾಲ್ವರೊಂದಿಗೆ ಸ್ನೇಹಮಾಡುವವನೂ ಪಂಚ ಮಹಾಪಾತಕರು ! ಇನ್ನು ನಿನಗೆಲ್ಲಿಯ ಸ್ವರ್ಗಪ್ರಾಪ್ತಿ ? ಈ ಸಂಗತಿ ತಿಳಿದರೆ ದೇವೇಂದ್ರನು ನಿನ್ನನ್ನು ಶಿಕ್ಷಿಸದೆ ಬಿಡಲಾರ !" ಎಂದನು.

ಅದಕ್ಕೆ ಚಂದ್ರನು ಶಾಂತಸ್ವರದಿಂದ, "ಸ್ವಾಮಿ ! ನಿಮ್ಮಂತಹ ಬ್ರಾಹ್ಮಣರಿಗೆ ಶಾಂತಗುಣವೇ ಚಂದ. ಕೋಪವೇ ಬರಬಾರದು. ಇವಳೇನು ಇಲ್ಲಿಯೇ ಇದ್ದುಬಿಡುವಳೇನು ? ನಾಳೆಯೋ ನಾಳಿದ್ದೋ ಬಂದೇ ಬರುತ್ತಾಳೆ. ನಾಲ್ಕಾರು ದಿನ ಇದ್ದ ಮಾತ್ರಕ್ಕೆ ಏನು ಮುಳುಗಿಹೋಯಿತು ?" ಎಂದನು.

ಚಂದ್ರನಿಗೆ ಏನು ಉತ್ತರ ಕೊಡುವುದೆಂದು ತೋರದೆ ಬೃಹಸ್ಪತಿ ಮನೆಗೆ ಹಿಂದಿರುಗಿದನು. ಮತ್ತೆ ಕೆಲವು ದಿನಗಳವರೆಗೆ ಹೆಂಡತಿಯ ದಾರಿ ನೋಡಿದನು. ಹೆಂಡತಿ ಬರಲೇ ಇಲ್ಲ. ಬೃಹಸ್ಪತಿಗೆ ವಿಚಾರದಿಂದ ತಲೆನೋವು ಹತ್ತಿತು. ಅವನು ತಡೆಯಲಾರದೆ ಮತ್ತೆ ಚಂದ್ರನ ಮನೆಗೆ ಹೋದನು. ಹೊರಗಿದ್ದ ಕಾವಲುಗಾರನು ಅವನನ್ನು ಮನೆಯೊಳಗೆ ಬಿಡಲಿಲ್ಲ.

ಆಗ ಬೃಹಸ್ಪತಿ ದೊಡ್ಡ ಕಂಠದಿಂದ "ಎಲವೋ ದುರುಳ ಚಂದ್ರಾ ! ಎಂಥಾ ಘೋರಪಾಪಕ್ಕೆ ಸೊಂಟ ಕಟ್ಟಿದೆಯೋ ? ನನ್ನ ಹೆಂಡತಿಯನ್ನು ನಾನು ನೋಡ

ಲಿಕ್ಕೂ ಇಲ್ಲದಂತೆ ಬಾಗಿಲಲ್ಲಿ ಅಡ್ಡಗಟ್ಟಿಸುವೆಯಾ? ನನ್ನ ಹೆಂಡತಿ ನಿನಗೆ ಸ್ವಂತದವಳಾಗುವುದೂ, ನನಗೆ ದೂರದವಳಾಗುವುದೂ ಎಲ್ಲಾದರೂ ಉಂಟೇ? ಶಾಪ ಕೊಟ್ಟು ನಿನ್ನನ್ನು ಏನು ಮಾಡುವೆನೋ ನೋಡು!" ಎಂದು ಕೂಗಿದನು.

ಆಗ ಚಂದ್ರನು ಹೊರಗೆ ಬಂದು, "ಏಕೆ ನನ್ನ ಹೆಂಡತಿ ನನ್ನ ಹೆಂಡತಿ ಅಂತ ಕೂಗುವಿರೋ? ಸಮಸ್ತ ಸುಲಕ್ಷಣಗಳಿಂದ ತುಂಬಿದ ತಾರೆ ನಿಮ್ಮಂಥ ದರಿದ್ರರ ಮನೆಯಲ್ಲಿರಲು ತಕ್ಕವಳೇನು? ನಿಮಗೆ ಹೆಂಡತಿ ಬೇಕಾದರೆ ತಕ್ಕವಳನ್ನು ಕಟ್ಟಿಕೊಂಡು ಸುಖವಾಗಿರಿ. ನೀವು ಎಲ್ಲಾ ಶಾಸ್ತ್ರಗಳನ್ನು ಓದಿಯೂ ಏನೂ ಪ್ರಯೋಜನವಿಲ್ಲ. ಹೆಣ್ಣು ತನಗೆ ತಕ್ಕವನೊಂದಿಗೇ ಇರುವಳೆಂದೂ ತಕ್ಕವನಲ್ಲದವನನ್ನು ಬಿಟ್ಟುಬಿಡುವಳೆಂದೂ ನಿಮಗೆ ಗೊತ್ತಿಲ್ಲದೆ ಹೋಯಿತು. ಇಷ್ಟು ಮಾತೇಕೆ? ನಾನು ತಾರೆಯನ್ನು ಬಿಟ್ಟುಕೊಡುವವನಲ್ಲ. ಮಾತಾಡದೆ ಹೋಗಿಬಿಡಿ. ಅಸೂಯೆಯಿಂದ ನೀವು ಕೊಡುವ ಶಾಪಗೀಪಗಳು ನನಗೆ ತಾಗಲಾರವು. ನಿಮ್ಮಿಷ್ಟ ಬಂದಂತೆ ಮಾಡಿರಿ!" ಎಂದು ಜಾಡಿಸಿ ಹೇಳಿದನು.

ಬೃಹಸ್ಪತಿ ಮತ್ತೇನೂ ಮಾಡಲಾಗದೆ ಇಂದ್ರನ ಬಳಿಗೆ ಹೋಗಿ ಕುಳಿತನು. ಇಂದ್ರನು ಅವನನ್ನು ಗೌರವದಿಂದ ಕೂಡಿಸಿ, "ಸ್ವಾಮೀ, ಚಿಂತೆಯಲ್ಲಿರುವಿರೇಕೆ?" ಎಂದು ಕೇಳಿದನು. "ಅದನ್ನು ಏನೆಂದು ಹೇಳಲಿ? ನನ್ನ ಹೆಂಡತಿಯನು ಚಂದ್ರನು ಅಪಹರಿಸಿ, ಕೇಳಿದರೆ ಬಿಡುವುದಿಲ್ಲ ಹೋಗೆನ್ನುತ್ತಾನೆ. ನನ ಹೆಂಡತಿಯನು ನನಗೆ ದಕ್ಕಿಸಬಲ್ಲೆಯಾ ಇಂದ್ರಾ?" ಎಂದನು ಬೃಹಸ್ಪತಿ.

"ನೀವು ಚಿಂತಿಸಬೇಡಿ ಸ್ವಾಮಿ. ನಾನು ನಿಮ್ಮ ಹೆಂಡತಿಯನ್ನು ಬಿಡಿಸುತ್ತೇನೆ. ಚಂದ್ರನು ವೊಂಡಿಗೆ ಇಳಿದರೆ ವಜ್ರಾಯುಧದಿಂದ ಹೊಡೆದು ಅವನ ಮದ ಅಡಗಿಸುತ್ತೇನೆ. ಇಷ್ಟೊಂದು ದುಷ್ಟತನವೇ ಅವನಿಗೆ?" ಎಂದು ಇಂದ್ರನು ಒಬ್ಬ ದೂತನಿಗೆ ಹೇಳತಕ್ಕುದನ್ನು ಹೇಳಿ ಚಂದ್ರನ ಬಳಿಗೆ ಕಳುಹಿಸಿದನು.

ಇಂದ್ರನ ದೂತನು ಇಂದ್ರನ ಮಾತಿನಂತೆ ಚಂದ್ರನಿಗೆ ಏನೇನೋ ನೀತಿಗಳನ್ನು ಹೇಳಿ, ತಾರೆಯನ್ನು ಹಿಂದಿರುಗಿಸಲು ಒತ್ತಾಯಿಸಿದನು. ಚಂದ್ರನು ಕೋಪದಿಂದ, "ಇಂದ್ರನು ಎಂತಹ ನೀತಿ ಮಾರ್ಗದವನೆಂಬುದು ನನಗೂ ಗೊತ್ತಿದೆ. ತಾರೆ ನನ್ನ ಪ್ರೇಮವನ್ನು ನಂಬಿಕೊಂಡು ಬಂದಿದ್ದಾಳೆ. ಅವಳನ್ನು ಹೇಗೆ ಬಿಟ್ಟೇನು? ನಾನು ಬಿಟ್ಟರೆ ಮಾತ್ರ ಅವಳು ಗಂಡನ ಬಳಿಗೆ ಹೋಗುವಳೇನು? ನಾನು ಪ್ರಾಣವನ್ನಾದರೂ ಬಿಡುವೆನೇ ಹೊರತು ತಾರೆಯನ್ನು ಬಿಡಲಾರೆನೆಂದು ಇಂದ್ರನೊಂದಿಗೆ ಹೇಳು" ಎಂದನು ಖಂಡಿತ ಸ್ವರದಲ್ಲಿ.





# ದೇವೀಭಾಗವತ

ಚಂದ್ರನ ಮಾತನ್ನು ಕೇಳಿದ ದೇವದೂತನು ಇಂದ್ರನ ಬಳಿಗೆ ಹಿಂದಿರುಗಿ ಬಂದು, ಚಂದ್ರನು ಹೇಳಿದ ಮಾತುಗಳನ್ನು ಇಂದ್ರನ ಮುಂದೆ ಒಪ್ಪಿಸಿದನು.

ಅದನ್ನು ಕೇಳಿ ಇಂದ್ರನು ಕೋಪದಿಂದ ಕಿಡಿಕಿಡಿಯಾಗಿ, "ಎಂಥಾ ಮೂರ್ಖನೀ ಚಂದ್ರ! ಹಾಳು ಕೆಲಸ ಮಾಡಿದ್ದಲ್ಲದೆ ನನಗೇ ಇಷ್ಟೊಂದು ಸೊಕ್ಕಿನ ಮಾತುಗಳನ್ನು ಹೇಳುವನೇ ? ಎಂಥ ಸಾಹಸ ! ಅವನ ಮದ ಅಡಗಿಸಲೇಬೇಕು" ಎಂದು ಚಂದ್ರನ ಮೇಲೆ ಯುದ್ಧಕ್ಕೆ ಎದ್ದನು.

ಇದನ್ನು ತಿಳಿದು ಶುಕ್ರನು ತನ್ನ ಶಿಷ್ಯರಾದ ರಾಕ್ಷಸ ವೃಂದದೊಂದಿಗೆ ಚಂದ್ರನಿಗೆ ಸಹಾಯಕನಾದನು. ಶಿವನೂ ತನ್ನ ಗಣಗಳೊಂದಿಗೆ ಬೃಹಸ್ಪತಿಗೆ ಸಹಾಯಕನಾಗಿ ಬಂದನು. ಉಭಯ ಪಕ್ಷಗಳೊಳಗೆ ಭಾರಿಯುದ್ಧವು ಹಿಡಿಯಿತು.

ಆದನ್ನು ನೋಡಿ ಬ್ರಹ್ಮದೇವನು ಅಲ್ಲಿಗೆ ಬಂದು ಚಂದ್ರನನ್ನು ಬದಿಗೆ ಕರೆದು, "ನೀನು ಬೃಹಸ್ಪತಿಯ ಹೆಂಡತಿಯನ್ನು ಅವನಿಗೆ ಬಿಟ್ಟು ಕೊಟ್ಟುಬಿಡು. ಇಲ್ಲದಿದ್ದರೆ ವಿಷ್ಣುವಿನೊಂದಿಗೆ ಹೇಳಿ ನಿನ್ನ ಮದವನ್ನು ನೀರು ನೀರು ಮಾಡಿಸುತ್ತೇನೆ." ಎಂದನು. ಆಮೇಲೆ ಶುಕ್ರನೊಡನೆ ಬ್ರಹ್ಮನು, "ಏನಿದು ಶುಕ್ರಾ ? ನಿನಗೆ ಬೃಹಸ್ಪತಿಯ ಮೇಲಿರುವ ಹಗೆಯನ್ನು ಚಂದ್ರನಿಗೆ ಸಹಾಯ ಮಾಡುವುದರ ಮೂಲಕ ತೀರಿಸುವೆಯೇನು ? ಹೀಗಾದರೆ ಯಾವ ಹೆಂಗುಸಾದರೂ ಗಂಡನೊಡನೆ ನ್ಯಾಯವಾದ ಬಾಳುವೆ ನಡೆಸುವುದುಂಟೆ ? " ಎಂದನು.

ಬ್ರಹ್ಮನ ಮಾತು ಕೇಳಿ ಶುಕ್ರನೂ ಸಹ ತಾರೆಯನ್ನು ಬಿಟ್ಟು ಬಿಡುವಂತೆ ಚಂದ್ರನಿಗೆ ಹೇಳಿದನು. ಈಗ ಚಂದ್ರನು ಅವರ ಮಾತಿಗೆ ಕಟ್ಟು ಬಿದ್ದು. ಗರ್ಭಿಣಿಯಾಗಿದ್ದ ತಾರೆಯನ್ನು ಬೃಹಸ್ಪತಿಗೆ ಕೊಟ್ಟು ಬಿಟ್ಟನು. ಹೀಗಾದ ಮೇಲೆ ಶಿವನೇ ಮೊದಲಾದವರೆಲ್ಲಾ ಅವರವರ ಸ್ಥಾನಕ್ಕೆ ಹೊರಟುಹೋದರು.

ಬೃಹಸ್ಪತಿಯ ಮನೆಯಲ್ಲಿ ತಾರೆ ಒಂದು ಗಂಡು ಮಗುವಿಗೆ ಜನ್ಮವಿತ್ತಳು. ಆ ಮಗುವಿಗೆ ಬೃಹಸ್ಪತಿ ಜಾತಕರ್ಮ ಮಾಡಲು ಎಲ್ಲಾ ಸಿದ್ಧತೆಗಳನ್ನೂ

೩. ಶುಕನ ಜನನ



ಮಾಡಿದನು. ಇದನ್ನು ತಿಳಿದು ಚಂದ್ರನು ಒಬ್ಬ ದೂತನನ್ನು ಬೃಹಸ್ಪತಿಯ ಬಳಿಗೆ ಕಳುಹಿಸಿದನು. ಚಂದ್ರದೂತನು ಬೃಹಸ್ಪತಿಯೊಂದಿಗೆ ಚಂದ್ರನು ಹೇಳಿದಂತೆ, "ಇವನು ನಿನ್ನ ಮಗನಲ್ಲ. ನನಗೆ ಹುಟ್ಟಿದವನು. ಅವನಿಗೆ ನೀನು ಹೇಗೆ ಜಾತಕರ್ಮ ಮಾಡುವಿ ?" ಎಂದು ಕೇಳಿದನು.

ಬೃಹಸ್ಪತಿ ಚಂದ್ರನ ದೂತನೊಂದಿಗೆ, "ಮಗುವಿನಲ್ಲಿ ನನ್ನ ಹೋಲಿಕೆಗಳಿವೆ. ಇವನು ನನ್ನ ಮಗನೇ. ಚಂದ್ರನ ರೂಪರೇಖೆಗಳೊಂದೂ ಇವನಲ್ಲಿಲ್ಲ" ಎಂದು ಹೇಳಿ ಕಳುಹಿಸಿಬಿಟ್ಟನು. ದೂತನು ತಿರುಗಿ ಬಂದು ಬೃಹಸ್ಪತಿ ಹೇಳಿದ ಮಾತುಗಳನ್ನು ಹೇಳಲು, ಚಂದ್ರನಿಗೆ ಕೋಪಬಂದಿತು.

ಕೂಡಲೇ ಚಂದ್ರನು ರಾಕ್ಷಸ ಗಣವನ್ನು ತನ್ನೊಂದಿಗೆ ಕರೆದುಕೊಂಡು ಮತ್ತೆ ಯುದ್ಧಕ್ಕೆ ಬಂದನು. ನಿಂತುಹೋದ ದೇವದಾನವ ಯುದ್ಧವು ಮತ್ತೆ ಪ್ರಾರಂಭವಾಯಿತು. ಅದನ್ನು ನೋಡಿ ಬ್ರಹ್ಮನು ಪುನಃ ಅಲ್ಲಿಗೆ ಬಂದು, ಯುದ್ಧವು ಬೇಡವೆಂದು ಎರಡು ಕಡೆಯವರನ್ನೂ ತಡೆಯುತ್ತ, ಇದಕ್ಕೆಲ್ಲಾ ಮೂಲ ಕಾರಣಳಾದ ತಾರೆಯೊಂದಿಗೆ, "ನೋಡಿದೆಯಾ ತಾರಾ, ನಿನ್ನಿಂದಾಗಿ ಎಂಥಾ ಪೇಚಾಟ ಬಂದಿತು ! ನೀನೇ ಹೇಳಿಬಿಡು. ಈ ಮಗುವಿನ ತಂದೆ ಚಂದ್ರನೋ ಬೃಹಸ್ಪತಿಯೋ ?" ಎಂದು ಕೇಳಿದನು.

ತಾರೆ ಬ್ರಹ್ಮನನ್ನು ನೋಡಲಾಗದೆ ತಲೆ ಬಗ್ಗಿಸಿಕೊಂಡು "ಚಂದ್ರನೇ ! ಚಂದ್ರನೇ ! ಚಂದ್ರನೇ !" ಎಂದಳು. ಕೂಡಲೇ ಬ್ರಹ್ಮನು ಆ ಮಗುವನ್ನು ಚಂದ್ರನಿಗೇ ಕೊಡಿಸಿ, ಜಗಳ ತೀರಿಸಿ ಹೊರಟು ಹೋದನು. ಈ ರೀತಿಯಾಗಿ ಬೃಹಸ್ಪತಿಯ ಹೆಂಡತಿ ತಾರೆಯಲ್ಲಿ ಚಂದ್ರನಿಂದ ಹುಟ್ಟಿದ ಮಗನೇ ಬುಧ. ಈ ಬುಧನ ಮಗನಾಗಿ ಪುರೂರವನು ಹುಟ್ಟಿದನು. ಈ ಪುರೂರವನ ಜನ್ಮ ಹೇಗಾಯಿತೆಂದರೆ :

### ಪುರೂರವನ ಕಥೆ

ಒಂದು ಕಾಲದಲ್ಲಿ ಸುದ್ಯುಮ್ನನೆಂಬ ಬಹು ದೊಡ್ಡ ರಾಜನಿದ್ದನು. ಒಂದು ದಿನ ಅವನು ಕೆಲವು ಮಂದಿ ಮಂತ್ರಿಗಳನ್ನು ತನ್ನೊಂದಿಗೆ ಕರೆದುಕೊಂಡು ಕುದುರೆಯ ಮೇಲೆ ಬೇಟೆಯಾಡಲು ಹೊರಟನು. ಬೇಟೆಯಾಡುತ್ತ ಅತ್ಯಂತ ಸುಂದರವಾದ ಕುಮಾರ ವನವನ್ನು ನೋಡಿ ಎಲ್ಲರೂ ಅದರೊಳಗೆ ಪ್ರವೇಶಿಸಿದರು. ಆ ವನದೊಳಗೆ ಪ್ರವೇಶಿಸಿದ್ದೇ ತಡ, ಸುದ್ಯುಮ್ನನೂ ಅವನೊಂದಿಗಿದ್ದವರೆಲ್ಲರೂ ಹೆಣ್ಣಾಗಿ ಹೋದರು. ಸುದ್ಯುಮ್ನನ ಕುದುರೆ ಕೂಡಾ ಹೆಣ್ಣು ಕುದುರೆಯಾಗಿ ಬದಲಾಗಿಹೋಯಿತು.

ಹೀಗೇಕಾಯಿತೆಂದು ಗೊತ್ತಾಗದೆ ಸುದ್ಯುಮ್ನನು ಚಿಂತಿಸುತ್ತ, "ಈ ರೂಪದಿಂದ ಹೇಗೆ ರಾಜ್ಯಪಾಲನೆ ಮಾಡಲಿ ? ಹೆಂಡತಿಯರೊಂದಿಗೆ ಹೇಗಿರಲಿ ? ಶತ್ರುಗಳೊಂದಿಗೆ..., ಅಸಲು ಹೊರಗೆ ಮೋರೆ ತೋರಿಸುವುದು ಹೇಗೆ ?" ಎಂದು ಕುಂದಿಹೋದನು.

ಹೀಗೆ ಹೇಳುತ್ತಾ ಹೋಗುವ ಸೂತಪುರಾಣಿಕನನ್ನು ನೋಡಿ ಶೌನಕಾದಿಮುನಿಗಳು, "ಅಯ್ಯಾ, ರಾಜನೂ ಅವನ ಪರಿವಾರದವರೂ ಸ್ತ್ರೀಯರಾಗಿ ಬದಲಾವಣೆಯಾಗಲು ಕಾರಣವೇನೆಂದು ಹೇಳಬೇಕು" ಎಂದರು. ಸೂತನು ಹೀಗೆ ಹೇಳಿದನು:

ಒಂದುಸಾರಿ ಸನಕಸನಂದನಾದಿ ಮುನಿಗಳು ಶಿವನನ್ನು ನೋಡಲು ಕುಮಾರವನಕ್ಕೆ ಹೋದರು. ಅಲ್ಲಿ ಪಾರ್ವತೀದೇವಿ ಶಿವನೊಂದಿಗೆ ದಿಗಂಬರೆಯಾಗಿರುವುದನ್ನು ನೋಡಿ ತಟ್ಟನೆ ಹಿಂದಿರುಗಿ ನಾರಾಯಣವನಕ್ಕೆ ಹೊರಟುಹೋಗಿಬಿಟ್ಟರು. ತನ್ನನ್ನು ನೋಡಿ ಅವರು ಹೊರಟುಹೋದರೆಂದುಕೊಂಡು ಪಾರ್ವತಿ ನಾಚಿಕೆಯಿಂದ ಮುದುಡಿ ಸಂಕಟಪಡತೊಡಗಿದಳು. ಅವಳ ಅವಸ್ಥೆಯನ್ನು ನೋಡಿ ಶಿವನು ಇನ್ನೆಂದೂ ಹೀಗಾಗದಂತೆ, ಆ ವನದೊಳಗೆ ಹೆಜ್ಜೆಯಿಡುವ ಪ್ರತಿ ಗಂಡು ಪ್ರಾಣಿಯೂ ಹೆಣ್ಣಾಗಿಬಿಡಬೇಕೆಂದು ನಿಯಮವಿಟ್ಟನು. ಸುದ್ಯುಮ್ನನೂ ಅವನ ಪರಿವಾರದವರೂ ಸ್ತ್ರೀಯರಾಗಲು ಅದೇ ಕಾರಣ.

ಕಡೆಗೆ ಸುದ್ಯುಮ್ನನು ಇಳಾ ಎಂದು [illegible]ಕೊಂಡು ತನ್ನ ಸಖಿಯರೊಂದಿಗೆ ಆ ವನದಲ್ಲಿ ಉಳಿದುಕೊಂಡನು. ಹೀಗಿರುವಾಗ ಒಂದು ದಿನ ಚಂದ್ರನ ಮಗನಾದ ಬುಧನು ಈ ಇಳೆಯನ್ನು ನೋಡಿಬಿಟ್ಟನು. ನೋಡಿದ ಕ್ಷಣದಲ್ಲೇ ಇಳೆಯೂ ಬುಧನೂ ಒಬ್ಬರನ್ನೊಬ್ಬರು ಮೆಚ್ಚಿ, ಮೋಹಿಸಿ ಒಂದಾದರು.

ಆ ಸಂದರ್ಭದಲ್ಲಿ ಇಳೆಯ ಹೊಟ್ಟೆಯಲ್ಲಿ ಪುರೂರವನು ಹುಟ್ಟಿದನು. ಇಷ್ಟಾದ ಮೇಲೆ ಇಳಾ ತನ್ನ ಕುಲಗುರುವಾದ ವಸಿಷ್ಠರನ್ನು ಧ್ಯಾನಿಸಿ ಬರಮಾಡಿ, ತನಗೆ ಬಂದ ಕಷ್ಟವನ್ನು ಹೇಳಿಕೊಂಡಳು. ಹೆಣ್ಣಾಗಿರುವ ಸುದ್ಯುಮ್ನರಾಜನ ಮನೋವೇದನೆಯನ್ನರಿತ ವಸಿಷ್ಠರು, ಶಿವನನ್ನು ಕುರಿತು ತಪಸ್ಸು ಮಾಡಿದರು. ಶಿವನು ಪ್ರತ್ಯಕ್ಷನಾಗಲು, ವಸಿಷ್ಠರು "ನಮ್ಮ ರಾಜನಾದ ಸುದ್ಯುಮ್ನನು ಮೊದಲಿನಂತೆ ಗಂಡಸಾಗುವ ಹಾಗೆ ವರ ಕೊಡು" ಎಂದು ಬೇಡಿಕೊಂಡರು.





ಅರಣ್ಯಕ್ಕೆ ಹೊರಟುಹೋದನು. ಅಲ್ಲಿ ಅವನಿಗೆ ನಾರದರ ದರ್ಶನವಾಯಿತು. ಅವರಿಂದ ಆದಿಶಕ್ತಿ ದೇವಿಯ ನವಾಕ್ಷರೀ ಮಂತ್ರದ ಉಪದೇಶಪಡೆದು, ಆ ಮಂತ್ರವನ್ನು ಜಪಿಸುತ್ತ ತಪಸ್ಸು ಮಾಡು ತ್ತಿರಲು, ಅವನ ಸೌಭಾಗ್ಯದ ಕಾಲ ಸನ್ನಿಹಿತ ವಾಯಿತು. ಮಹಾದೇವಿ ಸಿಂಹವಾಹನದಲ್ಲಿ ಅವನ ಮುಂದೆ ಪ್ರತ್ಯಕ್ಷಳಾದಳು. ಸುದ್ಯುಮ್ನನು ಆ ದೇವಿ ಯನ್ನು ಸ್ತೋತ್ರಮಾಡಿ ಅವಳ ಅನುಗ್ರಹದಿಂದ ಮುಕ್ತಿಪಡೆದನು.

"ನನ್ನ ಮಾತು ಸುಳ್ಳಾಗಲು ಸಾಧ್ಯವಿಲ್ಲ. ಸುದ್ಯು ಮ್ನನು ಒಂದು ತಿಂಗಳು ಗಂಡಾಗಿಯೂ, ಒಂದು ತಿಂಗಳು ಹೆಣ್ಣಾಗಿಯೂ ಇರುವಂತೆ ವರ ಕೊಡು ತ್ತೇನೆ" ಎಂದು ಹೇಳಿ ಶಿವನು ಅಂತರ್ಧಾನನಾದನು.

ಹೀಗೆ ವಸಿಷ್ಠರ ದಯದಿಂದ ಮತ್ತೆ ಗಂಡುಸಾದ ಸುದ್ಯುಮ್ನನು ತನ್ನ ರಾಜಧಾನಿಗೆ ಹಿಂದಿರುಗಿ ಮೊದಲಿನಂತೆ ರಾಜ್ಯವನ್ನು ಆಳಲಿಕ್ಕೆ ತೊಡಗಿದನು. ಅವನು ಗಂಡುಸಾಗಿರುವ ಒಂದು ತಿಂಗಳು ರಾಜ್ಯ ಪಾಲನೆ ಮಾಡುತ್ತ, ಹೆಣ್ಣಾಗಿರುವ ಒಂದು ತಿಂಗಳು ಅಂತಃಪುರದಿಂದ ಹೊರಗೆ ಬಾರದೆ ಒಳಗೇ ಮುಚ್ಚಿ ಕೊಂಡಿದ್ದನು. ಇದು ಪ್ರಜೆಗಳಿಗೆ ಹರ್ಷವನ್ನುಂಟು ಮಾಡಲಿಲ್ಲ. ತಮ್ಮ ರಾಜನು ಹೀಗೇಕೆ ಮಾಡುವ ನೆಂದು ಎಲ್ಲರೂ ಮಾತಾಡಿಕೊಳ್ಳುತ್ತಿದ್ದರು.

ಮಗನು ದೊಡ್ಡವನಾಗುವವರೆಗೂ ಆ ವಿಧ ವಾಗಿದ್ದು ರಾಜ್ಯಪಾಲನೆ ಮಾಡಿದ ಮೇಲೆ, ಎಲ್ಲ ವನ್ನೂ ಮಗನಿಗೇ ವಹಿಸಿಕೊಟ್ಟು ತಪಸ್ಸುಮಾಡಲು

ಸುದ್ಯುಮ್ನನ ಅನಂತರ ಪುರೂರವನು ಒಳ್ಳೆಯ ರೀತಿಯಲ್ಲಿ ರಾಜ್ಯಪಾಲನೆ ಮಾಡುತ್ತ ಎಷ್ಟೋ ಯಜ್ಞಗಳನ್ನು ಮಾಡಿದನು. ದಾನಧರ್ಮಗಳಿಂದ ಎಲ್ಲರನ್ನೂ ತೃಪ್ತಿಪಡಿಸಿದನು. ಮನ್ಮಥನಂತಹ ಅವನ ಸುರೂಪವೂ, ಸುಗುಣಗಳೂ, ಕೀರ್ತಿಯೂ ಎಲ್ಲರನ್ನೂ ಮೆಚ್ಚಿಸಿದುವು. ದೇವತೆಗಳೂ ಅಸೂಯೆ ಪಡುವಂತಾದರು. ಇದನ್ನೆಲ್ಲ ನೋಡಿ ಊರ್ವಶಿಗೆ ಅವನ ಮೇಲೆ ಕಣ್ಣು ಬಿತ್ತು. ಆಮೇಲೆ ಬ್ರಹ್ಮ ದೇವನು ಅವಳಿಗೆ ಕೊಟ್ಟ ಒಂದು ಶಾಪದಿಂದ ಅವಳು ಭೂಮಿಗೆ ಬರುವಂತಾಯಿತು. ಆಗ ಅವಳು ಪುರೂರವನನ್ನು ಸಂಧಿಸಿದಳು.

ಅವಳ ರೂಪಲಾವಣ್ಯಗಳು ಪುರೂರವನನ್ನೂ ಪರವಶಗೊಳಿಸಲು, ಅವನೊಂದಿಗೆ ಸಂಸಾರ ಮಾಡಲು ಅವಳು ಒಪ್ಪುತ್ತ, "ನನಗೆ ಎರಡು ಕುರಿ ಗಳಿವೆ. ಅವುಗಳ ಮೇಲೆ ನನಗೆ ಮಕ್ಕಳಿಗಿಂತ ಹೆಚ್ಚು ಪ್ರೀತಿ. ನೀನು ಅವುಗಳನ್ನು ಕೂಡಾ ರಕ್ಷಿಸಬೇಕು. ಮತ್ತೊಂದು ಏನೆಂದರೆ, ನೀನು ದಿಗಂಬರನಾಗಿ ನನ್ನ ಕಣ್ಣಿಗೆ ಬೀಳಕೂಡದು. ಮೂರನೆಯದಾಗಿ ನೀನು ನನಗೆ ಯಾವಾಗಲೂ ತುಪ್ಪವನ್ನು ಕೊಡಬೇಕು. ಈ ನಿಬಂಧನೆಗಳನ್ನು ನೀನು ಉಲ್ಲಂಘಿಸಿದಾಗ ನಾನು ನಿನ್ನನ್ನು ಬಿಟ್ಟು ಹೋಗುತ್ತೇನೆ" ಎಂದಳು. ಅದಕ್ಕೆಲ್ಲ ಪುರೂರವನು ಒಪ್ಪಿಕೊಂಡು ಅವ

ಳೊಂದಿಗೆ ಕೆಲವು ವರ್ಷ ಸೊಗಸಾಗಿ ಬಾಳಿದನು. ಅವನು ಪೂರ್ತಿಯಾಗಿ ಅವಳ ಮೋಹದಲ್ಲೇ ಬಿದ್ದು, ಧರ್ಮ, ಅರ್ಥ, ಮೋಕ್ಷಗಳ ಗೊಡವೆಯನ್ನೇ ಬಿಟ್ಟನು. ಊರ್ವಶಿ ಕೂಡಾ ಪುರೂರವನ ಪ್ರೇಮ ದಲ್ಲಿ ಮುಳುಗಿತೇಲುತ್ತ ಸ್ವರ್ಗವನ್ನೂ, ದೇವೇಂದ್ರ ನನ್ನೂ ಮರೆತುಬಿಟ್ಟಳು.

ಊರ್ವಶೀ ಪುರೂರವರು ಹೀಗೆ ಪರವಶರಾಗಿ ರುವುದನ್ನು ನೋಡಿ ದೇವೇಂದ್ರನಿಗೆ ತಾಳಲಾಗಲಿಲ್ಲ. ಊರ್ವಶಿಯನ್ನು ಮತ್ತೆ ಬರಮಾಡಿಕೊಳ್ಳಲಿಕ್ಕಾಗಿ ಗಂಧರ್ವರನ್ನು ನಿಯೋಜಿಸಿದನು. "ಸ್ವರ್ಗದಲ್ಲಿ ರಂಭೆ ಮೊದಲಾದ ಅಪ್ಸರಸಿಯರು ಎಷ್ಟುಮಂದಿ ಇದ್ದರೂ ಊರ್ವಶಿ ಇಲ್ಲದೆ ಸ್ವರ್ಗವೇ ಕಳಾಹೀನ ವಾಗಿದೆ. ಆದುದರಿಂದ ಏನೋ ಒಂದು ವಿಧವಾಗಿ ಪುರೂರವನನ್ನು ಮೋಸಪಡಿಸಿ ಕುರಿಗಳನ್ನು ಅಪ ಹರಿಸಿಬಿಟ್ಟರೆ ಒಂದರ ಮೇಲೊಂದಾಗಿ ಕೆಲಸ ಮುಗಿಯುತ್ತದೆ" ಎಂದು ಆ ಗಂಧರ್ವರಿಗೆ ಹೇಳಿ ದನು ಇಂದ್ರ.

ಗಂಧರ್ವರು ಪುರೂರವನ ರಕ್ಷಣೆಯಲ್ಲಿರುವ ಕುರಿ ಗಳನ್ನು ಅವನಿಗೆ ತಿಳಿಯದಂತೆ ಒಂದು ದಿನ ರಾತ್ರಿ ಅಪಹರಿಸಿಬಿಟ್ಟರು. ಆಗ ಕುರಿಗಳು ಆರ್ತಧ್ವನಿ ಯಿಂದ ಕೂಗತೊಡಗಿದುವು. ಅದನ್ನು ಕೇಳಿ ಊರ್ವಶಿ ಪುರೂರವನೊಂದಿಗೆ "ನಾನು ಮಕ್ಕಳಿ ಗಿಂತ ಹೆಚ್ಚು ಪ್ರೀತಿಯಿಂದ ನೋಡುವ ಕುರಿಗಳನ್ನು ಕಳ್ಳರು ಎತ್ತಿಕೊಂಡು ಹೋಗುತ್ತಿರುವರೆಂದರೆ ಇದೋ ನೀನು ರಕ್ಷಿಸುವ ಚೆಂದ? ಹೆಂಗುಸಿನಂತೆ ನೋಡುತ್ತಾ ಸುಮ್ಮನಿರುವಿಯಾ? ನೀನು ರಕ್ಷಿಸುವೆ ಯೆಂಬ ನಂಬುಗೆಯಲ್ಲಿ ನಾನು ನಿಶ್ಚಿಂತಳಾಗಿದ್ದು ಮೋಸಹೋದಂತಾಯಿತು!" ಎಂದು ಅವನನ್ನು ಬಗೆಬಗೆಯಾಗಿ ಜರೆದಳು.

ಪ್ರಿಯಳಿಗೆ ಕೊಟ್ಟ ಮಾತಿಗೆ ಧಕ್ಕೆ ಬಂದಿತೆಂಬ ಚಿಂತೆಯಿಂದ, ಹೊದಿಕೆ ಜಾಡಿಸಿಕೊಂಡು, ಮೈ ಮೇಲೆ ಯಾವ ಬಟ್ಟೆಯೂ ಇಲ್ಲವೆಂಬ ಪರಿವೆಯಿಲ್ಲದೆ ಕಳ್ಳ ರನ್ನು ಓಡಿಸಿಕೊಂಡು ಹೋದನು ಪುರೂರವ. ಆಗ ಅವನ ದಿಗಂಬರರೂಪ ಊರ್ವಶಿಗೆ ಕಾಣುವಂತೆ





ಕಣ್ಣಿಗೆ ಬಿದ್ದಳು. ಅವನು ಆಶ್ಚರ್ಯ ಆನಂದ ಗಳಿಂದ ಅವಳ ಬಳಿಗೆ ಧಾವಿಸಿ ಹೋಗಿ ಗದ್ಗದ ಕಂಠದಿಂದ, "ಊರ್ವಶೀ, ನಿನ್ನ ಮೇಲೆ ಒಂದು ನಿಮಿಷ ಕೂಡಾ ಕೋಪಿಸಿಕೊಂಡವನಲ್ಲ. ನಿನಗೆ ಕೆಡುಕು ಎಣಿಸಿದವನೂ ಅಲ್ಲ. ನಿನ್ನ ಮಾತಿಗೆ ಎಂದೂ ಇದಿರಾಡಿದವನಲ್ಲ. ನೀನು ಎಂತಹ ಕೆಲಸ ಹೇಳಿ ದರೂ ನಾನು ಮಾಡುತ್ತಿದ್ದೆ. ಹಾಗಿರುವಾಗ ಏನೋ ಅಲ್ಪ ನಿಯಮಗಳ ಉಲ್ಲಂಘನೆ ಎಂದು ಹೇಳಿ ನನ್ನನ್ನು ಬಿಟ್ಟು ಹೋದೆಯಲ್ಲ ? ಇದು ನ್ಯಾಯವೇ ? ನನ್ನ ಮೇಲಿನ ಪ್ರೇಮದಿಂದಲೇ ಬಂದವಳು ನೀನು. ಅಂತಹ ನಿನಗೆ ನನ್ನನ್ನು ಬಿಟ್ಟುಹೋಗಲು ಹೇಗೆ ಮನಸ್ಸು ಬಂತು ? ನಿನ್ನ ಪ್ರೇಮವು ಶಾಶ್ವತವೆಂದು ಕೊಂಡೆನಲ್ಲ ? ಈಗ ನನ್ನನ್ನು ಹೀಗೆ ದುಃಖದಲ್ಲಿ ಮುಳುಗಿಸಿ ಹೋದೆಯಲ್ಲಾ ?" ಎಂದನು ದೀನನಾಗಿ ಅಂಗಲಾಚುವವನಂತೆ.

ಗಂಧರ್ವರು ಮಿಂಚು ಹೊಳೆಯುವಂತೆ ಮಾಡಿ ದರು. ಕುರಿಗಳನ್ನು ಕಳ್ಳರಿಂದ ಹಿಂದಿರುಗಿಸಿಕೊಂಡು ಬರುವಾಗ ಪುರೂರವನು ನಗ್ನನಾಗಿರುವುದನ್ನು ನೋಡಿ ಊರ್ವಶಿ ಅವನ ಕಾಲಿಗೆ ಬಿದ್ದು, "ನನ್ನ ನಿಯಮಗಳನ್ನು ಮೊದಲೇ ಹೇಳಿದ್ದೆನಷ್ಟೆ ? ಅದನ್ನು ಉಲ್ಲಂಘಿಸಿದ ನಿನ್ನೊಡನೆ ಇನ್ನು ನಾನಿರಲಾರೆ. ಈ ದಿನ ವೇಳೆಗೆ ತುಪ್ಪವೂ ದೊರೆಯಲಿಲ್ಲ. ನಾನೀಗ ಹೊರಟೆನು. ನನ್ನನ್ನು ನೆನಪಿನಲ್ಲಿಟ್ಟುಕೋ" ಎಂದು ಹೇಳಿ ಸ್ವರ್ಗಕ್ಕೆ ಹೋಗಿ ಬಿಟ್ಟಳು.

ಊರ್ವಶಿ ಹೊರಟುಹೋದ ಮೇಲೆ ಪುರೂರವ ನಿಗೆ ತಾಳಲಾಗದಷ್ಟು ಮನೋವೇದನೆಯಾಗ ತೊಡಗಿತು. ಅವನ ಬುದ್ಧಿ ಕೆಟ್ಟಿತು. ಮನಸ್ಸಿನ ತುಂಬಾ ಊರ್ವಶಿಯಾದಳು. ಅವನು ಊರ್ವಶಿ ಯನ್ನೂ ಅವಳ ಚೇಷ್ಟೆಗಳನ್ನೂ ನೆನೆಯುತ್ತಾ ಸಿಕ್ಕಿ ದಲ್ಲಿ ತಿರುಗಾಡ ತೊಡಗಿದನು. ಹಾಗಿರುವಾಗ ಕುರುದೇಶದಲ್ಲಿ ಆಕಸ್ಮಾತ್ತಾಗಿ ಊರ್ವಶಿ ಅವನ

ಊರ್ವಶಿ ಅವನ ಮನಸ್ಸನ್ನು ಸರಿ ಮಾಡಲಿಕ್ಕಾಗಿ ಹೀಗೆಂದಳು: "ಪುರೂರವಾ ! ನಮ್ಮ ಜಾತಿಗೆ ಪ್ರೇಮವೆಂಬ ಮಾತೆಲ್ಲಿದೆ ? ಅದೆಲ್ಲಾ ನಮ್ಮದೊಂದು ಮೋಜು. ನೀನು ಸುಮ್ಮನೆ ಭ್ರಮೆಯಲ್ಲಿ ಬಿದ್ದು ಇಹ ಪರಗಳನ್ನು ಕೆಡಿಸಿಕೊಳ್ಳಬೇಡ. ನನಗಾಗಿ ಆಲೋಚಿಸುವುದನ್ನು ಬಿಟ್ಟು, ನಿನ್ನ ರಾಜ್ಯಪಾಲನೆಯ ಕರ್ತವ್ಯವನ್ನು ನೋಡಿಕೋ" ಎಂದು ಬುದ್ಧಿ ಹೇಳಿ ಹೊರಟುಹೋದಳು.

ಈ ರೀತಿಯಾಗಿ ಪುರೂವನಿಗೆ ಬಂದ ಗತಿಯೇ ಕಡೆಗೆ ತನಗೂ ಬರುವುದೇನೋ ಎಂದು ವ್ಯಾಸನು ಘೃತಾಚಿಯನ್ನು ನೋಡಿ ಅಂದುಕೊಂಡನು. ಘೃತಾಚಿ ಕೂಡಾ ವ್ಯಾಸನು ತನ್ನನ್ನು ಎಲ್ಲಿ ಶಪಿಸುವನೋ ಎಂದು ಹೆದರಿ ಹೆಣ್ಣು ಗಿಳಿಯ ರೂಪತಾಳಿ ಹಾರಿ ಹೋದಳು. ಇದನ್ನೆಲ್ಲ ನೋಡುತ್ತಿದ್ದ ವ್ಯಾಸನು ತೀವ್ರ ವೇದನೆಯಿಂದ ಅರಣಿ ಮಥಿಸುತ್ತಿರಲು, ಅಗ್ನಿಯೊಂದಿಗೇ ಒಂದು ಶಿಶು ಹುಟ್ಟಿತು.

## ತಂದೆ ಮತ್ತು ಮಗ

ವ್ಯಾಸನು ಆ ಮಗುವನ್ನು ನೋಡಿ, "ಇದೇನು ಆದ್ಭುತ! ಇದೇನೋ ಶಿವನ ಮಹಿಮೆಯೇ ಸರಿ!" ಎಂದುಕೊಂಡನು.

ಅವನು ಸಂತೋಷದಿಂದ ತನ್ನ ಮಗನನ್ನು ಗಂಗಾ ನದಿಗೆ ತೆಗೆದುಕೊಂಡು ಹೋಗಿ ಸ್ನಾನ ಮಾಡಿಸಿ ಜಾತಕರ್ಮ ನೆರವೇರಿಸಿ ಮಗನಿಗೆ ಶುಕನೆಂದು ಹೆಸರಿಟ್ಟನು. ಆಗ ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದುವು. ಭೂಮಿಯ ಮೇಲೆ ಪುಷ್ಪವರ್ಷಣವಾಯಿತು. ನಾರದ ತುಂಬುರು ಮೊದಲಾದವರು ಸುಸ್ವರದಿಂದ ಹಾಡಿದರು. ರಂಭೆ ಮೊದಲಾದ ಅಪ್ಸರಸಿಯರು ನಾಟ್ಯವಾಡಿದರು.

ಗಿಳಿಯ ರೂಪ ಧರಿಸಿದ ಸ್ತ್ರೀಯ ಕಾರಣದಿಂದಾಗಿ ಹುಟ್ಟಿದ ಆ ಶಿಶುವು ಶುಕನಾಮದಿಂದ ದಿನದಿಂದ ದಿನಕ್ಕೆ ಬೆಳಗುತ್ತಾ ಬಂದನು. ಅವನ ಪ್ರತಿಭೆ ಅಪಾರ. ಅವನಿಗಾಗಿ ಆಕಾಶದಿಂದ ಜಿಂಕೆಯ ಚರ್ಮವೂ, ದಂಡ ಕಮಂಡಲುಗಳೂ ಬಿದ್ದುವು. ವ್ಯಾಸನು ತನ್ನ ಮಗನಿಗೆ ಉಪನಯನ ಮಾಡಿ, ಬೃಹಸ್ಪತಿಯ ಬಳಿಗೆ ವೇದಾಭ್ಯಾಸಕ್ಕೆ ಕಳುಹಿಸಿದನು. ವಿದ್ಯಾಭ್ಯಾಸವೆಲ್ಲಾ ಮುಗಿದ ಮೇಲೆ ಶುಕನು ಗುರುದಕ್ಷಿಣೆ ಕೊಟ್ಟು, ತಂದೆಯ ಬಳಿಗೆ ತಿರುಗಿಬಂದನು. ತುಂಬಿದ ವಿದ್ಯಾವಂತನಾಗಿ ಬಂದ ಮಗನನ್ನು ವ್ಯಾಸನು ಆಲಿಂಗಿಸಿಕೊಂಡು, ತುಂಬಾ ಸಂತೋಷಗೊಂಡನು. ಇನ್ನು ಈ ಮಗನಿಗೆ ಒಂದು ಮದುವೆ ಮಾಡಬೇಕೆಂದು ಅವನಿಗೆ ತೋರಿತು. ಅವನಿಗೆ ಯೋಗ್ಯಳಾದಂತಹ ಒಬ್ಬಳು ಮುನಿಕನ್ಯೆಯನ್ನು ಹುಡುಕಿ ಕರೆದುಕೊಂಡು ಬಂದು ಶುಕನೊಂದಿಗೆ, "ಅಪ್ಪಾ, ನೀನು ಈಗ ವೇದಶಾಸ್ತ್ರಗಳನ್ನೆಲ್ಲಾ ಓದಿ ಪಾರಂಗತನಾಗಿರುವಿ. ಇನ್ನು ಮದುವೆ ಮಾಡಿಕೊಂಡು ಯಜ್ಞಯಾಗಗಳನ್ನು ಮಾಡುತ್ತ ಮಕ್ಕಳನ್ನು ಪಡೆದು ಕೃತಾರ್ಥನಾಗಬೇಕು. ಪುತ್ರರಿಲ್ಲದಿದ್ದರೆ ಯಾವಗತಿಯೂ ಇರುವುದಿಲ್ಲ. ಕೀರ್ತಿಯೂ ಬಾರದು. ಆದುದರಿಂದ ನೀನು ಈ ಕನ್ಯೆಯನ್ನು ಮದುವೆಯಾಗಿ ಮಕ್ಕಳನ್ನು ಪಡೆದು ನನಗೆ ಸಂತೋಷವನ್ನುಂಟು ಮಾಡಿ ಪಿತೃದೇವತೆಗಳನ್ನು ತೃಪ್ತಿಗೊಳಿಸು. ನನ್ನ ಮಾತನ್ನು ಮೀರಬೇಡ. ನಾನು ಎಷ್ಟೋ ವರ್ಷ ತಪಸ್ಸು ಮಾಡಿ ನಿನ್ನನ್ನು ಪಡೆದಿದ್ದೇನೆ. ನಿನ ಮೂಲಕವಾಗಿ ಕೀರ್ತಿಯೂ ಸದ್ಗತಿಯೂ ಬರಬೇಕು." ಎಂದನು.

ಆ ಮಾತಿಗೆ ಶುಕನು ತಂದೆಯೊಂದಿಗೆ. "ಅಪ್ಪಾ, ನನಗೆ ಮದುವೆಯೇ ಬೇಡ. ನೀನು ನನಗೆ ತತ್ವೋಪದೇಶ ಮಾಡುವುದನ್ನು ಬಿಟ್ಟು, ನೋಡು ನೋಡುತ್ತಾ ಸಂಸಾರ ಸಾಗರದಲ್ಲಿ ನನ್ನನ್ನೇಕೆ ದೂಡುವೆ? ಬೇಡ ಅಪ್ಪಾ ಬೇಡ!" ಎಂದನು.






ಶುಕನ ಮಾತನ್ನು ಕೇಳಿ ವ್ಯಾಸನು, "ಕಂದಾ, ನಾನು ನೂರು ವರ್ಷ ತಪಸ್ಸುಮಾಡಿ ನಿನ್ನನ್ನು ಪಡೆದಿದ್ದೇನೆ. ನನ್ನ ಮಾತಿಗೆ ಇದಿರಾಡಬೇಡಪ್ಪ, ನಿನಗೀಗ ಯೌವನವು ಬಂದಿದೆ. ಹೆಂಡತಿಯನ್ನು ಮಾಡಿಕೊಂಡು ಸುಖಪಡಬೇಕಾದ ವಯಸ್ಸು, ಧನದ ವಿಷಯದಲ್ಲಿ ನೀನೇನೂ ಚಿಂತಿಸಬೇಡ. ನಾನು ಯಾವ ರಾಜನನ್ನಾದರೂ ಕೇಳಿ ಹಣ ತರುತ್ತೇನೆ. ಗೃಹಸ್ಥನಾಗಿರಲು ಹಣವೂ ಪ್ರಧಾನವಾಗಿರಬೇಕಾದುದರಿಂದ, ಅದರಲ್ಲಿ ನಿನಗೇನೂ ಕೊರತೆಬಾರದಂತೆ ನಾನು ನೋಡಿಕೊಳ್ಳುತ್ತೇನೆ." ಎಂದನು.

"ಅಪ್ಪಾ, ಮದುವೆಯಿಂದ ಸುಖ ಬರುವುದೆಂಬ ಮಾತನ್ನು ನಾನು ಹೇಗೆ ನಂಬಲಿ? ಮದುವೆ ಮಾಡಿಕೊಂಡು ನಾನಾ ಕಷ್ಟಗಳನ್ನು ಅನುಭವಿಸುತ್ತ ಸಂಸಾರ ಕೂಪದಿಂದ ಮೇಲೇಳಲಾರದೆ ಕ್ಷೀಣಿಸಿ ಹೋಗುವವರನ್ನು ನೋಡುತ್ತಿದ್ದೇನಲ್ಲವೇ? ಅಂತಹ ದುಃಖಾಂಶವೇ ಹೆಚ್ಚಾಗಿರುವ ಸುಖವನ್ನು ಸುಖವೆಂದು ಹೇಳಬಹುದೇ? ಸಂಕಲೆಯಿಂದ ಬಿಡುಗಡೆ ಪಡೆಯಬಹುದಾದರೂ ಹೆಣ್ಣಿನ ಮಮಕಾರ ಪಾಶದಲ್ಲಿ ಸಿಕ್ಕಿಕೊಂಡವನಿಗೆ ಬಿಡುಗಡೆಯೇ ಇಲ್ಲ. ಅಂತಹ ಸುಖವನ್ನು ನಾನು ಹೇಗೆ ಇಷ್ಟಪಟ್ಟು ವರಿಸಿಕೊಳ್ಳಲಿ?" ಎಂದನು ಶುಕ.

"ಮಗನೇ, ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು ನಿರ್ಮಲವಾಗಿರಿಸಿಕೊಳ್ಳುವುದೇ ಮುಕ್ತಿಗೆ ಮಾರ್ಗ. ಮನಸ್ಸು ಧೃಢವಾಗಿದ್ದುಬಿಟ್ಟರೆ ಯಾವುದೂ ಬಂಧನಗಳಾಗಿ ಬಂಧಿಸಲಾರವು. ನ್ಯಾಯವಾಗಿ ಧನವನ್ನು ಸಂಪಾದಿಸುತ್ತ, ಸುಳ್ಳು ಮಾತಾಡದೆ, ಶೌಚವನ್ನು ಬಿಡದೆ, ವಿಧ್ಯುಕ್ತವಾದ ಧರ್ಮ ಕರ್ಮಗಳನ್ನು ಮಾಡುತ್ತ ಗೃಹಸ್ಥನಾದವನು ಮುಕ್ತಿ ಪಡೆಯುತ್ತಾನೆ. ಕಂದಾ, ಗೃಹಸ್ಥನಾಗಿದ್ದು, ಅತಿಥಿಗಳನ್ನು ಆದರಿಸುತ್ತ ವಾನಪ್ರಸ್ಥರಿಗೂ, ಸಂಸಾರಿಗಳಿಗೂ ಸಹಾಯಕನಾಗಿರುತ್ತ, ಎಲ್ಲಾ ಬಗೆಯ ಧರ್ಮಗಳನೂ ಆಚರಿಸಿ, ಕಡೆಗೆ ಮುಕ್ತಿಯನ್ನು ಪಡೆಯಬಹುದು. ಇದನ್ನೆಲ್ಲ ತಿಳಿದುಕೊಂಡಿರುವುದರಿಂದಲೇ ವಸಿಷ್ಠ ಮೊದಲಾದ ಮಹರ್ಷಿಗಳೆಲ್ಲಾ

೪. ಶುಕ–ಜನಕ ಸಂವಾದ



ಉರುಳು ಹಗ್ಗ. ಹಣವಿಲ್ಲದೆಹೋದರೆ ಬೇಕಾದವರ ನಡುವಿನಲ್ಲೇ ಅವಮಾನ. ಹಣ ಸಂಪಾದನೆಗೆ ಎಷ್ಟೆಷ್ಟೋ ಕಷ್ಟಗಳು. ಮೂರು ಲೋಕಗಳನ್ನೂ ಪಾಲಿಸುವ ದೇವೇಂದ್ರನಿಗಿಂತಲೂ ಸನ್ಯಾಸಿಯೇ ಸುಖಿ. ಬ್ರಹ್ಮ ವಿಷ್ಣು ಮಹೇಶ್ವರರಿಗೆ ಮಾತ್ರ ಸುಖ ವೆಲ್ಲಿದೆ? ಯಾವ ದಾನವನು ಎಲ್ಲಿದ್ದಾನೋ, ಅವ ನನ್ನು ಹೇಗೆ, ಯಾವ ಉಪಾಯದಿಂದ ಕೊಲ್ಲು ವುದೋ ಎಂಬ ಚಿಂತೆಯೇ ಅವರಿಗೆ. ಈ ಲೋಕ ದಲ್ಲಿ ಬಡವನಿಗೆ ಮಾತ್ರವಲ್ಲ, ಧನಿಕನಿಗೂ ಸುಖವಿಲ್ಲ. ಅಪ್ಪಾ, ನೀನು ನನಗೆ ಇಂಥ ಕಷ್ಟಗಳಿಗೆ ತಳ್ಳುವ ಮಾತು ಹೇಳುವುದನ್ನು ಬಿಟ್ಟು, ವಿಜ್ಞಾನ ಪ್ರದವಾದ ಮಾರ್ಗವನ್ನು ಹೇಳು. ಕೇಳುತ್ತೇನೆ."

ತನ್ನ ಮಗನ ಬುದ್ಧಿ ಕಡುವೈರಾಗ್ಯದಲ್ಲೇ ಇರುವು ದೆಂದು ತಿಳಿದು ವ್ಯಾಸನು, "ಕಂದಾ, ಒಂದು ಕಾಲ ದಲ್ಲಿ ನಾನು ಮುಕ್ತಿಮಾರ್ಗದಾಯಕವಾದ ದೇವೀ ಭಾಗವತವನ್ನು ರಚಿಸಿದೆನು. ಅದನ್ನು ಓದಿ ನೀನು ಜ್ಞಾನಿಯಾಗಬಹುದು," ಎಂದು ಆ ದೇವೀಭಾಗವತ ವನ್ನು ಕುರಿತು ಹೀಗೆ ವಿವರಿಸಿದನು:

ವಿಷ್ಣುವು ವಟಪತ್ರದ ಮೇಲೆ ಮಗುವಾಗಿರು ವಾಗ, "ನಾನಿಲ್ಲಿ ಈ ಮಗುವಿನ ರೂಪದಲ್ಲಿ ಏಕಿರು ತ್ತೇನೆ? ನನ್ನನ್ನು ಸೃಷ್ಟಿಸಿದವರು ಯಾರು? ಈ ವಿಷಯ ನನಗೆ ಹೇಗೆ ತಿಳಿಯುತ್ತದೆ? ತಿಳಿಸು ವವರು ಯಾರು?" ಎಂದು ಚಿಂತಿಸಿಕೊಂಡಿದ್ದನು. ಅದನ್ನು ನೋಡಿ ಮಹಾದೇವಿ ಕನಿಕರಗೊಂಡು ಅವನಿಗೆ ಅರ್ಧ ಶ್ಲೋಕವನ್ನು ಹೇಳಿ, "ಇದೇ ಸಮಸ್ತವೂ. ನೀನು ಇದನ್ನು ತಿಳಿದುಕೊಂಡರೆ ನನ್ನನ್ನು ತಿಳಿದುಕೊಂಡಂತೆಯೇ" ಎಂದಳು.

ಬಾಲ ವಿಷ್ಣು ಆ ಅರ್ಧ ಶ್ಲೋಕವನ್ನು ಕೇಳಿದನೇ ಹೊರತು, ಅರ್ಥ ಮಾಡಿಕೊಳ್ಳಲಾರದೆಹೋದನು. ಪುನಃ ಆಲೋಚನೆ ಹರಿಯಿತು, "ಇದನ್ನು ನನಗೆ ಹೇಳಿದವರಾರು? ಹೆಣ್ಣೋ? ಗಂಡೋ? ಯಾವುದೂ

ಗೃಹಸ್ಥಾಶ್ರಮವನ್ನು ಸ್ವೀಕರಿಸಿದ್ದಾರೆ. ವೇದೋಕ್ತ ವಾದ ಕರ್ಮಗಳನ್ನು ನಡೆಯಿಸಬೇಕಾದರೆ ಗೃಹಸ್ಥಾ ಶ್ರಮ ಹೊರತು ಬೇರೊಂದು ಮಾರ್ಗವಿಲ್ಲ. ಬೇರೆ ಆಶ್ರಮಗಳು ಗೃಹಸ್ಥಾಶ್ರಮಕ್ಕೆ ಸಾಟಿ ಬಾರವು. ಅಷ್ಟುಮಾತ್ರವಲ್ಲದೆ ಪಂಚೇಂದ್ರಿಯಗಳ ಶಕ್ತಿ ಅತ್ಯಂತ ಬಲಿಷ್ಠವಾದುವು. ಹೆಂಡತಿ ಇಲ್ಲದವನನ್ನು ಅವುಗಳು ಅವಲೀಲೆಯಾಗಿ ಅಧೋಲೋಕಕ್ಕೆ ತಳ್ಳಿ ಬಿಡುತ್ತವೆ. ಅವನು ಎಷ್ಟು ದೊಡ್ಡ ಪಂಡಿತ ನಾದರೂ ಸರಿಯೇ! ಅಂತಹ ಇಂದ್ರಿಯಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳಬೇಕಾದರೆ ಮದುವೆ ಮಾಡಿಕೊಳ್ಳಬೇಕು. ಮುದುಕತನವು ಬಂದಾಗಲೇ ತಪಸ್ಸು ಮಾಡಬೇಕು. ಆದುದರಿಂದ ನೀನು ಮದುವೆಗೆ ಒಪ್ಪಿಕೋ" ಎಂದನು ವ್ಯಾಸ.

ಶುಕನು ತಂದೆಯ ವಾದನಗಳಿಗೆ ಆಮೋದ ವೀಯದೆ, ಸಂಸಾರವನ್ನು ನಿಂದಿಸುತ್ತ ಹೀಗೆಂದನು: "ಏನೇ ಹೇಳಿದರೂ ಮನೆಯೆಂಬುದೇ ಒಂದು

ಅಲ್ಲವೋ ?" ಎಂದು ಏನೂ ನಿರ್ಧರಿಸಲಾಗದೆ ಅವನು ಆ ಅರ್ಧ ಶ್ಲೋಕವನ್ನೇ ಪಠಿಸಲು ತೊಡಗಿ ಬೆಳೆಯುತ್ತಾ ಬಂದನು. ಅಷ್ಟರಲ್ಲಿ ಮಹಾ ದೇವಿ ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗದಾ ಪದ್ಮ ಗಳನ್ನು ಧರಿಸಿ, ಬಂಗಾರದ ಬಟ್ಟೆ ತೊಟ್ಟವಳಾಗಿ, ಕಿರುನಗುವನ್ನು ಸೂಸುತ್ತ, ತನ್ನಂತೆಯೇ ಇರುವ ಶಕ್ತಿದೇವತೆಯರನ್ನು ತನ್ನೊಂದಿಗಿಟ್ಟುಕೊಂಡು ವಿಷ್ಣು ವಿನ ಇದಿರಿನಲ್ಲಿ ಪ್ರತ್ಯಕ್ಷಳಾದಳು.

ವಿಷ್ಣು ಆ ದಿವ್ಯ ದೃಶ್ಯವನ್ನು ನೋಡಿ ಏನೂ ಹೇಳಲಾಗದೆ ದಿಗ್ಭ್ರಾಂತನಾದನು. ಆಗ ದೇವಿ ಅವನೊಂದಿಗೆ, "ನೀನು ಸಗುಣನಾದವನು. ನಾನು ಸತ್ವಶಕ್ತಿ. ನಿನ್ನ ಹೊಕ್ಕುಳ ಕಮಲದಲ್ಲಿ ಬ್ರಹ್ಮನು ಹುಟ್ಟಿ ರಜೋಗುಣದವನಾಗಿ ಎಲ್ಲಾ ಲೋಕಗಳನ್ನೂ ಸೃಷ್ಟಿ ಮಾಡುವನು. ಅವನು ಮಾಡಿದ ಸೃಷ್ಟಿಗೆ ನೀನು ಪಾಲಕನಾಗಿರುವೆ. ಆ ಬ್ರಹ್ಮದೇವನ ಕಣ್ಣು-ಪಾಪೆಗಳ ನಡುವಿನಿಂದ, ಕ್ರೋಧವಶಾತ್ ರುದ್ರನು ಹುಟ್ಟುತ್ತಾನೆ. ಆ ರುದ್ರನು ತೀವ್ರವಾದ ತಪಸ್ಸು ಮಾಡಿ, ಅದರ ಮೂಲಕ ತಾಮಸಗುಣ ಪಡೆದವ ನಾಗಿ, ಪ್ರಳಯ ಕಾಲದಲ್ಲಿ ಬ್ರಹ್ಮನು ಸೃಷ್ಟಿಸಿದ ಪ್ರಪಂಚವನ್ನೆಲ್ಲಾ ನಾಶ ಮಾಡಿಬಿಡುತ್ತಾನೆ. ನೀನು ನನ್ನ ಸಹಾಯದಿಂದಲೇ ಪ್ರಪಂಚವನ್ನು ಪೋಷಿಸ ಬೇಕಾಗಿದೆಯಪ್ಪಾ. ಆದುದರಿಂದ ಸತ್ವಶಕ್ತಿಯಾದ ನನ್ನನ್ನು ನೀನು ಧರಿಸಿಕೊಳ್ಳಬೇಕು. ನಾನು ಯಾವಾ ಗಲೂ ನಿನ್ನ ವಕ್ಷಸ್ಥಳದಲ್ಲಿಯೇ ಇರುತ್ತೇನೆ. ಅರ್ಥ ವಾಯಿತೆ ?" ಎಂದಳು,

ಅದಕ್ಕೆ ವಿಷ್ಣು ಅವಳನ್ನು ನೋಡಿ, "ಆಯಿತು. ಒಂದು ವಿಷಯ ಗೊತ್ತಾಗಲಿಲ್ಲ. ಅದೇನೆಂದರೆ ನಾನೊಂದು ಶ್ಲೋಕವನ್ನು ಕೇಳಿದೆನು. ಅದನ್ನು ನಾನು ಹೇಗೆ ಕೇಳಿದೆನೋ ತಿಳಿಯಲಿಲ್ಲ. ನೀನೇ ತಿಳಿಸಬೇಕು" ಎಂದನುವಿಷ್ಣು. "ಹೇಳುತ್ತೇನೆ ಕೇಳು. ನೀನು ನನ್ನನ್ನು ಸಗುಣಳೆಂದುಕೊಂಡು ನೋಡು



ತ್ತಿರುವಿ, ಹಾಗಲ್ಲ ನಾನು. ನಿನಗೆ ಆ ಅರ್ಧ ಶ್ಲೋಕ ವನ್ನು ಹೇಳಿದವಳು ನಿರ್ಗುಣಸ್ವರೂಪಿಣಿಯಾದ ಪರ ದೇವತೆ. ಇದು ಭಾಗವತವೆಂಬ ಹೆಸರಿರುವ ಮಂತ್ರ. ಪರದೇವತೆ ನಿನ್ನ ಮೇಲಿನ ಅನುಗ್ರಹದಿಂದಲೇ ನಿನಗೆ ಈ ಮಂತ್ರವನ್ನು ಉಪದೇಶಿಸಿದಳು. ಇದನ್ನು ಬಿಡದೆ ಪಠಿಸುತ್ತಾ ಇದ್ದರೆ ಶುಭಪರಂಪರೆಗಳೇ ನಡೆಯುತ್ತವೆ." ಎಂದು ಹೇಳಿ ಮಹಾದೇವಿ ಮಾಯ ವಾದಳು. ಮುಂದೆ ವಿಷ್ಣು ಆ ಮಂತ್ರದ ಬಲ ದಿಂದಲೇ ಮಧುಕೈಟಭರನ್ನು ಕೊಂದು, ಆ ರಾಕ್ಷಸರಿಗೆ ಭಯಪಟ್ಟು ತನಗೆ ಶರಣಾಗತನಾದ ಬ್ರಹ್ಮನಿಗೆ ಅದನ್ನು ಉಪದೇಶಿಸಿದನು. ಬ್ರಹ್ಮನು ನಾರದನಿಗೂ ನಾರದನು ವ್ಯಾಸ ಮಹರ್ಷಿಗೂ ಹೇಳಿದನು.

ವ್ಯಾಸ ಅದನ್ನು ಶುಕನಿಗೆ ಉಪದೇಶ ಮಾಡಿ, "ಕಂದಾ, ಇದನ್ನೇ ನಾವು ಅನೇಕ ಸಂಹಿತೆಗಳಾಗಿ ವಿಸ್ತರಿಸಿ ರಚಿಸಿದ್ದೇನೆ." ಎಂದನು. ತಂದೆ ಉಪ ದೇಶಿಸಿದ ಆ ದಿವ್ಯ ಮಂತ್ರವನ್ನು ಪಠಿಸುತ್ತಾ



ಶುಕನು ಆ ಆಶ್ರಮದಲ್ಲೇ ಇದ್ದುಬಿಟ್ಟನು. ಆದರೆ ಶುಕನ ಮುಖದಲ್ಲಿ ಏನೋ ವಿಚಾರವು ತುಂಬಿರು ವಂತೆ ವ್ಯಾಸನಿಗೆ ತೋರಿತು. ಅದನ್ನು ನೋಡಿ ಅವನು, "ಏನಪ್ಪಾ, ನೀನು ನನ್ನ ಮಗನಾಗಿದ್ದು ವಿಜ್ಞಾನವನ್ನು ಕುರಿತು ಇಷ್ಟೊಂದು ವಿಚಾರ ಮಾಡುವುದೇಕೆ? ನನ್ನ ಮಾತುಗಳು ನಿನಗೆ ಹಿಡಿಸದೆ ಹೋದರೆ ಇನ್ನೊಂದು ಕೆಲಸ ಮಾಡು. ಮಿಥಿಲಾ ನಗರದಲ್ಲಿ ಜನಕನೆಂಬ ರಾಜನಿದ್ದಾನೆ. ಅವನು ಪರಮ ಶಾಂತನಾಗಿಯೂ ಮಹಾಜ್ಞಾನಿಯಾಗಿಯೂ ಇರು ವವನು. ನೀನು ಅವನನ್ನು ಕೇಳಿ ನಿನ್ನ ಎಲ್ಲಾ ಸಂದೇಹವನ್ನೂ ತೀರಿಸಿಕೊಳ್ಳಬಹುದು." ಎಂದನು.

"ನಿಮ್ಮ ಮಾತು ವಿಚಿತ್ರವಾಗಿದೆ! ರಾಜ್ಯ ಪಾಲನೆಯೆಂದರೆ ಎಲ್ಲಾ ಪಾಪಗಳಿಗೂ ಮೂಲ ವಲ್ಲವೆ? ಹಾಗಿರುವಾಗ ಈ ಜನಕನು ಹೇಗೆ ಜ್ಞಾನಿ ಯಾದನೆಂಬುದನ್ನು ನೋಡಲೇಬೇಕು. ಅದೂ ಒಳ್ಳೆಯದೇ. ಹೋಗಿ ಬರುತ್ತೇನೆ ಎಂದನು ಶುಕ."

"ಹೋಗಿಬಾ ಕುಮಾರಾ! ನನ್ನ ಪಂಚಪ್ರಾಣಗಳೂ ನಿನ್ನ ಮೇಲೆಯೇ ಇವೆ. ನಿನ್ನ ಎಲ್ಲಾ ವಿಧದ ಸಂಶಯ ಗಳನ್ನೂ ತೀರಿಸಿಕೊಂಡು ಆ ಕೂಡಲೇ ತಿರುಗಿ ಬಂದು ಬಿಡು." ಎಂದು ಹೇಳಿ ವ್ಯಾಸನು ತನ್ನ ಮಗನನ್ನು ಕಳುಹಿಸಿಕೊಟ್ಟನು.

### ಮಿಥಿಲೆಯಲ್ಲಿ ಶುಕ

ಶುಕನು ತಂದೆಯ ಕಾಲಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಅಪ್ಪಣೆ ಪಡೆದು ಮಿಥಿಲಾ ನಗರಕ್ಕೆ ಹೊರಟು, ದಾರಿಯಲ್ಲಿ ತಗಲಿದ ಅನೇಕ ದೇಶ ಗಳನ್ನೂ, ಅರಣ್ಯಗಳನ್ನೂ, ಪರ್ವತಗಳನ್ನೂ, ಕ್ಷೇತ್ರ ಗಳನ್ನೂ, ಋಷ್ಯಾಶ್ರಮಗಳನ್ನೂ, ನೋಡುತ್ತ, ಎರಡು ವರುಷಗಳಲ್ಲಿ ಮೇರು ಪರ್ವತ ಪ್ರಾಂತ ವನ್ನು ದಾಟಿ, ಹಿಮಾಲಯ ಪ್ರಾಂತವನ್ನು ಮತ್ತೊಂದು ವರ್ಷದಲ್ಲಿ ದಾಟಿ, ಮಿಥಿಲಾ ನಗರ ವನ್ನು ತಲಪಿಸಿದನು. ನಗರ ದ್ವಾರದ ಹತ್ತಿರ ಅವನು ವಿಚಿತ್ರಗಳನ್ನು ನೋಡುವವನಂತೆ ನಿಂತಿರಲು, ದ್ವಾರ ಪಾಲಕನೊಬ್ಬನು ಅವನನ್ನು ನೋಡಿ, "ಯಾರು ನೀನು? ಏನು ಕೆಲಸದ ಮೇಲೆ ಹೊರಟಿರುವೆ?" ಎಂದು ಕೇಳಿದನು.

ಶುಕನು ಅವನಿಗೆ ಯಾವ ಪ್ರತ್ಯುತ್ತರವನ್ನೂ ಕೊಡದೆ ನಗರದ್ವಾರದ ಹೊರಗೆ ಕಲ್ಲಿನ ಪ್ರತಿಮೆ ಯಂತೆ ಸುಮ್ಮನೆ ಕುಳಿತನು.

"ಹಾಗೆ ಕುಳಿತರೆ ಏನು ಅರ್ಥ? ಅನುಮತಿ ಇಲ್ಲದೆ ಒಳಗೆ ಹೋಗಬಹುದೆಂದು ಅಂದು ಕೊಂಡೆಯಾ? ನಿನ್ನನ್ನು ನೋಡಿದರೆ ವೇದಾಧ್ಯಯನ ಮಾಡಿದ ಬ್ರಾಹ್ಮಣನ ಹಾಗೆ ಕಾಣುವೆ. ನಿನ್ನ ಕುಲ ಗೋತ್ರಗಳನ್ನೂ, ರಾಜರೊಂದಿಗೆ ನಿನಗೇನು ಕೆಲಸ ವೆಂಬುದನ್ನೂ ಹೇಳದಿದ್ದರೆ ಒಳಗೆ ಹೋಗಲು ಸಾಧ್ಯವಿಲ್ಲ." ಇಲ್ಲಿಯ ನಿಯಮವೇ ಹಾಗಿದೆ ಎಂದು ದ್ವಾರಪಾಲಕನು ಮತ್ತೊಮ್ಮೆ ಹೇಳಿದನು. ಅದಕ್ಕೆ ಶುಕನು, "ನಾನು ರಾಜನ ಹತ್ತಿರ ಯಾವ

ಕೆಲಸಕ್ಕಾಗಿ ಬಂದೆನೋ ಆ ಕೆಲಸವನ್ನು ದ್ವಾರದ ಹತ್ತಿರ ನೀನೇ ತೀರಿಸಿದೆ. ಇನ್ನು ವಿಚಾರವೇಕೆ? ನಾನು ಯಾವ ಕಷ್ಟಗಳನ್ನೂ ಲಕ್ಷ್ಯಮಾಡದೆ ಮೇರು ಪರ್ವತವನ್ನು ದಾಟಿ, ಹಿಮಾಲಯವನ್ನು ದಾಟಿ ಈ ರಾಜನನ್ನು ನೋಡಬೇಕೆಂಬ ದುರಾಶೆಯಿಂದ ಬಂದೆನಲ್ಲ! ಅದು ನನ್ನದೇ ತಪ್ಪು. ಸಾಧಾರಣ ವಾಗಿ ಮನುಷ್ಯರು ಹಣಕ್ಕಾಗಿ ದೇಶದೇಶಗಳನ್ನು ತಿರುಗುತ್ತಾರೆ. ನನಗೆ ಧನದ ಆಶೆ ಇಲ್ಲದಿದ್ದರೂ ನನ್ನ ಕರ್ಮದಿಂದ ನಾನು ದೇಶಗಳನ್ನೆಲ್ಲಾ ತಿರುಗಿದೆ. ಎಲ್ಲಿಯ ಮೇರುಪರ್ವತ? ಎಲ್ಲಿಯ ಮಿಥಿಲೆ? ಬರಿ ಗಾಲಿನಲ್ಲಿ ನಡೆಯುತ್ತ ಇಷ್ಟುದೂರ ಬಂದೆನೆಂದರೆ ಅದು ನನ್ನ ಪ್ರಾರಬ್ಧಕರ್ಮ ಹೊರತು ಫಲವೇನಾ ದರೂ ಇದೆಯೆ? ನಾನು ಪಟ್ಟ ಇಷ್ಟೆಲ್ಲಾ ಶ್ರಮಕ್ಕೆ ಫಲಿತವೇನೆಂದರೆ ಯಾವನೋ ಸೇವಕನೊಬ್ಬ ಮುಂದೆ ಹೋಗದಂತೆ ತಡೆಯುತ್ತಾನೆ! ಬುದ್ಧಿನೀತಿ ಕಲಿಸುತ್ತಾನೆ!" ಎಂದನು.

ಇವನಾವನೋ ಮಹಾತ್ಮನಾಗಿರಬೇಕೆಂದು ದ್ವಾರ ಪಾಲಕನಿಗೆ ಗೊತ್ತಾಯಿತು. ಅವನು ಶುಕನ ಹತ್ತಿರ ಬಂದು ವಿನಯದಿಂದ ಬಾಗಿ ಕೈಮುಗಿದು, "ಅಡ್ಡ ತಡೆದುದಕ್ಕೆ ನನ್ನನ್ನು ದಯವಿಟ್ಟು ಮನ್ನಿಸಿರಿ. ಒಳಗೆ ಹೋಗಿರಿ. ನಿಮ್ಮಂಥವರನ್ನು ಯಾರು ತಾನೇ ತಡೆಯುವರು?" ಎಂದನು.

"ನಿನ್ನ ವಿಧಿಯನ್ನು ನೀನು ನೆರವೇರಿಸಿದರೆ ಅದು ತಪ್ಪು ಹೇಗಾದೀತು? ನಿನ್ನದೇನೂ ತಪ್ಪಿಲ್ಲ. ರಾಜನು ನಿನಗೆ ಹಾಗೆ ಆಜ್ಞೆಮಾಡಿದ್ದಾನೆ. ನಿಜಕ್ಕೂ ರಾಜನದೂ ತಪ್ಪು ಇಲ್ಲ. ಆಲೋಚನೆ ಮಾಡದೆ ಇಲ್ಲಿಗೆ ಬಂದದ್ದೇ ತಪ್ಪು. ಅದು ನನ್ನದೇ ತಪ್ಪು!" ಎಂದನು ಶುಕ.

ದ್ವಾರಪಾಲಕನು ಅವನನ್ನು ಒಳಗೆ ಹೋಗು ವಂತೆ ಪುನಃ ಪ್ರಾರ್ಥಿಸಿದನು. ಶುಕನು ಒಳಗೆ ಹೋಗಿ ರಾಜಮಂದಿರವನ್ನು ಮುಟ್ಟಿದಾಗ ಅಲ್ಲಿರುವ ದ್ವಾರ



ಪಾಲಕನು ಅಡ್ಡ ತಡೆದನು. ಶುಕನು ಶಿಲೆಯಂತ ಅಲ್ಲಿಯೇ ಸುಮ್ಮನೆ ನಿಂತಿರುವಾಗ, ಆ ದಾರಿಯಾಗಿ ಒಬ್ಬ ಮಂತ್ರಿ ಬಂದು ಶುಕನನ್ನು ನೋಡಿ ನಮ ಸ್ಕಾರಮಾಡಿ, ತನ್ನೊಂದಿಗೆ ಕರೆದುಕೊಂಡು ಸುಂದರ ವಾದ ರಾಜೋದ್ಯಾನಕ್ಕೆ ಹೋದನು. ಅಲ್ಲಿ ಅವನು ಶುಕನಿಗೆ ಅತಿಥಿಸತ್ಕಾರಗಳನ್ನು ಮಾಡಿ, ಎಲ್ಲಾ ಶೃಂಗಾರ ಕಲೆಗಳಲ್ಲಿಯೂ ಅಸಾಧಾರಣ ಪ್ರಜ್ಞೆ ಯುಳ್ಳವರಾದ, ಅಪ್ಸರಸಿಯರನು ಮೀರಿಸುವ ಸುಂದರಿಯರಾದ, ವೇಶ್ಯಾಸ್ತ್ರೀಯರನ್ನು ಕರೆಯಿಸಿ ಶುಕನಿಗೆ ಪರಿಚರ್ಯೆ ಮಾಡಿಸುವ ಏರ್ಪಾಡು ಮಾಡಿ ಹೊರಟುಹೋದನು. ಶುಕನು ಅಲ್ಲಿಯೇ ವಿಶ್ರಮಿಸಿಕೊಂಡಿದ್ದನು.

ಅವನ ಸೇವೆಗಾಗಿ ನಿಯೋಜಿಸಲ್ಪಟ್ಟ ವೇಶ್ಯೆ ಯರು ಅವನಿಗೆ ಬಗೆಬಗೆಯ ಭಕ್ಷ್ಯಭೋಜ್ಯಗಳನ್ನು ಕೊಟ್ಟು, ಅವನನ್ನು ಸಂತೋಷಪಡಿಸಿದರು. ಅವನ ಅಂದಚೆಂದ ಸೌಕುಮಾರ್ಯಗಳಿಗೆ ಅವರೇ ಮೋಹಿಸಿ,



ತಮ್ಮ ಮೋಹವನ್ನು ಅವನ ಮುಂದೆ ತೋರಿಸಿದರು. ಆದರೆ ಶುಕನು ಸ್ವಲ್ಪವೂ ಚಲಿಸಲಿಲ್ಲ. ಅವನು ಇಂದ್ರಿಯಗಳನ್ನು ಜಯಿಸಿದವನೆಂಬುದನ್ನು ತಿಳಿದು ಆ ಸ್ತ್ರೀಯರು, ಶೃಂಗಾರ ಚೇಷ್ಟೆಗಳನ್ನು ಬಿಟ್ಟು, ಭಯಭಕ್ತಿಯಿಂದ ಸಾಧಾರಣ ಸೇವೆಗಳನ್ನು ಮಾಡುತ್ತ, ರಾತ್ರಿ ಅವನು ಮಲಗಲು ಒಳ್ಳೆಯ ಹಾಸಿಗೆ ಹಾಸಿಕೊಟ್ಟರು. ಶುಕನು ಆ ರಾತ್ರಿ ನಿದ್ರೆ ಮಾಡಿ ಬೆಳಗಿನ ಜಾಮದಲ್ಲಿ ಎದ್ದನು. ಆಗ ಅವನ ಪ್ರಯಾಣದ ಬಳಲಿಕೆಗಳು ಕಡಮೆಯಾಗಿದ್ದುವು. ಬೆಳಗಾಗುವವರೆಗೂ ಧ್ಯಾನದಲ್ಲಿದ್ದನು. ಆಮೇಲೆ ಕಾಲಕೃತ್ಯಗಳನ್ನು ತೀರಿಸಿ ಮತ್ತೆ ತಪಸ್ಸಮಾಧಿಯಲ್ಲಿ ಕುಳಿತುಬಿಟ್ಟನು.

### ಶುಕ-ಜನಕ ಸಂವಾದ

ಶುಕನು ತನ್ನ ಮಂದಿರಕ್ಕೆ ಬಂದಿರುವ ಸಂಗತಿಯನ್ನು ತಿಳಿದು ಜನಕಮಹಾರಾಜನು ತನ್ನ ಪುರೋಹಿತನೊಂದಿಗೆ ಶುಕನ ಬಳಿಗೆ ಬಂದು, ಅರ್ಘ್ಯ ಕೊಟ್ಟು ಕುಶಲಪ್ರಶ್ನೆಗಳನ್ನು ಮಾಡಿದನು. ಒಂದು ಗೋವನ್ನು ಶುಕನಿಗೆ ಕೊಟ್ಟು ಗೌರವಿಸಿದನು. ಶುಕನು ಕೂಡ ಜನಕರಾಜನನ್ನು ಗೌರವದಿಂದ ಮಾತಾಡಿಸಿದನು.

ಶುಕನ ಆಗಮನಕ್ಕೆ ಕಾರಣವೇನೆಂದು ಜನಕನು ಕೇಳಲು, ಶುಕನು ಹೀಗೆಂದನು: "ರಾಜಾ, ನನ್ನ ತಂದೆಯ ಆಜ್ಞೆಯ ಮೇರೆಗೆ ಇಲ್ಲಿಗೆ ಬಂದೆನು. ನನ್ನ ತಂದೆ ವ್ಯಾಸರು ನನಗೆ ಉಪನಯನ, ವಿದ್ಯಾಭ್ಯಾಸಗಳನ್ನೆಲ್ಲಾ ಮಾಡಿಸಿದರು. ಆದಾದ ಮೇಲೆ ನನ್ನನ್ನು ಮದುವೆ ಮಾಡಿಕೊಳ್ಳಲು ಹೇಳಿದರು. ನಾನು ಸಂಸಾರಬಂಧಗಳಿಗೆ ಹೆದರಿ ಮದುವೆ ಬೇಡವೆಂದು ಹೇಳಿದೆ. ಧರ್ಮಾರ್ಥಕಾಮಮೋಕ್ಷಗಳನ್ನು ಸಾಧಿಸಲಿಕ್ಕೆ ಗೃಹಸ್ಥಾಶ್ರಮವೇ ಉತ್ತಮ ಮಾರ್ಗವೆಂದು ಅವರು ಹೇಳುತ್ತಾರೆ. ನಾನು ಅಲ್ಲವೆಂದೇ ಸಾಧಿಸಿದ್ದೇನೆ. ಕಡೆಗೆ ಅವರು ಮಿಥಿಲಾನಗರಕ್ಕೆ ಹೋಗಿ ಜನಕಮಹಾರಾಜನ ದ್ವಾರಾ ನಿನ್ನ ಅನುಮಾನಗಳನ್ನು ತೀರಿಸಿಕೋ ಎಂದು ಹೇಳಿದುದರಿಂದ, ನಾನು ಮೇರುಪರ್ವತ, ಹಿಮಾಲಯಗಳನ್ನು ದಾಟಿ ಇಲ್ಲಿಗೆ ಬಂದಿದ್ದೇನೆ. ಮುಖ್ಯವಾಗಿ ನಾನು ಮೋಕ್ಷವನ್ನು ಕೋರುತ್ತೇನೆ. ಹಾಗಾದರೆ ನನ್ನ ಈಗಿನ ಕರ್ತವ್ಯವೇನು?"

ಶುಕನ ಮಾತಿಗೆ ಜನಕನು ತಲೆದೂಗುತ್ತ ಹೀಗೆಂದನು: "ನೀನು ನಿಜಕ್ಕೂ ಮೋಕ್ಷವನ್ನು ಬಯಸುವಿಯಾದರೆ ಮೊದಲು ಉಪನಯನ ಮಾಡಿಕೊಂಡು, ವೇದಾದಿವಿದ್ಯೆಗಳನ್ನು ಕಲಿತು, ಗುರುದಕ್ಷಿಣೆ ಕೊಟ್ಟು, ಗುರುವಿನ ಅಪ್ಪಣೆ ಪಡೆದು ಮದುವೆ ಮಾಡಿಕೊಂಡು, ಹೆಂಡತಿಯೊಂದಿಗೆ, ಆಚಾರನಿಯಮಗಳನ್ನು ಪಾಲಿಸುತ್ತಾ, ಕರ್ಮಗಳನ್ನು ಮಾಡುತ್ತಾ, ಗೃಹಸ್ಥಧರ್ಮದಲ್ಲಿ ಸಂಸಾರಮಾಡುತ್ತ ಮಕ್ಕಳನ್ನೂ ಮೊಮ್ಮಕ್ಕಳನ್ನೂ ಪಡೆಯಬೇಕು. ಆಮೇಲೆ ಅರಣ್ಯಕ್ಕೆ ಹೋಗಿ ವಾನಪ್ರಸ್ಥಾಶ್ರಮ

ವನ್ನು ಕೈಕೊಂಡು, ಕಾಮಕ್ರೋಧಾದಿಗಳನ್ನು ತ್ಯಜಿಸಿ, ಅಗ್ನಿಗಳನ್ನು ತನ್ನಲ್ಲೇ ಆವಹಿಸಿಕೊಳ್ಳುವಂತೆ ಮಾಡಿ, ವೈರಾಗ್ಯವನ್ನು ಅವಲಂಬಿಸಿ ಹೆಂಡತಿಯನ್ನೂ ಮಕ್ಕಳನ್ನೂ, ಎಲ್ಲಾ ಮಮಕಾರಗಳನ್ನೂ ಬಿಟ್ಟು ಸನ್ಯಾಸವನು ಸ್ವೀಕರಿಸಬೇಕು. ಅದಾವುದನ್ನೂ ಮಾಡದೆ ಸನ್ಯಾಸವನ್ನು ಸ್ವೀಕರಿಸುವುದೆಂಬ ಮಾತು ಅಸಂದರ್ಭವಾಗಿದೆ. ಪೂರ್ತಿವೈರಾಗ್ಯವು ಉಂಟಾದಾಗಲೇ ಸನ್ಯಾಸವನ್ನು ತೆಗೆದುಕೊಳ್ಳಬೇಕಷ್ಟೆ. ಮಾನವನಿಗೆ ನಲುವತ್ತೆಂಟು ಸಂಸ್ಕೃತಿಗಳಿವೆ. ಅದರಲ್ಲಿ ನಲುವತ್ತು ಗೃಹಸ್ಥನಿಗೆ. ಎಂಟು ಸನ್ಯಾಸಿಗೆ."

ಆಗ ಶುಕನು ಹೀಗೆ ಪ್ರಶ್ನೆಮಾಡಿದನು: "ರಾಜಾ, ಮನಸ್ಸಿನಲ್ಲಿ ವೈರಾಗ್ಯವು ಬೇರೂರಿರುವಾಗ ಸನ್ಯಾಸ ತೆಗೆದುಕೊಳ್ಳುವುದರಲ್ಲಿ ತಪ್ಪೇನಿದೆ?"

"ಈ ಮಾತು ನಂಬತಕ್ಕುದಲ್ಲ. ಏಕೆಂದರೆ ಒಮ್ಮೆಗೇ ಇಂದ್ರಿಯಗಳನ್ನು ಜಯಿಸಲು ಸಾಧ್ಯವಿಲ್ಲ. ಎಷ್ಟೇ ದೊಡ್ಡ ಪಂಡಿತನಾದರೂ ಅವುಗಳಿಗೆ ಬಾಗಿ ಹೋಗಿಬಿಡುವನು. ಇನ್ನು ಸಾಮಾನ್ಯ ಮನುಷ್ಯನ ಸಂಗತಿ ಹೇಳುವುದೇನಿದೆ? ಮನುಷ್ಯನಿಗೆ ಅಡಿಗಡಿಗೂ ವಿಕಾರಗಳೇ. ರುಚಿಗಳ ಆಶೆ, ನಿದ್ರೆಯ ಸುಖ, ಸೊಗಸುಗಳ ಕೋರಿಕೆ, ಪುತ್ರಾಕಾಂಕ್ಷೆ ಮುಂತಾದುವೆಲ್ಲಾ ಸನ್ಯಾಸಿಗೆ ತೀರುವ ಬಗೆ ಹೇಗೆ? ಕೋರಿಕೆಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಹೇಗೆ? ಆದುದರಿಂದಲೇ ಎಲ್ಲಾ ಭೋಗಗಳನ್ನೂ ಅನುಭವಿಸಿದ ಮೇಲೆಯೇ ಬಿಟ್ಟುಬಿಡಬೇಕು. ಮುಂದಾಗಿಯೇ ಬಿಟ್ಟುಬಿಡುವುದೆಂದರೆ ಏನು ಅರ್ಥ? ಎತ್ತರದ ಸ್ಥಳದಲ್ಲಿ ಮಲಗಿದವನು ಒಂದು ದಿನ ಕೆಳಗೆ ಬಿದ್ದುಬಿಡುತ್ತಾನೆ. ಯಾವನಾದರೂ ಸನ್ಯಾಸವನ್ನು ಸ್ವೀಕರಿಸಿ, ವೈರಾಗ್ಯದಿಂದಿರಲು ಸಾಧ್ಯವಾಗದೆ, ಭೋಗಗಳ ಮೇಲೆ ಆಸಕ್ತಿ ಉಂಟಾಗಿಬಿಟ್ಟರೆ, ಅವನಿಗೆ ಉಭಯಭ್ರಷ್ಟತೆಯಾಗಿ ನರಕವೇ ಗತಿ! ಜ್ಞಾನವನ್ನು ಕ್ರಮವಾಗಿ ಸಂಪಾದಿಸುತ್ತ ಕಡೆಗೆ ಸನ್ಯಾಸಿಯಾಗಬೇಕು. ಮನಸ್ಸು ಸುಲಭದಲ್ಲಿ ಬಾಗಿ ಬಿಡುವಂತಹದಲ್ಲ. ಅದನ್ನು ಸಾವಕಾಶವಾಗಿ ಸರಿಯಾದ ದಾರಿಗೆ ತರಬೇಕು. ಗೃಹಸ್ಥನಾಗಿರುತ್ತ ಶಾಂತತೆಯನ್ನು ಅವಲಂಬಿಸಿ, ಲಾಭ ಬಂದರೆ ಉಬ್ಬಿ ಹೋಗದೆ, ನಷ್ಟವಾದರೆ ಕುಗ್ಗಿ ಇಳಿಯದೆ ತ್ಯಾಗಮಯವಾದ ಜೀವನವನ್ನು ನಡೆಸುವವನಿಗೆ ಕಡೆಗೆ ಮೋಕ್ಷವು ಸಿಗುತ್ತದೆ. ನನ್ನನ್ನು ನೋಡು. ನಾನು ಎಷ್ಟು ಭೋಗಗಳನ್ನಾದರೂ ಅನುಭವಿಸುವವನು. ಯಥೇಚ್ಛೆಯಾಗಿ ಜೀವಿಸುವವನು. ಆದರೂ ಮನಸ್ಸನ್ನು ಬಹುನಿರ್ಮಲವಾಗಿ ಇಟ್ಟುಕೊಂಡಿದ್ದೇನೆ. ಸತ್ತು ಮೋಕ್ಷಕ್ಕೆ ಹೋಗುತ್ತೇನೆ. ನೀನು ಕೂಡಾ ಹಾಗೆಯೇ ಜೀವಿಸಬಹುದಷ್ಟೆ?" ಎಂದು ಜನಕನು ಶುಕನಿಗೆ ಉಪದೇಶ ಮಾಡಿದನು.





# ದೇವೀಭಾಗವತ

ಜನಕ ಮಹಾರಾಜನು ಹೇಳಿದ ಮಾತು ಕೇಳಿ ಶುಕನು "ರಾಜಾ, ನೀವು ಹೇಳಿದ ಮಾತುಗಳನ್ನು ಆತ್ಯಾಸಕ್ತಿಯಿಂದ ಕೇಳಿದೆನು. ಬಹಳ ಸಂತೋಷವೂ ಆಯಿತು. ನನ್ನ ತಂದೆ ಸರಿಯಾದ ಸ್ಥಳಕ್ಕೆ ನನ್ನನ್ನು ಕಳುಹಿಸಿದ್ದಾರೆ. ಆದರೆ ನನ್ನ ಸಂದೇಹವು ತೀರಲಿಲ್ಲ. ಮದುವೆಯಾದ ಮೇಲೆ ಹೆಂಡತಿಯೊಂದಿಗೆ ಸುಖ ಪಡುತ್ತಿದ್ದರೆ, ಮನುಷ್ಯನು ಆದರಲ್ಲೇ ಸಿಕ್ಕಿಕೊಂಡು ಕಷ್ಟಪಡುತ್ತಾನೆ. ಸುಖಪಡದೆಹೋದರೆ, ಅಥವಾ ಸುಖವಿಲ್ಲದೇ ಹೋದರೆ ಖಿನ್ನನಾಗುತ್ತಾನೆ. ಅಂತಹವನಿಗೆ ಮೋಕ್ಷ ಹೇಗೆ ?" ಎಂದು ಕೇಳಿದನು.

"ತಾವರೆ ಎಲೆಯ ಮೇಲಿನ ನೀರಿನ ಹಾಗೆ ನಿರ್ಲಿಪ್ತವಾಗಿ ಮಾಡುವ ಕರ್ಮಗಳು ಕೆಟ್ಟವೇ ಆದರೂ ಒಳಿತನ್ನೇ ಮಾಡುತ್ತವೆ" ಎಂದನು ಜನಕ.

"ಮಾಯೆಯಲ್ಲಿ ಸಿಕ್ಕಿಕೊಂಡವನು ನಿರ್ಲಿಪ್ತನು ಹೇಗಾಗುತ್ತಾನೆ ? ದೀಪದ ಹೆಸರು ಹೇಳಿದ ಮಾತ್ರಕ್ಕೇ ಕತ್ತಲೆ ಓಡಿಹೋಗುವುದಿಲ್ಲವಷ್ಟೆ ? ಹಾಗೆಯೇ ಶಾಸ್ತ್ರಜ್ಞಾನ ಸಂಪಾದಿಸಿದ ಮಾತ್ರದಿಂದ ಮನುಷ್ಯನಲ್ಲಿರುವ ಅಜ್ಞಾನವು ಹೋಗಿಬಿಡುವುದಿಲ್ಲವಷ್ಟೇ ? ಆಚರಣೆಯ ಅನುಭವವು ಇರಬೇಕಲ್ಲವೆ ? ನೀವು ರಾಜರಾಗಿರುವುದರಿಂದ ನಿಮಲ್ಲಿ ಧನವಾಂಛೆ, ಸ್ತ್ರೀವಾಂಛೆ, ಪುತ್ರವಾಂಛೆ, ರಾಜ್ಯವಾಂಛೆಗಳು ಇರುತ್ತವಷ್ಟೆ ? ರಾಜರಾಗಿರುವುದರಿಂದ ದುಷ್ಟ ಶಿಕ್ಷಣ ಶಿಷ್ಟರಕ್ಷಣ ಮಾಡದಿರಲು ಸಾಧ್ಯವಿಲ್ಲವಷ್ಟೆ ? ಆದುದರಿಂದ ನೀವು ಜೀವನ್ಮುಕ್ತರಾಗಿರುವುದು ಹೇಗೆ ಸಾಧ್ಯ ? ಈ ಭೇದಗಳನ್ನು ನಡೆಯಿಸಿಕೊಂಡು ಹೋಗುವ ನಿಮಗೆ ಮೋಕ್ಷಬರುತ್ತದೆಂಬುದನ್ನು ಹೇಗೆತಾನೇ ನಂಬಲಿ ? ನಾನೆಂದರೆ, ನನಗೆ ಏನೂ ಇಲ್ಲ. ಸುಖವೂ ಇಲ್ಲ. ದುಃಖವೂ ಇಲ್ಲ. ಶತ್ರುವೂ ಇಲ್ಲ. ನನ್ನದೆಂದು ಅಧಿಕಾರ ನಡೆಸಲು ಸಣ್ಣ ಹಳ್ಳಿ ಕೂಡ ಇಲ್ಲ. ಕಾಡು ಮೃಗದ ಹಾಗಿರುವವನು ನಾನು. ನನ್ನಂಥವನಿಗಲ್ಲವೇ ನಿಜವಾದ ಮುಕ್ತಿ ?" ಎಂದು ಶುಕನು ಕೇಳಿದನು.

"ನೀನು ಎಷ್ಟು ಮಾತ್ರಕ್ಕೂ ಅಡವಿ ಮೃಗದಂಥವನಲ್ಲ. ಮನಸ್ಸಿನಲ್ಲಿ ಎಲ್ಲವನ್ನೂ ಅರಿತವನು. ಸನ್ಯಾಸಿ

೫. ಮತ್ಸ್ಯಗಂಧಿಯ ಜನನ



ಯಾಗಿ ಕಾಡಿನಲ್ಲಿದ್ದ ಮಾತ್ರಕ್ಕೆ ವಿಚಾರಗಳೂ ಚಿಂತನೆಗಳೂ ಹೋಗಿಬಿಡುವುದಿಲ್ಲ. ಮಮಕಾರವನ್ನು ಬಿಟ್ಟು ಯಾವ ಮಾರ್ಗವನ್ನು ಅವಲಂಬಿಸಿದರೂ ಮೋಕ್ಷ ಪಡೆಯಬಹುದು. ಮಮಕಾರವನ್ನು ಬಿಡದೇ ಹೋದರೆ ಯಾವ ಮಾರ್ಗವನ್ನು ಅವಲಂಬಿಸಿದರೂ ಮುಕ್ತಿಬರಲಾರದು." ಎಂದನು ಜನಕರಾಜ.

"ನಿಮ್ಮ ಮಾತು ನಿಜ" ಎಂದು ಶುಕನು ತೃಪ್ತನಾಗಿ ಜನಕನಿಂದ ಅಪ್ಪಣೆಪಡೆದು ಹಿಂದಿರುಗಿ ತಂದೆಯ ಬಳಿಗೆಬಂದನು.

"ಅಪ್ಪಾ, ಜನಕರಾಜನು ನಿನ ಸಂದೇಹಗಳನ್ನೆಲ್ಲ ತೀರಿಸಿದನೇ ?" ಎಂದು ವ್ಯಾಸನು ಶುಕನನ್ನು ಕೇಳಿದನು. "ಹೌದು. ಮನಸ್ಸು ತಿಳಿಯಾಗಿದೆ. ಆ ಜನಕನ ಹಾಗೆ ಇರಲು ನನಗೇನೂ ಅಭ್ಯಂತರವಿಲ್ಲ" ಎಂದನು ಶುಕ.

ಮಗನ ಮಾತು ಕೇಳಿ ವ್ಯಾಸನಿಗೆ ಸಂತೋಷವಾಯಿತು. ಈ ಮೊದಲೇ ನೋಡಿಟ್ಟಿದ್ದ ಪೀವರಿ ಎಂಬ ಕನ್ಯೆಯನು ತಂದು ಶುಕನಿಗೆ ಮದುವೆ ಮಾಡಿದನು. ಶುಕನು ಸಂಸಾರದಲ್ಲಿ ನಿರ್ಲಿಪ್ತನಾಗಿರುತ್ತ, ಅವಳೊಂದಿಗೆ ಸಂಸಾರ ಸಾಗಿಸಿಕೊಂಡಿರಲು, ಗೌರವ ಪ್ರಭ, ದೇವಶ್ರುತ, ಭೂರಿ, ಕೃಷ್ಣ ಎಂಬ ನಾಲ್ಕು ಮಂದಿ ಮಗಂದಿರಿಗೆ ತಂದೆಯಾದನು. ಅನಂತರ ಕೀರ್ತಿ ಎಂಬ ಮಗಳೂ ಅವರಿಗೆ ಹುಟ್ಟಿದಳು. ವಿಭ್ರಾಜನ ಮಗನಾದ ಅಣುಹನೆಂಬವನೊಂದಿಗೆ ಕೀರ್ತಿಗೆ ಮದುವೆಯಾಯಿತು. ಅವಳಿಗೆ ಹುಟ್ಟಿದ ಮಗನ ಹೆಸರು ಬ್ರಹ್ಮದತ್ತ.

ಬ್ರಹ್ಮದತ್ತನು ರಾಜನಾಗಿ ಪ್ರಜಾಪರಿಪಾಲನೆ ಮಾಡಿಕೊಂಡಿರುವಾಗ ಒಂದು ದಿನ ನಾರದಮುನಿ ಅವನನು ನೋಡಲು ಬಂದನು. ನಾರದನು ಅವನಿಗೆ ಮಾಯಾಬೀಜೋಪದೇಶವನ್ನು ಉಪದೇಶಿಸಿದುದರಿಂದ ಅವನಲ್ಲಿ ಜ್ಞಾನೋದಯವಾಯಿತು. ಅದರೊಂದಿಗೆ ವೈರಾಗ್ಯವೂ ಹುಟ್ಟಿದುದರಿಂದ ಅವನು ರಾಜ್ಯ ಭಾರವನ್ನು ಮಗನ ಮೇಲೆಹಾಕಿ ತಪಸ್ಸು ಮಾಡಲು ಬದರಿಕಾಶ್ರಯಕ್ಕೆ ಹೊರಟುಹೋದನು.

ಶುಕನು ಕೂಡಾ ವೃದ್ಧಾಪ್ಯವು ಪ್ರಾಪ್ತವಾಗುವಾಗ ತಂದೆಯನ್ನು ಬಿಟ್ಟು ಕೈಲಾಸ ಶಿಖರಕ್ಕೆ ಹೋದನು. ಅಲ್ಲಿ ಸ್ವಲ್ಪ ಕಾಲ ತಪಸ್ಸಿನಲ್ಲಿಯೂ ಧ್ಯಾನದಲ್ಲಿಯೂ ಇದ್ದನು. ಕಟ್ಟಕಡೆಗೆ ಅವನು ಕೈಲಾಸ ಶಿಖರದ ತುತ್ತತುದಿಗೆ ಹೋಗಿ ಆಕಾಶಕ್ಕೆ ಹಾರಿ ಸಿದ್ಧಿ ಹೊಂದಿದನು.

ಮಗನು ಹೊರಟು ಹೋದಮೇಲೆ ವ್ಯಾಸನಿಗೆ ತುಂಬಾ ಚಿಂತೆಯಾಯಿತು; ಬಾಧೆಯೂ ಆಯಿತು, ಇದ್ದಲ್ಲಿರಲಾಗದೆ "ಅಯ್ಯೋ! ಪುತ್ರಾ! ಶುಕಾ!" ಎಂದು ಕೂಗುತ್ತಾ ಕೈಲಾಸ ಶಿಖರಕ್ಕೆ ಹೋದನು. ಆಗ ಆಕಾಶಕ್ಕೆ ಹಾರಿದ ಶುಕನು ಪ್ರತಿಧ್ವನಿ ರೂಪದಲ್ಲಿ ತಂದೆಗೆ "ಓ ಓ! ಇದ್ದೇನೆ! ಇದ್ದೇನೆ! ನಾನು ಅಶರೀರಿಯಾಗಿದ್ದೇನೆ!" ಎಂದು ಆಕಾಶದಿಂದ ತಂದೆಗೆ ಉತ್ತರಕೊಟ್ಟನು.

ಆದರೂ ವ್ಯಾಸನು ಪುತ್ರಮೋಹದಿಂದ ಶೋಕಿಸುತ್ತಿರಲು ಶಿವನು ಅವನ ಮುಂದೆ ಬಂದು, "ನಿನ್ನ ಮಗನು ಯೋಗಿಗಳಿಗೆ ಕೂಡಾ ಲಭ್ಯವಾಗದಂತಹ ಮೋಕ್ಷವನ್ನು ಪಡೆದಿದ್ದಾನೆ. ಅವನಿಗಾಗಿ ಶೋಕಿಸುವುದು ಚೆನ್ನಾಗಿಲ್ಲ." ಎಂದನು.

"ಮಗನನ್ನು ನೋಡದೆ ನನ್ನ ಕಣ್ಣುಗಳು ತಣ್ಣಗಾಗಲಾರವು. ನನ್ನ ಮನಸ್ಸು ನನ್ನ ಹತೋಟಿಯಲ್ಲಿಲ್ಲ. ನಾನೇನು ಮಾಡಲಿ ? " ಎಂದನು ವ್ಯಾಸ.

ವ್ಯಾಸನ ಚಿಂತೆ ಪರಿಹಾರವಾಗುವಂತಹುದಲ್ಲವೆಂದು ತಿಳಿದು ಶಿವನು, "ಹಾಗಾದರೆ ನಿನ್ನ ಮಗನು ಯಾವಾಗಲೂ ನೆರಳಿನ ಹಾಗೆ ನಿನ್ನ ಜತೆಯಲ್ಲೇ ಇರುವಂತೆ ವರಕೊಡುತ್ತೇನೆ. ಇನ್ನು ಹೋಗು" ಎಂದನು. ತರುವಾಯ ವ್ಯಾಸನು ಸಾವಧಾನದಿಂದ ಆಶ್ರಮಕ್ಕೆ ಹಿಂದಿರುಗಿದನು. ವ್ಯಾಸನಜತೆಯಲ್ಲಿ ಶುಕನಿರುವುದು ವ್ಯಾಸನಿಗೆ ಮಾತ್ರ ಕಾಣುತಿತ್ತು.

ಹೀಗೆ ಸೂತಪುರಾಣಿಕನು ಹೇಳಲು, ಶುಕನ ಕಥೆಯನ್ನು ಕೇಳುತ್ತಿದ್ದ ಶೌನಕಾದಿ ಮುನಿಗಳು, "ವ್ಯಾಸನಂಥವನಿಗೇ ಸಂಸಾರದ ಬಂಧಪಾಶವು ಅಪ್ಪರವಟ್ಟಿಗಿರುವುದನ್ನು ಕೇಳಿ ತುಂಬಾ ಆಶ್ಚರ್ಯವಾಗಿದೆ. ತರುವಾಯ ವ್ಯಾಸನು ಏನು ಮಾಡಿದನೆಂದು ದಯವಿಟ್ಟು ತಿಳಿಸಬೇಕು" ಎಂದರು. ಸೂತನು ಹೀಗೆಹೇಳತೊಡಗಿದನು :

## ಧೃತರಾಷ್ಟ್ರಾದಿಗಳ ಜನನ

ವ್ಯಾಸನಿಗೆ ಮುಖ್ಯ ಶಿಷ್ಯರಾಗಿದ್ದ ವೈಶಂಪಾಯನ, ಜೈಮಿನಿ. ಅಸಿತ, ಸುಮಂತ ಎಂಬವರು ಈ ಮೊದಲೇ ತಮ್ಮ ಗುರುವಿನಿಂದ ಅಪ್ಪಣೆ ಪಡೆದು ಹೊರಟು ಹೋಗಿದ್ದರು. ಈಗ ಶುಕನು ಕೂಡಾ ಹೊರಟು ಹೋದುದಾಯಿತು. ವ್ಯಾಸನುಕೂಡಾ ಎತ್ತಾದರೂ ಹೊರಟು ಹೋಗಬೇಕೆಂದು ಮಾಡಿದನು. ಆಗ ಅವನಿಗೆ ಅವನತಾಯಿ ಸತ್ಯವತಿಯ ಜ್ಞಾಪಕಬಂದಿತು. ಕೂಡಲೇ ಅವನು ಆಶ್ರಮವನ್ನು ಬಿಟ್ಟು, ತಾನು



ಹುಟ್ಟಿದ ಸ್ಥಳಕ್ಕೆ ಹೋಗಿ, ಅಲ್ಲಿದ್ದ ನಿಷಾದರನ್ನು ಸಂಧಿಸಿದನು. ಅವರೊಡನೆ ತನ್ನ ತಾಯಿಯನ್ನು ಕುರಿತು ವಿಚಾರಿಸಲು, ಸತ್ಯವತಿಯನ್ನು ಶಂತನು ರಾಜನು ಮದುವೆಮಾಡಿಕೊಂಡು ಹೋದ ಸಂಗತಿ ಗೊತ್ತಾಯಿತು.

ಅಷ್ಟು ತಿಳಿದ ಮೇಲೆ ವ್ಯಾಸನು ಅಲ್ಲಿಗೆ ಸಮೀಪದಲ್ಲಿರುವ ಸರಸ್ವತೀನದಿಯ ತೀರದಲ್ಲಿ ಆಶ್ರಮ ಏರ್ಪಡಿಸಿಕೊಂಡು ತಪಸ್ಸುಮಾಡುತ್ತ ಇದ್ದುಬಿಟ್ಟನು.

ಹೀಗಿರುವಾಗ ಶಂತನು ಮಹಾರಾಜನು ಹೆಂಡತಿಯಾದ ಸತ್ಯವತಿಯಲ್ಲಿ ಚಿತ್ರಾಂಗದ ಮತ್ತು ವಿಚಿತ್ರವೀರ್ಯರೆಂಬ ಇಬ್ಬರು ಕುಮಾರರನ್ನು ಪಡೆದ ಮೇಲೆ ಸ್ವಲ್ಪಕಾಲದಲ್ಲಿ ಸತ್ತುಹೋದನು. ಶಂತನುವಿಗೆ ಹಿರಿಯಮಗನಾಗಿ ಭೀಷ್ಮನೆಂಬವನು ಈ ಮೊದಲೇ ಇದ್ದನು. ಅವನು ತಂದೆಗೆ ಉತ್ತರಕ್ರಿಯೆಗಳನ್ನೇನೋ ಮಾಡಿದನು. ಆದರೆ ತಂದೆಯ ಸ್ಥಾನದಲ್ಲಿ ಪಟ್ಟಾಭಿಷೇಕ ಮಾಡಿಕೊಳ್ಳಲು ಅವನು ತಂದೆಗೆ ಮಾಡಿಕೊಟ್ಟ



ಪ್ರತಿಜ್ಞೆ ಅಡ್ಡಬಂದುದರಿಂದ, ತನ್ನ ಹಿರಿಯ ತಮ್ಮನಾದ ಚಿತ್ರಾಂಗದನಿಗೆ ಪಟ್ಟಗಟ್ಟಿದನು.

ಒಂದುಸಾರಿ ಚಿತ್ರಾಂಗದನು ಬೇಟೆಯಾಡಲು ಅರಣ್ಯಕ್ಕೆ ಹೋದನು. ಅಲ್ಲಿ ಅವನಿಗೆ ತನ್ನ ಹೆಸರಿನ ಒಬ್ಬಗಂಧರ್ವನೊಂದಿಗೆ ಜಗಳಹುಟ್ಟಿ ದೊಡ್ಡ ಹೋರಾಟವೇ ಆಯಿತು. ಆ ಯುದ್ಧದಲ್ಲಿ ಗಂಧರ್ವ ಚಿತ್ರಾಂಗದನು ಭೀಷ್ಮನತಮ್ಮನಾದ ಚಿತ್ರಾಂಗದ ನನ್ನು ಕೊಂದುಬಿಟ್ಟನು.

ತರುವಾಯ ಭೀಷ್ಮನು ತಮ್ಮನಿಗೆ ಉತ್ತರ ಕ್ರಿಯೆ ಗಳನ್ನು ಮಾಡಿ. ವಿಚಿತ್ರವೀರ್ಯನಿಗೆ ಪಟ್ಟವನ್ನು ಕಟ್ಟಿದನು. ಈ ವ್ಯವಸ್ಥೆಗೆ ವ್ಯಾಸನೂ ಒಪ್ಪಿಗೆಯಿತ್ತಿ ದ್ದನು. ವಿಚಿತ್ರವೀರ್ಯನು ಪ್ರಾಪ್ತ ವಯಸ್ಸಿಗೆ ಬಂದಾಗ ಭೀಷ್ಮನು ಅವನಿಗೆ ಮದುವೆಮಾಡಲು ಆಲೋಚಿಸ ತೊಡಗಿದನು.

ಆ ಸಮಯದಲ್ಲಿ ಕಾಶೀರಾಜನು ತನ್ನ ಮೂವರು ಕುಮಾರಿಯರಿಗೆ ಸ್ವಯಂವರದ ಏರ್ಪಾಡು ಮಾಡಿ, ಎಲ್ಲಾ ರಾಜರಿಗೂ ಆಹ್ವಾನ ಕಳುಹಿಸಿದನು. ಭೀಷ್ಮನು ಆ ಸ್ವಯಂವರಕ್ಕೆ ಹೋಗಿ, ಉಳಿದ ರಾಜರನ್ನೆಲ್ಲಾ ಯುದ್ಧದಲ್ಲಿ ಸೋಲಿಸಿ, ಕಾಶಿರಾಜನ ಕುಮಾರಿಯರಾದ ಅಂಬಾ, ಅಂಬಿಕಾ, ಅಂಬಾಲಿಕಾ ಎಂಬವರನ್ನು ತನ್ನ ರಥದ ಮೇಲೆ ಏರಿಸಿಕೊಂಡು ತಮ್ಮ ಮನೆಗೆತಂದು ಅವರನ್ನು ತಾಯಿಗೆ ತೋರಿ ಸಿದನು. ಅವಳ ಅನುಜ್ಞೆಯಂತೆ ಅವರು ಮೂವ ರನ್ನು ವಿಚಿತ್ರ ವೀರ್ಯನಿಗೆ ಮದುವೆಮಾಡಲು ಮುಹೂರ್ತ ನಿರ್ಣಯ ಕೂಡಾ ಮಾಡಿದನು.

ಆಗ ಅಂಬಾ ಎಂಬ ಹುಡುಗಿ, ನಾಚಿಕೆಯಿಂದ ತಲೆಬಗ್ಗಿಸಿಕೊಂಡು ಭೀಷ್ಮನೊಂದಿಗೆ, "ನನಗೆ ಈ ಮದುವೆಯ ಮೇಲೆ ಇಷ್ಟವಿಲ್ಲ. ನಾನೂ ಸಾಲ್ವನೂ ಪರಸ್ಪರ ಪ್ರೇಮಿಸಿ ಕೊಂಡವರು. ನೀವು ನಿಮ್ಮ ಶಕ್ತಿಯಿಂದ ನನ್ನನ್ನು ತಂದಿದ್ದೀರಿ. ನಿಮ್ಮ ಅಧೀನದಲ್ಲಿ ರುವ ನನ್ನನ್ನು ಇನ್ನು ಸಾಲ್ವರಾಜನೂ ಸ್ವೀಕರಿಸ ಲಾರನು. ನಾನು ನಿಮ್ಮನ್ನು ಮೆಚ್ಚಿದವಳಾದುದ ರಿಂದ ನಿಮ್ಮನ್ನು ಮದುವೆಯಾಗುತ್ತೇನೆ" ಎಂದಳು.

ಭೀಷ್ಮನು ಹಿರಿಯರೊಂದಿಗೂ ತಾಯಿ ಯೊಂದಿಗೂ, ಮಂತ್ರಿಗಳೊಂದಿಗೂ ಕಲೆತು ಆಲೋ ಚನೆ ಮಾಡಿ, ತಾನಂತೂ ಮದುವೆಯಾಗಲು ಸಾಧ್ಯ ವಿಲ್ಲವೆಂದು ಹೇಳಿ, ಅವಳನ್ನು ಸ್ವೇಚ್ಛೆಯಾಗಿ ಕಳುಹಿಸಿ ಬಿಟ್ಟನು. ಅಂಬಾ ಸೀದಾಸಾಲ್ವನ ಬಳಿಗೆ ಹೋಗಿ "ನಾನು ಭೀಷ್ಮನೊಂದಿಗೆ ನಿನ್ನನ್ನು ಪ್ರೇಮಿಸುತ್ತೇ ನೆಂದು ಹೇಳಿದೆ. ಅವನು ನನ್ನನ್ನು ನಿನ್ನ ಬಳಿಗೆ ಕಳುಹಿಸಿದನು. ಆದುದರಿಂದ ನೀನು ನನ್ನನ್ನು ಮದುವೆ ಮಾಡಿಕೊಳ್ಳಬೇಕು" ಎಂದಳು.

"ನನ್ನ ಕಣ್ಣೆದಿರಿನಲ್ಲಿಯೇ ಭೀಷ್ಮನು ನಿನ್ನನು ಮುಟ್ಟಿ ಎತ್ತಿಕೊಂಡನು. ಪರಕೀಯನೊಬ್ಬ ಮುಟ್ಟಿ ಬಿಟ್ಟವಳನ್ನು ಯಾವನಾದರೂ ಮದುವೆಯಾಗುವು ದುಂಟೆ? ಹೇಗೆಬಂದೆಯೋ ಹಾಗೆಯೇತಿರುಗಿ ಹೋಗಿಬಿಡು" ಎಂದನು ಸಾಲ್ವ.



"ಅಯ್ಯೋ! ಯಾರಿಗೂ ಬೇಡದವಳಾದೆನಲ್ಲಾ!" ಎಂದು ವಿಲಪಿಸುತ್ತಾ ಅಂಬಾ ಭೀಷ್ಮನ ಬಳಿಗೇ ತಿರುಗಿಬಂದು, "ಸಾಲ್ವನು ನನ್ನನ್ನು ನಿರಾಕರಿಸಿದನು. ನನಗೆ ಬೇರೆದಿಕ್ಕಿಲ್ಲ. ನನ್ನನ್ನು ಮದುವೆ ಮಾಡಿಕೊಳ್ಳಲು ನೀವೇ ತಕ್ಕವರು." ಎಂದು ಬೇಡಿಕೊಂಡಳು.

ಒಬ್ಬನನ್ನು ಪ್ರೇಮಿಸಿದವಳನ್ನು ಇನ್ನೊಬ್ಬರು ಮದುವೆಯಾಗುವುದು ತಪ್ಪು. ನಾನಂತೂ ಮದುವೆಯನ್ನೇ ಮಾಡಿಕೊಳ್ಳಲಾರೆ. ನೀನು ನಿನ್ನ ತಂದೆಯ ಬಳಿಗೇ ಹೋಗು" ಎಂದನು ಭೀಷ್ಮ.

ಆದರೆ ಅಭಿಮಾನಿನಿಯಾದ ಅಂಬಾ ತಂದೆಯ ಬಳಿಗೆ ಹೋಗದೆ, ತಪಸ್ಸು ಮಾಡಲು ಕಾಡಿಗೆ ಹೋದಳು. ಭೀಷ್ಮನು ಉಳಿದಿಬ್ಬರು ಕನ್ಯೆಯರನ್ನು ವಿಚಿತ್ರವೀರ್ಯನಿಗೆ ಕೊಟ್ಟು ಮದುವೆಮಾಡಿದನು. ವಿಚಿತ್ರವೀರ್ಯನು ಆ ಪತ್ನಿಯರೊಂದಿಗೆ ಸುಖವಾಗಿ ಕಾಲ ಕಳೆಯುತ್ತ ಒಂಬತ್ತು ವರ್ಷ ರಾಜ್ಯವಾಳಿ, ಕಡೆಗೆ ಕ್ಷಯರೋಗದಿಂದ ಸತ್ತನು.

ತನ್ನ ಎರಡನೇ ಮಗನೂ ಸತ್ತು ಹೋದುದನ್ನು ನೋಡಿ ಸತ್ಯವತಿಗೆ ತುಂಬಾ ದುಃಖವಾಯಿತು. ಅವಳು ಮುಂದಿನ ವಿಚಾರ ತಂದುಕೊಂಡು, ಭೀಷ್ಮನನ್ನು ಕರೆದು ಅವನೊಂದಿಗೆ." ನೀನು ಕೂಡಾ ಶಂತನು ಮಹಾರಾಜರ ಮಗನೇ ಆದುದರಿಂದ, ಪಟ್ಟಗಟ್ಟಿಸಿಕೊಂಡು, ರಾಜ್ಯಭಾರವನ್ನು ವಹಿಸಿ, ನನಗೆ ಮಕ್ಕಳಿಲ್ಲದ ಕೊರತೆಯನ್ನು ತೀರಿಸು. ಮಕ್ಕಳಿಲ್ಲದಿದ್ದರೆ ವಂಶವೇ ನಶಿಸುವುದಪ್ಪೆ? ಅಂಬಿಕಾ, ಅಂಬಾಲಿಕೆಯರ ಕೈಗಳನ್ನು ನೀನೇ ಹಿಡಿದು ಅವರಿಗೆ ಗಂಡನಾಗಿರುವುದರಲ್ಲಿ ತಪ್ಪೇನಿಲ್ಲ. ಅವರಿಂದ ಪುತ್ರರನ್ನು ಪಡೆದು ನನ್ನನ್ನು ತೃಪ್ತಿಗೊಳಿಸು. ಇದು ಧರ್ಮ ಬಾಹಿರವಾದ ಕೆಲಸವೇನಲ್ಲ" ಎಂದಳು.

"ನಿನ್ನ ಮದುವೆಯ ಸಂದರ್ಭದಲ್ಲಿ ನಾನು ತಂದೆಯ ಮುಂದೆ ಮದುವೆಯಾಗಲಾರೆನೆಂದೂ ಪಟ್ಟಗಟ್ಟಿಸಿಕೊಳ್ಳಲಾರೆನೆಂದೂ ಪ್ರತಿಜ್ಞೆಮಾಡಿದ್ದೇನೆ. ಅದನ್ನು ಮೀರಲಾರೆ. ಸತ್ಕುಲದ ಬ್ರಾಹ್ಮಣನ ಮೂಲಕ ಮಕ್ಕಳನ್ನು ಪಡೆದು ವಂಶವನ್ನು ಉಳಿಸುವುದೂ ಅಧರ್ಮವೇನಲ್ಲ." ಎಂದನು ಭೀಷ್ಮ

ಭೀಷ್ಮನು ಹೀಗೆ ಹೇಳಿದ ಕೂಡಲೇ ಸತ್ಯವತಿ ವ್ಯಾಸನನ್ನು ನೆನೆದಳು. ಕೂಡಲೇ ವ್ಯಾಸನು ಅಲ್ಲಿಗೆ ಬಂದನು. ಭೀಷ್ಮನು ಆತನಿಗೆ ತಕ್ಕ ಮರ್ಯಾದೆಗಳನ್ನು ಮಾಡಿದನು. ಸತ್ಯವತಿ ವ್ಯಾಸನೊಂದಿಗೆ, "ಅಪ್ಪಾ, ತಪೋಧನನಾಗಿ, ನನ್ನ ವರಪುತ್ರನಾದ ನೀನು, ಮಕ್ಕಳಿಲ್ಲದೆ ಸತ್ತ ನಿನ್ನ ತಮ್ಮಂದಿರ ವಂಶವನ್ನು ಉಳಿಸಬೇಕಾದ ಕರ್ತವ್ಯಬಂದಿದೆ. ಅವರ ಪತ್ನಿಯರಲ್ಲಿ ಪುತ್ರ ವರಪ್ರಸಾದವನ್ನು ನೀನೇ ನೀಡಬೇಕು" ಎಂದಳು.

ವ್ಯಾಸನು ತಾಯಿಯ ಆಜ್ಞೆಯಂತೆ, ಅಂಬಿಕೆಯಲ್ಲಿ ಒಬ್ಬ ಮಗನು ಹುಟ್ಟುವಂತೆ ವರವಿತ್ತನು. ಆದರೆ ಆ ಮಗು ಹುಟ್ಟು ಕುರುಡಾಗಿದ್ದುದರಿಂದ. ರಾಜ್ಯ



ಭಾರಕ್ಕೆ ತಕ್ಕವನಲ್ಲವೆಂದುಕೊಂಡು ಸತ್ಯವತಿ ವ್ಯಾಸನ ಸೇವೆಗೆ ಎರಡನೇ ಸೊಸೆ ಅಂಬಾಲಿಕೆಯನ್ನು ಕಳುಹಿಸಿದಳು. ವ್ಯಾಸನು ಅವಳಿಗೆ ಪ್ರಸಾದಿಸಿದ ಪುತ್ರನು ಪಾಂಡುರೋಗಿ ಯಾಗಿರುವುದನ್ನು ನೋಡಿ, ಇವನೂ ರಾಜ್ಯಾರ್ಹನಾಗಲಾರನೆಂದು ಭಾವಿಸಿ ಸತ್ಯವತಿ ಇನ್ನೊಂದು ಮಗುವಿಗಾಗಿ ಅಂಬಿಕೆಯನ್ನೇ ಮತ್ತೊಂದುಸಾರಿ ವ್ಯಾಸನ ಬಳಿಗೆ ಕಳುಹಿಸಿದಳು. ಆದರೆ ಅಂಬಿಕೆ ಅತ್ತೆಗೆ ಇದಿರಾಡಲು ಇಷ್ಟವಿಲ್ಲದೆ, ವ್ಯಾಸಮುನಿಯ ಬಳಿಗೆ ಹೋಗಲೂ ಅಳುಕಿ, ರಹಸ್ಯದಲ್ಲಿ ತನ್ನ ದಾಸಿಯನ್ನು ವ್ಯಾಸನ ಬಳಿಗೆ ಕಳುಹಿಸಿದಳು. ಆ ದಾಸಿಗೆ ವ್ಯಾಸನು ಪ್ರಸಾದಿಸಿದ ಪುತ್ರನೇ ವಿದುರ. ಆತನು ಮತ್ತೊಬ್ಬ ವ್ಯಾಸನಂತಹ ಜ್ಞಾನಿ.

ಹೀಗೆ ಭರತವಂಶವನ್ನು ಎಬ್ಬಿಸಲು ವ್ಯಾಸನಿಂದಲೇ ಸಾಧ್ಯವಾಯಿತು. ಅವನಿಂದ ಧೃತರಾಷ್ಟ್ರನೂ, ಪಾಂಡುರಾಜನೂ, ವಿದುರನೂ ಹುಟ್ಟಿ ತುಂಬಾ ಪ್ರಸಿದ್ಧರಾಗಿ ಬೆಳಗಿದರು.

ಸೂತಪುರಾಣಿಕನು ಹೀಗೆ ಹೇಳಲು, ಶೌನಕಾದಿಗಳು ಅಡ್ಡಬಂದು. "ಮಹಾನುಭಾವ, ಸತ್ಯವತಿಗೆ ಶಂತನುವಿನೊಂದಿಗೆ ವಿವಾಹವಾದ ಬಗೆ ಹೇಗೆ? ಅದಕ್ಕೆ ಮೊದಲೇ ಸತ್ಯವತಿಗೆ ವ್ಯಾಸನು ಮಗನಾದ ಕಥೆ ಏನೋ? ಹೇಳಬೇಕು" ಎಂದರು.

ಅದಕ್ಕೆ ಸೂತಪುರಾಣಿಕನು ಆ ವೃತ್ತಾಂತವನ್ನು ಹೀಗೆ ಹೇಳಿದನು: ಹಿಂದೆ ಚೇದಿದೇಶವನ್ನಾಳಿಕೊಂಡಿದ್ದ ಉಪರಿಚರವಸು ಎಂಬವನು ಅತ್ಯಂತ ತೇಜೋಬಲ ಪರಾಕ್ರಮವಂತನು. ಅವನು ಇಂದ್ರನನ್ನು ತನ್ನ ತಪಸ್ಸಿನಿಂದ ಮೆಚ್ಚಿಸಿ ಇಂದ್ರನಿಂದ ದಿವ್ಯ ವಿಮಾನವೊಂದನ್ನು ಪಡೆದಿದ್ದನು. ಯಾವಾಗಲೂ ಆ ವಿಮಾನದಲ್ಲಿ ಕುಳಿತುಕೊಂಡು ಆಕಾಶಮಾರ್ಗದಲ್ಲಿ ತಿರುಗಾಡುತ್ತಿದ್ದುದರಿಂದಲೇ ಅವನಿಗೆ "ಉಪರಿಚರ" ಎಂಬ ಹೆಸರುಬಂದಿತ್ತು.

ಅವನ ಪತ್ನಿಯಾದ ಗಿರಿಕಾದೇವಿ ಅತ್ಯಂತಸುಂದರಿ. ಅವಳ ಸೇವಾ ಸಾಂಗತ್ಯದಿಂದ ದೇವೇಂದ್ರನಭೋಗಗಳನ್ನು ಅನುಭವಿಸುತ್ತ, ಅವನಂತೆಯೇ ಬಲಸಂಪನ್ನರಾದ ಐದು ಮಂದಿ ಕುಮಾರರನ್ನು ಪಡೆದಿದ್ದನು: ಆ ಐದು ಮಂದಿ ಕುಮಾರರನ್ನೂ ಐದು ದೇಶಗಳಿಗೆ ರಾಜರನ್ನಾಗಿಯೂ ಮಾಡಿದ್ದನು.

ಒಂದು ದಿನ ಅವನ ಪತ್ನಿ ಗಿರಿಕಾ ಅತ್ಯಂತ ಶುಚಿರ್ಭೂತಳಾಗಿ ಪತಿಯ ದರ್ಶನಕ್ಕಾಗಿ ಕಾದಿದ್ದಳು. ವಸುರಾಜನು ಅವಳ ಕೋಣೆಗೆ ಹೋಗಲು ಸಿದ್ಧನಾದಾಗ, ಅವನ ತಂದೆ ಅವನನ್ನು ಕರೆದು, "ಈ ದಿನ ನಿನ್ನ ತಾತನ ಶ್ರಾದ್ಧ. ನೀನು ಬೇಗನೇ ಹೋಗಿ ಅದಕ್ಕೆ ಬೇಕಾದುದನ್ನು ತೆಗೆದುಕೊಂಡು ಬಾ. ಬೇಟೆಯಾಡಿ ಒಳ್ಳೆಯಮೃಗವನ್ನೂ ತಾ" ಎಂದನು.

ಹೆಂಡತಿ ಮುಖ್ಯವೋ ತಂದೆಯ ಮಾತು ಮುಖ್ಯವೋ ಎಂದು ಸ್ವಲ್ಪ ಹೊತ್ತು ಮಥಿತನಾಗಿ ವಸುರಾಜನು ತಂದೆಯ ಮಾತೇ ಮುಖ್ಯವೆಂದು ನಿಶ್ಚಯಿಸಿ, ಮೊದಲು ಸ್ನಾನಮಾಡಲು ಯಮುನೆಗೆ

ಹೋದನು. ಹೆಂಡತಿಯನ್ನು ನೆನೆಯುತ್ತ ಅವನು ಸ್ನಾನಮಾಡುವಾಗ, ಒಂದು ಮೀನು ಅವನ ಶರೀರವನ್ನು ಬಳಸಿಕೊಂಡಿತು. ಆ ಮೀನು ಅದ್ರಿಕಾ ಎಂಬ ಅಪ್ಸರಸಿಯಾದುದರಿಂದ ಮೀನಿನ ರೂಪದಲ್ಲೇ ಅವಳು ಗರ್ಭಿಣಿಯಾದಳು. ಅವಳು ಪಾಪ, ಬ್ರಾಹ್ಮಣ ಶಾಪದಿಂದ ಮೀನಾಗಿದ್ದಳು.

ಮುನಿಗಳು ಮತ್ತೆ ಸೂತಪುರಾಣಿಕನಿಗೆ ಅಡ್ಡ ಬಂದು "ಅದ್ರಿಕಳಿಗೆ ಹಾಗೇಕೆ ಶಾಪ ಬಂತು?" ಎಂದು ಪ್ರಶ್ನಿಸಿದರು. ಸೂತನು ಅದನ್ನೂ ಹೇಳಿದನು.

## ಮತ್ಸ್ಯಗಂಧಿಯ ಜನನ

ಒಂದುಸಾರಿ ಒಬ್ಬ ಬ್ರಾಹ್ಮಣನು ಯಮುನೆಯಲ್ಲಿ ಇಳಿದು ಸಂಧ್ಯಾವಂದನೆ ಮಾಡುತ್ತಿರುವಾಗ, ಅದ್ರಿಕಾ ಅಪ್ಸರಸಿ ಯಮುನೆಯ ಇನ್ನೊಂದು ಬದಿಯಲ್ಲಿ ಈಯುತ್ತ, ನೀರಿನಲ್ಲಿ ಮುಳುಗಿ ಬ್ರಾಹ್ಮಣನ ಸಮೀಪ ಬಂದು ಹಾಸ್ಯಕ್ಕಾಗಿ ಅವನ ಕಾಲುಗಳನ್ನು ಹಿಡಿದು ಎಳೆದಳು.

ಬ್ರಾಹ್ಮಣನು ಬಹು ಕೋಪದಿಂದ "ಮೀನಾಗಿ ನೀರಲ್ಲೇ ಬಿದ್ದಿರು" ಎಂದು ಶಪಿಸಿಬಿಟ್ಟನು. ಅವಳು ಅವನ ಕಾಲು ಹಿಡಿದುಕೊಂಡು ಬಳಬಳನೆ ಅತ್ತಳು. ಬ್ರಾಹ್ಮಣನು ಕನಿಕರಗೊಂಡು ಸ್ವಲ್ಪ ಕಾಲದ ವರೆಗೆ ಮೀನಾಗಿದ್ದು, ಒಬ್ಬ ಮಗನೂ ಮಗಳೂ ನಿನ್ನ ಬಸಿರಲ್ಲಿ ಹುಟ್ಟಿದ ಮೇಲೆ ನಿನಗೆ ನಿಜರೂಪ ಬರುತ್ತೆ" ಎಂದು ಶಾಪಕ್ಕೆ ವಿಮೋಚನೆ ಹೇಳಿ ಹೊರಟು ಹೋದನು. ಅಂದಿನಿಂದ ಅವಳು ಯಮುನಾ ನದಿಯಲ್ಲೇ ಮೀನಾಗಿದ್ದಳು.

ಕಾಲ ಕೂಡಿದುದರಿಂದ ವಸುವಿನ ಸಂಸ್ಪರ್ಶವಾಗಿ ಆ ಮೀನು ಗರ್ಭಧರಿಸಿತು. ಸ್ವಲ್ಪ ಕಾಲದಲ್ಲಿ ಆ ಮೀನು ಬೆಸ್ತನ ಬಲೆಯಲ್ಲಿ ಬಿದ್ದು ಅವನ ಮನೆಗೆ ಹೋಯಿತು. ಬೆಸ್ತನು ಆ ಮೀನನ್ನು ಕೊಯ್ಯುವಾಗ ಅದರ ಹೊಟ್ಟೆಯಲ್ಲಿ ಒಂದು ಗಂಡು ಇನ್ನೊಂದು ಹೆಣ್ಣು ಮಾನವ ಶಿಶುಗಳು ಕಾಣಿಸಿದುವು. ಅವನು ಆ ಶಿಶು ಗಳನ್ನು ಎತ್ತಿಕೊಂಡು ಹೋಗಿ ವಸುರಾಜನಿಗೆ ತೋರಿಸಿದನು. ಸಮಾಚಾರ ತಿಳಿದು ವಸುವೂ ಆಶ್ಚರ್ಯಪಟ್ಟು, ಗಂಡು ಮಗುವನ್ನು ತಾನಿಟ್ಟುಕೊಂಡು, ಹೆಣ್ಣು ಮಗುವನ್ನು ಆ ಬೆಸ್ತನಿಗೇ ಕೊಟ್ಟುಬಿಟ್ಟನು. ಬೆಸ್ತನು ಆ ಮಗುವಿಗೆ ಕಾಲಿಕಾ ಎಂದು ಹೆಸರಿಟ್ಟರೂ ಮತ್ಸ್ಯೋದರಿ, ಮತ್ಸ್ಯಗಂಧಿ ಎಂಬ ಹೆಸರೂ ಪ್ರಸಿದ್ಧವಾಯಿತು.

ವಸುರಾಜನು ಗಂಡು ಮಗುವಿಗೆ ಮತ್ಸ್ಯನೆಂದೇ ಹೆಸರಿಟ್ಟನು. ಮತ್ಸ್ಯನು ಉಪರಿಚರ ವಸುವಿನ ಮನೆಯಲ್ಲೇ ಬೆಳೆಯುತ್ತಬಂದನು.

ಮೀನಿನ ರೂಪ ಹೋದ ಕೂಡಲೇ ಅದ್ರಿಕಳ ಶಾಪ ವಿಮೋಚನೆಯಾಗಿ, ಅಪ್ಸರೆಯಾಗಿ ತನ್ನ ಲೋಕಕ್ಕೆ ಹೊರಟು ಹೋದಳು.





# ದೇವೀ ಭಾಗವತ

ಮತ್ಸ್ಯಗಂಧಿ ಎಂಬ ಹೆಣ್ಣು ಮಗು ಬೆಸ್ತರ ಮನೆಯಲ್ಲೇ ಬೆಳೆಯುತ್ತ, ಆತ್ಮಾಕರ್ಷಣೀಯಳಾದ ಸೌಂದರ್ಯವತಿಯಾಗಿ ದೊಡ್ಡವಳಾದಳು.

ಒಂದು ದಿನ ಪರಾಶರನೆಂಬ ಮುನಿ ಯಮುನಾ ನದಿಯ ದಡಕ್ಕೆ ಬಂದು, ನದಿಯನ್ನು ದಾಟಲು ದೋಣಿಗಾಗಿ ಬೆಸ್ತನನ್ನು ಕೂಗಿ ಕರೆದನು. ಆ ಸಮಯದಲ್ಲಿ ಬೆಸ್ತನು ಊಟ ಮಾಡಿಕೊಂಡಿದ್ದುದರಿಂದ, ಮುನಿಯನ್ನು ನದಿ ದಾಟಿಸುವಂತೆ ತನ್ನ ಮಗಳಿಗೆ ಹೇಳಿದನು. ಅವಳು ದೋಣಿಯಲ್ಲಿ ಪರಾಶರನನ್ನು ಕೂಡಿಸಿ ನದಿಯಲ್ಲಿ ಹೊರಟಳು.

ದೋಣಿ ಸಾಗುತ್ತಿದ್ದಂತೆ, ಹುಟ್ಟು ಹಾಕುತ್ತ ದೋಣಿಯನ್ನು ನಡೆಸುವ ಮತ್ಸ್ಯಗಂಧಿಯ ಸೌಂದರ್ಯವನ್ನು ನೋಡುತ್ತ, ಪರಾಶರ ಮುನಿಯನ್ನು ಮೋಹವು ಆವರಿಸ ತೊಡಗಿತು. ಮೆಲ್ಲನೆ ಅವನು ಅವಳ ಕೈಯನ್ನು ಮುಟ್ಟಿದನು.

ಆಗ ಅವಳು ಮುಗುಳು ನಕ್ಕು, "ನಿಮ್ಮಂಥ ಶ್ರೇಷ್ಠರು ನನ್ನಂಥ ಹೀನಳನ್ನು ಮುಟ್ಟಬಹುದೆ?" ಎಂದಳು. ಅವಳಿಗೆ ಪರಾಶರ ಮುನಿಯ ಶ್ರೇಷ್ಠತೆ ಗೊತ್ತಿತ್ತು. ಅವನು ವಸಿಷ್ಠನ ಮೊಮ್ಮಗ. ಅಂತಹವನು ತನ್ನಂತಹ ಮತ್ಸ್ಯದ ದುರ್ವಾಸನೆ ಹೊಡೆಯುವವಳನ್ನು ಮುಟ್ಟಿದರೆ, ಮೋಹಿಸಿದರೆ, ಬೇರೆ ಋಷಿ ಮುನಿಗಳು ನಗಾಡರೆ? ಇದನ್ನೆಲ್ಲಾ ಮತ್ಸ್ಯಗಂಧಿ ವಿವರಿಸಿ ಹೇಳಿ ಎಚ್ಚರಿಸಿದರೂ ಪರಾಶರನು ಲಕ್ಷ್ಯಮಾಡಲಿಲ್ಲ. ಮತ್ತೆ ಅವಳ ಕೈಯನ್ನು ಹಿಡಿದುಕೊಂಡನು. ಅವನು ತೀವ್ರ ಮೋಹಾವೇಶದಲ್ಲಿರುವುದರಿಂದ, ತನ್ನ ಮಾತನ್ನು ಕೇಳಲಾರನೆಂದು ಅವಳಿಗೂ ಗೊತ್ತಾಯಿತು. ಮೋಹವು ತೀವ್ರವಾದರೆ ಎಂತಹ ವಿವೇಕಿಯನ್ನೂ ತುಳಿದುಹಾಕುತ್ತದೆ. ಪರಾಶರನಂತಹ ಮಹಾತ್ಮನನ್ನು ನಿಗ್ರಹಿಸುವ ಶಕ್ತಿಯೂ ತನಗಿಲ್ಲ.

ಇದನ್ನೆಲ್ಲ ಮನದಂದು ಮತ್ಸ್ಯಗಂಧಿ, ಪರಾಶರನೊಂದಿಗೆ ಅನೇಕ ಕೋರಿಕೆಗಳನ್ನು ಕೇಳಿದಳು. ತಾನು ಕನ್ಯೆಯಾದುದರಿಂದ ತನ್ನ ಕನ್ಯಾತ್ವಕ್ಕೆ ಹಾನಿ ಬರಬಾರದು. ತನ್ನ ಶರೀರದ ದುರ್ಗಂಧವು ಹೋಗಿ,

೬. ವ್ಯಾಸನ ಜನನ



ಸುಗಂಧವಾಗಬೇಕು, ತಾನು ಪರಾಶರನೊಂದಿಗಿರುವು ದನ್ನು ಆಕಾಶವೂ ಯಮುನಾ ನದಿಯೂ ನೋಡ ಬಾರದು, ಅವನಿಂದ ಹುಟ್ಟುವ ಫಲವು ಸದ್ಯೋ ಗರ್ಭಜಾತವಾಗಿರಬೇಕು. ಆ ಮಗನು ಪರಾಶರನಿ ಗಿಂತ ಸ್ವಲ್ಪವೂ ಕಡಿಮೆಯವನಾಗಬಾರದು. ಅವಳ ಈ ಎಲ್ಲಾ ಕೋರಿಕೆಗಳನ್ನೂ ಪರಾಶರನು ತೀರಿ ಸಿದನು. ಅವನ ತಪಸ್ಸಿನ ಮಹಿಮೆಯಿಂದ ಅವಳು ಸುಗಂಧಿನಿಯಾದಳು. ಆವರಿಬ್ಬರನ್ನೂ ದಟ್ಟವಾದ ಮಂಜು ಮುಸುಗು ಹಾಕಿತು. ಕೂಡಲೇ ಅವಳಿಗೆ ಗರ್ಭೋತ್ಪತ್ತಿಯಾಯಿತು. ಪರಾಶರನು ತಪಸ್ಸಿಗೆ ಹೊರಟುಹೋದನು. ಸತ್ಯವತಿಗೆ ಸದ್ಯೋ ಗರ್ಭ ದಿಂದ ಹುಟ್ಟಿದ ಮಗನು, ತಾಯಿಗೆ ಕೈ ಮುಗಿದು. "ಅಮ್ಮಾ, ನಾನು ಹೋಗಿ ತಪಸ್ಸು ಮಾಡಿಕೊಳ್ಳು ತ್ತೇನೆ. ನೀನು ಯಾವಾಗ ನೆನೆಯುವಿಯೋ ಆವಾಗ ಬರುತ್ತೇನೆ." ಎಂದು ಹೇಳಿ ಹೊರಟುಹೋದನು. ಸತ್ಯವತಿಯ ಆ ಮಗನೇ ವ್ಯಾಸನು. ವೇದ ಗಳನ್ನು ವಿಭಜಿಸಿ ರಚಿಸಿದವನಾದುದರಿಂದ ಆತನಿಗೆ ವ್ಯಾಸನೆಂಬ ಹೆಸರು ಬಂತು. ಅವನ ನಿಜವಾದ ಹೆಸರು ದ್ವೈಪಾಯನನೆಂದು. ಅವನು ಹದಿನೆಂಟು ಪುರಾಣಗಳನ್ನೂ ಬರೆದು ತನ್ನ ಶಿಷ್ಯರಿಗೆ ಹೇಳಿದನು. ಆತನ ಶಿಷ್ಯರಲ್ಲಿ ಸುಮಂತ, ಜೈಮಿನಿ, ಪೈಲ, ವೈಶಂಪಾಯನ, ಅಸಿತ, ದೇವಲ ಮೊದಲಾದವರ ಸಾಲಿನಲ್ಲಿ ಶುಕನೂ ಸೇರಿದ್ದಾನೆ.

ಸುಗಂಧಿಸಿಯಾದ ಮತ್ಸ್ಯಗಂಧಿ ಸತ್ಯವತಿ ಎಂಬ ಹೆಸರಿನಲ್ಲಿ ತನ್ನ ತಂದೆಯೊಂದಿಗೆ ವಾಸಮಾಡಿ ಕೊಂಡಿರುವಾಗ, ಸ್ವಲ್ಪಕಾಲದ ಮೇಲೆ ಶಂತನು ಎಂಬ ರಾಜನು ಅವಳನ್ನು ನೋಡಿ ಮೋಹಗೊಂಡು ಮದುವೆ ಮಾಡಿಕೊಂಡನು. ಅವಳಿಗೆ ಮಗಂದಿರು ಹುಟ್ಟಿದರು.

ಸೂತ ಪುರಾಣಿಕನು ಹೀಗೆ ಹೇಳುತ್ತಿರಲು. ಶೌನಕಾದಿ ಮುನಿಗಳು ಅಡ್ಡ ಬಂದು, "ಮಹಾನು ಭಾವರೇ, ಸತ್ಯವತಿಯೂ, ವ್ಯಾಸನೂ ಹುಟ್ಟಿದ ವಿಧಾನಗಳನ್ನು ಹೇಳಿ ನಮಗೆ ಸಂತೋಷವನ್ನುಂಟು ಮಾಡಿದಿರಿ. ಆದರೆ ಒಂದು ಸಂಶಯ. ಶಂತನು ಪುರು ವಂಶದಲ್ಲಿ ಹುಟ್ಟಿದ ದೊಡ್ಡ ರಾಜನಾಗಿರು ವಾಗ, ಸಾಧಾರಣ ಬೆಸ್ತರ ಕುಲಕ್ಕೆ ಸೇರಿದ ಸತ್ಯವತಿ ಯನ್ನು ಹೇಗೆ ಮದುವೆಯಾದನು? ಆತನಿಗೆ ಅದಕ್ಕಿಂತ ಮೊದಲು ಮದುವೆಯಾಗಿಲ್ಲವೆ? ಭೀಷ್ಮನು ಅವನ ಮಗನೇ ಅಲ್ಲವೇ? ಆ ವಿವರಗಳನ್ನೆಲ್ಲಾ ವಿವರಿಸಿ ಹೇಳಬೇಕು." ಎಂದು ಕೇಳಿಕೊಂಡರು. ಆಗ ಸೂತನು ಈ ರೀತಿಯಾಗಿ ಹೇಳಿದನು:

### ಶಂತನುವಿನ ಕಥೆ

ಪೂರ್ವಕಾಲದಲ್ಲಿ ಮಹಾಭಿಷನೆಂಬ ಒಬ್ಬ ದೊಡ್ಡ ರಾಜನಿದ್ದ. ಅವನು ಆ ಕಾಲದಲ್ಲಿದ್ದ ಎಲ್ಲಾ ರಾಜ ಮಹಾರಾಜರೊಳಗೂ ಮೇಲಾದವನು. ಆತನು ಸಾವಿರ ಅಶ್ವಮೇಧ ಯಾಗಗಳನ್ನು ಮಾಡಿ, ಇಂದ್ರ ನನ್ನು ಮೆಚ್ಚಿಸಿ ಬೇಕೆನಿಸಿದಾಗಲೆಲ್ಲಾ ಸ್ವರ್ಗಕ್ಕೆ ಹೋಗಿ

ಬರುತ್ತಿದ್ದನು. ಎಲ್ಲರೂ ಅವನನ್ನು ಇನ್ನೊಬ್ಬ ಇಂದ್ರನೆಂದೇ ಹೇಳುತ್ತಿದ್ದರು.

ಒಂದುಸಾರಿ ಅವನು ಇತರ ದೇವತೆಗಳೊಂದಿಗೆ ಕೂಡಿ ಬ್ರಹ್ಮನನ್ನು ನೋಡಬೇಕೆಂದು ಸತ್ಯಲೋಕಕ್ಕೆ ಹೋದನು. ಅದೇ ಸಮಯದಲ್ಲಿ ಗಂಗಾದೇವಿ ಕೂಡಾ ಬ್ರಹ್ಮನ ದರ್ಶನಕ್ಕಾಗಿ ಬಂದು ಒಂದು ಬದಿಯಲ್ಲಿ ನಿಂತಿದ್ದಳು.

ಆಗ ಜೋರಾಗಿ ಒಂದು ಗಾಳಿ ಬೀಸಿದುದರಿಂದ ಗಂಗಾದೇವಿ ಉಟ್ಟುಕೊಂಡ ಬಟ್ಟೆ ಸ್ವಲ್ಪ ಜಾರಿ, ಅವಳ ಶರೀರದ ಭಾಗಗಳು ಮಿಂಚಿದುವು. ಆ ಕ್ಷಣದಲ್ಲಿ ದೇವತೆಗಳೆಲ್ಲಾ ತಮ್ಮ ಕಣ್ಣುಗಳನ್ನು ಬೇರೆ ಕಡೆಗೆ ತಿರುಗಿಸಿಕೊಂಡರು. ಕೆಲವರು ತಲೆ ತಗ್ಗಿಸಿದರು. ಆದರೆ ಮಹಾಭಿಷನು ಮಾತ್ರ ಸ್ವಲ್ಪವೂ ಸಭ್ಯತೆಯನ್ನು ಪಾಲಿಸದೆ, ಗಂಗೆಯ ಶರೀರ ಸೌಂದರ್ಯದಿಂದ ಮೋಹಾವೇಶಕ್ಕೊಳಗಾಗಿ ನೆಟ್ಟ ದೃಷ್ಟಿಯಿಂದ ಅವಳನ್ನೇ ನೋಡುತ್ತ ಕುಳಿತುಬಿಟ್ಟನು. ಗಂಗೆಯೂ ಸಹ ಮಹಾಭಿಷನನ್ನೇ ಮೋಹಕವಾಗಿ ನೋಡಿದಳು.

ಅವರಿಬ್ಬರ ನಡುವಿನ ಆಕರ್ಷಣೆಯ ದೃಷ್ಟಿಪಾಟವವನ್ನು ಗಮನಿಸಿದ ಬ್ರಹ್ಮನು ಕೋಪಗೊಂಡು, "ಹಿರಿಯರ ಸಮ್ಮುಖದಲ್ಲಿ ಮರ್ಯಾದೆ ಮೀರಿ ವರ್ತಿಸಿರುವ ನೀನಿಬ್ಬರೂ ಭೂಮಿಯಲ್ಲಿ ಮಾನವರಾಗಿ ಹುಟ್ಟಿರಿ" ಎಂದು ಶಾಪಕೊಟ್ಟನು. ಹೀಗೆ ಶಾಪಬಂದಿತಲ್ಲಾ ಎಂಬ ಚಿಂತೆಯಿಂದ ಅವರಿಬ್ಬರೂ ಅಲ್ಲಿಂದ ಹೊರಟುಹೋದರು.

ಬ್ರಹ್ಮನ ಶಾಪವನ್ನು ಅನುಭವಿಸಿ ತೀರಲೇಬೇಕಾದುದರಿಂದ, ಮಹಾಭಿಷನು ಯಾರ ಮಗನಾಗಿ ಹುಟ್ಟಬಹುದೆಂದು ಆಲೋಚಿಸುತ್ತ, ಕಡೆಗೆ ಪುರುವಂಶದವನಾದ ಪ್ರತೀಪನೆಂಬ ರಾಜನಿಗೆ ಮಗನಾಗಿ ಹುಟ್ಟುವುದಾಗಿ ನಿಶ್ಚಯಿಸಿದನು.

ಅವನ ಸಂಗತಿ ಹಾಗಿರುವಾಗ ಒಂದುಸಾರಿ ಅಷ್ಟವಸುಗಳೂ ತಮ್ಮ ತಮ್ಮ ಪತ್ನಿಯರೊಂದಿಗೆ



ವಸಿಷ್ಠನ ಆಶ್ರಮಕ್ಕೆ ಹೋದರು. ಅವರೊಳಗೆ ಪ್ರಭಾಸನೆಂಬ ವಸುವಿನ ಹೆಂಡತಿ, ನಂದಿನಿ ಎಂಬ ವಸಿಷ್ಠನ ಗೋವನ್ನು ನೋಡಿ, "ಆ ಹಸು ಎಲ್ಲಾ ಹಸುಗಳ ಹಾಗಿಲ್ಲ. ಯಾವುದೋ ಶ್ರೇಷ್ಠ ಜಾತಿಯದಿರಬೇಕು ಅಲ್ಲವೆ?" ಎಂದು ಗಂಡನೊಡನೆ ಅದರ ವಿಷಯ ತಿಳಿಯುವ ಕುತೂಹಲದಿಂದ ಕೇಳಿದಳು.

"ನಿಜವೇ. ವಸಿಷ್ಠನ ಮುಖ್ಯ ಸಂಪತ್ತೇ ಅದು. ಅದರ ಹೆಸರು ನಂದಿನಿ. ಕಾಮಧೇನುವಿನ ಸಂತತಿಯದು. ಅದರ ಹಾಲು ಕುಡಿದವರಿಗೆ ವಾರ್ಧಕ್ಯವೂ ಮರಣವೂ ಬರುವುದಿಲ್ಲವಂತೆ" ಎಂದು ಪ್ರಭಾಸನು ಹೆಂಡತಿಯೊಂದಿಗೆ ಹೇಳಿದನು.

"ಹಾಗಾದರೆ ಆ ಗೋವನ್ನು ನನ್ನ ಸ್ನೇಹಿತೆಯಾದ ಉಶೀನರ ರಾಜನ ಮಗಳು ಜಿತವತಿಗೆ ಕೊಡಬೇಕು. ಅವಳು ಸುಂದರಿಯಾಗಿ ಸಾವಿಲ್ಲದೆ ಚಿರಕಾಲ ಬದುಕಿರಬೇಕು. ನನ್ನ ಈ ಆಸೆ ತೀರಲಿಕ್ಕಾಗಿ ಹೇಗಾದರೂ ಮಾಡಿ ಆ ಗೋವನ್ನು ತಂದೇ ತೀರ



ಬೇಕು" ಎಂದು ಹಟ ಹಿಡಿದಳು ಪ್ರಭಾಸನ ಹೆಂಡತಿ. ಹೆಂಡತಿಯರ ವ್ಯಾಮೋಹದಲ್ಲಿ ಬಿದ್ದವನಿಗೆ ಯುಕ್ತಾಯುಕ್ತ ವಿವೇಕವು ಇರಲಾರದು. ಪ್ರಭಾಸನು ಉಳಿದ ವಸುಗಳ ಸಹಾಯದಿಂದ ವಸಿಷ್ಠನ ನಂದಿನೀಧೇನುವನ್ನು ಅಪಹರಿಸಿಕೊಂಡು ಹೋದನು. ತನ್ನ ಹಸು ಕಾಣದೇ ಹೋದುದನ್ನು ನೋಡಿ ವಸಿಷ್ಠನು ಬಹಳ ಕಷ್ಟಪಟ್ಟು ಹುಡುಕತೊಡಗಿದನು. ಕಡೆಗೆ ವಸುಗಳು ಅದನ್ನು ಅಪಹರಿಸಿಕೊಂಡು ಹೋಗಿರುವ ಸಂಗತಿ ಅವನಿಗೆ ತಿಳಿಯಿತು. ಕೂಡಲೇ ಅವರು ಮನುಷ್ಯರಾಗಿ ಹುಟ್ಟುವಂತೆ ಶಾಪಕೊಟ್ಟನು. ಈ ಸಂಗತಿ ವಸ್ತುಗಳಿಗೂ ತಿಳಿಯಿತು. ಅವರು ನಂದಿನಿಯನ್ನು ತಂದು ಅವನಿಗೆ ಒಪ್ಪಿಸಿ, ಶಾಪವನ್ನು ಹಿಂದೆಗೆದುಕೊಳ್ಳಬೇಕೆಂದು ಕಾಲಿಗೆ ಬಿದ್ದು ಬೇಡಿಕೊಂಡರು.

ವಸಿಷ್ಠನಿಗೆ ಅವರ ಮೇಲೆ ಕರುಣೆಯುಂಟಾಗಿ, "ಹೆಂಡತಿಗಾಗಿ ನನ್ನ ಧೇನುವನ್ನು ಅಪಹರಿಸಿ ಮಹಾಪಾಪ ಮಾಡಿದ ಪ್ರಭಾಸನು ಮಾತ್ರ ಮನುಷ್ಯನಾಗಿ ಬದುಕಿಕೊಂಡು, ಕಡೆಯವರೆಗೂ ಬ್ರಹ್ಮಚಾರಿಯಾಗಿಯೇ ಇರಬೇಕು. ಉಳಿದ ಏಳು ಮಂದಿಯೂ ಹುಟ್ಟಿದ ಕೂಡಲೇ ಶಾಪವಿಮೋಚನೆ ಪಡೆದು ನಿಮ್ಮ ನಿಮ್ಮ ಪೂರ್ವರೂಪ ಪಡೆಯಬಹುದು," ಎಂದನು.

ವಸಿಷ್ಠನು ಅಷ್ಟರ ಮಟ್ಟಿಗಾದರೂ ಕರುಣೆ ತೋರಿಸಿದುದಕ್ಕೆ ಸಮಾಧಾನಪಟ್ಟು ಅವರು ಅಲ್ಲಿಂದ ಹಿಂದಿರುಗುತ್ತಿರಲು, ಭೂಲೋಕಕ್ಕೆ ಹೋಗುತ್ತಿದ್ದ ಗಂಗಾದೇವಿ ಅವರಿಗೆ ಇದಿರಾಗಿ ಬಂದಳು. ಅವಳೂ ವಸುಗಳೂ ತಮ್ಮ ಶಾಪಗಳನ್ನು ಕುರಿತು ಒಬ್ಬರಿಗೊಬ್ಬರು ಹೇಳಿಕೊಂಡರು. ಆಗ ವಸುಗಳು ಗಂಗೆಯೊಂದಿಗೆ, "ಅಮ್ಮಾ, ನಾವು ನಿನ್ನ ಹೊಟ್ಟೆಯಲ್ಲಿಯೇ ಹುಟ್ಟುತೇವೆ. ನೀನು ನಮ್ಮ ಮೇಲೆ ಅನುಗ್ರಹವಿಟ್ಟು ಶಂತನು ರಾಜನಿಗೆ ಪತ್ನಿಯಾಗಿದ್ದುಬಿಡು. ಆಮೇಲೆ ನಾವು ಒಬ್ಬೊಬ್ಬರಾಗಿ ನಿನ್ನ ಮಗನಾಗಿ ಹುಟ್ಟುತ್ತೇವೆ. ಹುಟ್ಟಿದ ಕೂಡಲೇ ನಮ್ಮನ್ನು ಕೊಂದುಬಿಡು. ನಮ್ಮ ಶಾಪ ಬೇಗದಲ್ಲೇ ಮುಗಿದು ಹೋಗುತ್ತದೆ" ಎಂದು ಕೇಳಿಕೊಂಡರು.

ಗಂಗಾದೇವಿ ಅದಕ್ಕೆ ಒಪ್ಪಿದಳು. ಹೀಗೆ ಮುಂದೆ ನಡೆಯಬೇಕಾದುದೆಲ್ಲ ಮೊದಲೇ ನಿಶ್ಚಯವಾದಂತಾಯಿತು.

ಹೀಗಿರುವಾಗ ಒಂದು ದಿನ ಪ್ರತೀಪರಾಜನು ಗಂಗಾತೀರದಲ್ಲಿ ಸೂರ್ಯನಿಗೆ ಅರ್ಘ್ಯಬಿಡುತ್ತಿದ್ದಾಗ, ನವಯೌವನೆಯಾದ ಸುಂದರಿಯೊಬ್ಬಳು ಶಂಕಾತಂಕಗಳೇನೂ ಇಲ್ಲದೆ ಆತನನ್ನು ಸಮೀಪಿಸಿದಳು. ಅವನು ಅವಳನ್ನು ಗಮನಿಸದೆ ಅರ್ಘ್ಯಬಿಟ್ಟು ಜಪ ಮಾಡಲು ಕುಳಿತುದೇ ತಡ, ಅವಳು ಸ್ವತಂತ್ರಳಾಗಿ ಅವನ ಬಲ ತೊಡೆಯ ಮೇಲೆ ಕುಳಿತುಬಿಟ್ಟಳು. ಅವಳನ್ನು ನೋಡಿ ಪ್ರತೀಪನು ಆಶ್ಚರ್ಯ ಪಡುತ್ತ, "ಅಮ್ಮಾ. ಯಾರು ನೀನು ? ಹೀಗೇಕೆ ಬಂದು ನನ್ನ ತೊಡೆಯ ಮೇಲೆ ಕುಳಿತೆ ? " ಎಂದು ಕೇಳಿದನು.



ಅವಳು ಕಿರುನಗುವಿನೊಂದಿಗೆ ಅವನ ಮುಖವನ್ನು ವಿಚಿತ್ರವಾಗಿ ನೋಡುತ್ತ "ನಾನು ಯಾರಾದರೇನಾಯಿತೀಗ? ಒಳ್ಳೆಯ ಹೆಣ್ಣು ಎಂಬುದು ಮಾತ್ರ ನಿಜ. ನೀನೋ ನವಮನ್ಮಥನ ಹಾಗಿರುವಿ. ನನ್ನ ಯೌವನವನ್ನು ನಿನಗೆ ಸಮರ್ಪಿಸಬೇಕೆಂತಲೇ ಬಂದಿದ್ದೇನೆ. ಸುಮ್ಮನೆ ಆಟದ ಬುದ್ಧಿಯಿಂದ ಹೇಳುತ್ತೇನೆ ಅಂದುಕೊಳ್ಳಬೇಡ" ಎಂದಳು.

"ಅದರ ಕ್ರಮದಲ್ಲೇ ತಪ್ಪಿದೆಯಲ್ಲ? ಬಲದ ತೊಡೆಯ ಮೇಲೆ ಕುಳಿತುಕೊಳ್ಳುವ ಅಧಿಕಾರ ನನ್ನ ಮಕ್ಕಳಿಗಷ್ಟೇ ಇರುತ್ತದೆ. ಆದುದರಿಂದ ನೀನು ನನಗೆ ಪತ್ನಿಯಾಗಲು ಸಾಧ್ಯವಿಲ್ಲ. ನನಗೊಬ್ಬ ಮಗನು ಹುಟ್ಟಿದ ಪಕ್ಷದಲ್ಲಿ, ಅವನಿಗೆ ನೀನು ಪತ್ನಿಯಾಗಿ ಬರುವೆಯಂತೆ. ನಿನ್ನಂಥ ದೇವತಾ ರೂಪಿಗಳಿಗೆ ಕಾಲಗತಿಯ ಪರಿಮಿತಿ ಇಲ್ಲವಷ್ಟೆ? ನನಗೆ ಈಗ ಮಕ್ಕಳೇ ಇಲ್ಲದಿದ್ದರೂ. ಅದಕ್ಕಾಗಿ ಚಿಂತಿಸಬೇಡ. ನಿನ್ನ ಪುಣ್ಯ ಒಳ್ಳೆಯದಾಗಿದ್ದರೆ ನನಗೆ ಸಂತಾನಯೋಗ ಬರಬಹುದು" ಎಂದು ಹೇಳಿ ಪ್ರತೀಪನು ಅವಳನ್ನು ಕಳುಹಿಸಿಬಿಟ್ಟನು.

ಅನಂತರ ಕಾಲಕ್ರಮದಲ್ಲಿ ಬ್ರಹ್ಮನಿಂದ ಶಾಪ ಪಡೆದ ಮಹಾಭಿಷನು ಪ್ರತೀಪರಾಜನಿಗೆ ಮಗನಾಗಿ ಶಂತನು ಎಂಬ ಹೆಸರಿನಿಂದ ದೊಡ್ಡವನಾದನು. ಶಂತನು ಪ್ರಾಯಪ್ರಬುದ್ಧನಾದ ಮೇಲೆ, ಪ್ರತೀಪನು ಶಂತನುವಿನೊಂದಿಗೆ ತನಗೆ ಅಪೂರ್ವ ಸ್ತ್ರೀಯೊಂದಿಗೆ ನಡೆದ ಸಂಭಾಷಣೆಯ ವಿವವರವನ್ನು ಹೇಳಿ, "ಅವಳ ಆಗಮನವನ್ನು ಇದಿರು ನೋಡಿಕೊಂಡಿರು. ಅವಳನ್ನೇ ಮದುವೆಯಾಗು" ಎಂದು ನಡಿದು ರಾಜ್ಯವನ್ನು ಅವನಿಗೆ ಒಪ್ಪಿಸಿಕೊಟ್ಟು, ತಾನು ತಪಸ್ಸು ಮಾಡಲು ಹೊರಟುಹೋದನು.

ಶಂತನು ತನ್ನ ತಂದೆಯಿಂದ ಬಂದ ರಾಜ್ಯವನ್ನು ಒಳ್ಳೆಯ ರೀತಿಯಲ್ಲಿ ಪಾಲಿಸುತ್ತ, ಒಂದು ದಿನ ಗಂಗಾನದೀ ತೀರದ ಕಾಡುಗಳಲ್ಲಿ ಬೇಟೆಯಾಡಲು ಹೋದನು. ಆ ಸಮಯದಲ್ಲಿ ದೇವತಾ ಸ್ತ್ರೀಯರನ್ನೂ ಮೀರಿಸುವಂತಹ ಸೌಂದರ್ಯದಿಂದ ಶೋಭಿಸುವ ಗಂಗಾದೇವಿ ಅವನ ಕಣ್ಣಿಗೆ ಬಿದ್ದಳು. ಇಷ್ಟೊಂದು ಸುಂದರಿಯಾದವಳು ಯಾರಿರಬಹುದೆಂದು ಅವನು ಆಶ್ಚರ್ಯಪಡುತ್ತಿರಲು, ಅವಳೂ ಸಹ ಅವನ ಅಂದ ಚೆಂದ ಗಾಂಭೀರ್ಯಗಳನ್ನು ನೋಡಿ, ಮಹಾಭಿಷನ ರೂಪವು ಅವನಲ್ಲಿರುವುದನ್ನು ಕಂಡುಹಿಡಿದು, ಆನಂದದಿಂದ ನೋಡುತ್ತ ನಿಂತಳು.

ಶಂತನು ಅವಳ ಬಳಿಗೆ ಹೋಗಿ, "ಯಾರು ನೀನು? ಯಾರಾದರೇನಂತೆ? ನಿನ್ನ ಸೌಂದರ್ಯಕ್ಕಂತೂ ಈಡುಜೋಡಿಲ್ಲ. ನಿನ್ನನ್ನು ನೋಡಿದ ಕ್ಷಣದಿಂದಲೇ ನನ್ನ ಮನಸ್ಸು ನಿನ್ನಲ್ಲಿ ಸಿಕ್ಕಿಕೊಂಡಿತು. ನನ್ನನ್ನು ಮದುವೆಯಾಗುವೆಯಾ?" ಎಂದು ಕೇಳಿದನು.

ಇವನೇ ಮಹಾಭಿಷನೆಂದು ಗಂಗಾದೇವಿಗೆ ನಿಶ್ಚಯವಾಯಿತು. "ನಿನ್ನನ್ನು ನೋಡಿದ ಕೂಡಲೇ ನೀನು ಪ್ರತೀಪ ಮಹಾರಾಜನ ಮಗನೆಂದು ಗೊತ್ತಾ

ಯಿತು. ಇಷ್ಟು ದೊಡ್ಡ ವಂಶದವನನ್ನು ಮದುವೆಯಾಗಲು ಯಾವಳಾದರೂ ಇಷ್ಟವಿಲ್ಲವೆನ್ನುವಳೇ ? ನಾನು ಕೂಡಾ ನಿನ್ನನ್ನು ಮನಃಪೂರ್ವಕವಾಗಿಯೇ ಪ್ರೇಮಿಸುತ್ತೇನೆ. ಆದರೆ ಮುಂದಾಗಿ ಒಂದು ಸಂಗತಿಯನ್ನು ಸ್ಪಷ್ಟವಾಗಿ ಹೇಳಬೇಕಾಗಿದೆ. ಅದೇನೆಂದರೆ ನಾನು ಮಾಡುವ ಕೆಲಸ ಎಂತಹುದಾದರೂ ಸರಿ. ನೀನು ಅದನ್ನು ಕುರಿತು ಕೇಳಕೂಡದು; ತಡೆಯಲೂ ಬಾರದು. ನನಗೆ ಅಪ್ರಿಯವಾಗುವ ಹಾಗೆ ಏನೂ ಮಾತಾಡಬಾರದು. ಇದಕ್ಕೆ ಒಪ್ಪಿದರೆ ನೀನು ನನ್ನ ಪತಿಯಾಗಿ ಸುಖಸಂತೋಷವಾಗಿರಬಹುದು. ನನ್ನ ಈ ನಿಯಮಗಳಿಗೆ ಯಾವಾಗಲಾದರೂ ಭಂಗಬಂದರೆ ನಾನು ನಿನ್ನನ್ನು ಬಿಟ್ಟು ಹೊರಟು ಹೋಗಿ ಬಿಡುತ್ತೇನೆ. ಆ ಮೇಲೆ ನನ್ನನ್ನು ದೂರಿ ಪ್ರಯೋಜನವೇನಿಲ್ಲ." ಎಂದಳು. ವಸುಗಳು ತನ್ನ ಹತ್ತಿರ ಕೇಳಿಕೊಂಡ ಮಾತುಗಳನ್ನು ನೆನಪಿಟ್ಟುಕೊಂಡೇ ಅವಳು ಹಾಗೆ ಹೇಳಿದ್ದಳು.

ಅವಳ ನಿಯಮಗಳಿಗೆ ಶಂತನು ಒಪ್ಪಿದನು. ಗಂಗೆ ಕೂಡಾ ಬಹಳ ಕಾಲದಿಂದ ಅವನಲ್ಲಿ ಮನಸ್ಸಿಟ್ಟವಳಾದುದರಿಂದ, ಕೂಡಲೇ ಶಂತನುವನ್ನು ಗಾಂಧರ್ವ ವಿಧಿಯಿಂದ ಮದುವೆಯಾಗಿ, ಅವನೊಂದಿಗೆ ಅರಮನೆಗೆ ಬಂದಳು. ಗಂಗಾ ಶಂತನುಗಳ ಸಂಸಾರವು ಸುಖಸಂತೋಷಗಳಿಂದ ಸಾಗತೊಡಗಿತು,

ಶಂತನು ಪತ್ನಿಯಾದ ಗಂಗಾದೇವಿ ಮರುವರ್ಷದಲ್ಲೇ ಒಬ್ಬ ಮಗನನ್ನು ಹಡೆದಳು. ಕೂಡಲೇ ಆ ಮಗುವನ್ನು ಗಂಗಾ ನದಿಗೆ ಬಿಸುಟಳು. ಹೀಗೆ ವರ್ಷಕ್ಕೊಬ್ಬ ವಸುವನ್ನು ಮಗನಾಗಿ ಹಡೆದು ನದಿಗೆ ಹಾಕಿದಳು. ಏಳು ಮಂದಿ ವಸುಗಳೂ ಅವಳ ಗರ್ಭದಲ್ಲಿ ಮಾನವರಾಗಿ ಹುಟ್ಟಿ, ಕೂಡಲೇ ನೀರಿಗೆ ಬಿದ್ದು ಶಾಪಮುಕ್ತರಾಗಿ ಹೋದರು.

ಬಾರಿಬಾರಿಗೂ ಇದನ್ನು ನೋಡುತ್ತಾ ಇದ್ದ ಶಂತನುವಿಗೆ. ತುಂಬಾ ವೇದನೆಯಾಗುತ್ತಿತ್ತು. ಬಾಯಿ



ಯೆತ್ತಲಾಗದಂತೆ ಮಾತಿಗೆ ಕಟ್ಟುಬಿದ್ದಿದ್ದನು. ಗಂಗೆ ಏಳು ಮಂದಿ ಸುಂದರ ಶಿಶುಗಳನ್ನು ಹೆತ್ತು ದಯಾದಾಕ್ಷಿಣ್ಯಗಳಿಲ್ಲದೆ ಕೊಲ್ಲುತಿದ್ದಾಳಲ್ಲ ! ಇನ್ನು ಇವಳಿಂದ ತನ್ನ ವಂಶವು ನಿಲ್ಲುವ ಬಗೆಯುಂಟೆ ? ಹೀಗೇಕೆಂದು ಕೇಳಿಬಿಟ್ಟರೆ ಅವಳು ಹೊರಟೇ ಹೋಗುತ್ತಾಳೆ ! ಇಂತಹ ನಿಯಮಹೀನ ಮಾನವಾತೀತಳನ್ನು ಮಾಡಿಕೊಂಡರೆ ಹೀಗಾಗದೆ ಮತ್ತೇನಾದೀತು !

ಗಂಗಾದೇವಿ ಎಂಟನೇಸಾರಿ ಗರ್ಭಿಣಿಯಾಗಿದ್ದಳು. ಏನಾದರೂ ಸರಿಯೇ, ಈ ಸಾರಿ ಹುಟ್ಟುವ ಮಗುವನ್ನು ದಕ್ಕಿಸಿಕೊಳ್ಳಲೇ ಬೇಕು. ವಂಶಾಂಕುರಕ್ಕೆ ಬೇರೆ ದಾರಿಯಿಲ್ಲ. ಹೀಗೆ ಶಂತನು ದೃಢ ನಿಶ್ಚಿತನಾಗಿರಲು ಗಂಗೆ ಎಂಟನೇ ಮಗುವನ್ನೂ ಹಡೆದಳು. ಈ ಮಗುವೇ ಶಾಪಗ್ರಸ್ತನಾಗಿ ದೀರ್ಘ ಬ್ರಹ್ಮಚಾರಿಯಾಗಿರಬೇಕಾದ ಎಂಟನೇ ವಸು ಪ್ರಭಾಸನು. ಹೆತ್ತ ಕೂಡಲೇ ಈ ಮಗುವನ್ನು ಕೂಡಾ ಗಂಗೆ ನದಿಯಲ್ಲಿ ಹಾಕಲು ಹೊರಟಳು.

ಆಗ ಶಂತನು ಅವಳೊಂದಿಗೆ ಬಹಳ ವಿನಯದಿಂದ, "ನಾನು ಯಾವಾಗಲೂ ನಿನಗೆ ವಶನಾಗಿರುವವನು. ನನ್ನ ಮಾತನ್ನು ಅಲಕ್ಷ್ಯಮಾಡಬೇಡ. ಹೊಟ್ಟೆಯಲ್ಲಿ ಹೊತ್ತು ಕಷ್ಟಪಟ್ಟು ಹಡೆದ ಮಗನನ್ನು ನೀನೇ ಕಯ್ಯಾರೆ ಕೊಲ್ಲುವುದು ಯಾವ ನ್ಯಾಯ? ನಿನಗೆ ಯಾವ ದ್ರೋಹವನ್ನೂ ಮಾಡದ ಮಗುವನ್ನು ಸುಮ್ಮನೆ ಕೊಲ್ಲುವುದುಂಟೆ? ನಿನಗೆ ಮಾತು ಕೊಟ್ಟಿರುವೆನೆಂಬ ದೋಷಕ್ಕಾಗಿ ವಂಶನಾಶನಮಾಡಿಕೊಳ್ಳಬೇಕೆನ್ನುವಿಯಾ? ಏಳು ಮಕ್ಕಳನ್ನು ಕೊಂದಾಯಿತು. ಇವನನ್ನಾದರೂ ಬದುಕಲು ಬಿಡು." ಎಂದು ವಿಧವಿಧವಾಗಿ ಹೇಳಿಕೊಂಡನು.

ಆದರೆ ಗಂಗಾದೇವಿ ಅವನ ಮಾತನ್ನು ಕೇಳದವಳಂತೆಯೇ ಮಗುವನ್ನು ಕೊಲ್ಲಲು ನಡೆದೇ ನಡೆದಳು. ಶಂತನು ತಾಳಲಾರದಷ್ಟು ಕೋಪದಿಂದ ಅವಳನ್ನು ಅಡ್ಡಗಟ್ಟಿ, "ಎಲಗೇ ದುಷ್ಟಳೇ! ನಿನಗೆ ಗಂಡನ ಮಾತಿನ ಮೇಲೆ ಲಕ್ಷ್ಯವಿಲ್ಲ! ನರಕದ ಭೀತಿ ಮೊದಲೇ ಇಲ್ಲ. ಹೆತ್ತ ಮಗುವನ್ನು ಗಂಗೆಯಲ್ಲಿ ಬಿಸುಟು ಕೊಲ್ಲುವ ನಿನ್ನನ್ನು ಯಾವ ದುಷ್ಟನು ಹಡೆದನೋ? ನೀನು ಇದ್ದರೆ ಇರು, ಹೋದರೆ ಹೋಗು. ಈ ಸಾರಿ ಮಾತ್ರ ಈ ಮಗುವನ್ನು ಕೊಲ್ಲಲು ಬಿಡಲಾರೆ! ನಿಲ್ಲಲ್ಲೆ!" ಎಂದನು. ಆಗ ಗಂಗಾದೇವಿ ಶಾಂತ ಮಂದಸ್ಮಿತಳಾಗಿ, ಒಂದಿಷ್ಟೂ ಕೋಪವಿಲ್ಲದೆ, "ರಾಜಾ, ವಿಧಿನಿಯಮಕ್ಕೆ ನಾವೆಲ್ಲರೂ ಒಳಗಾದವರೇ. ನೀನು ನನಗೆ ಕೊಟ್ಟ ಮಾತನ್ನು ಮೀರುವುದರಿಂದ, ಇನ್ನು ನನ್ನ ನಿನ್ನ ಋಣ ಮುಗಿಯಿತು. ನಿನ್ನಂತಹ ಉತ್ತಮನನ್ನು ಬಿಟ್ಟು ಹೋಗುವುದು ಧರ್ಮವಲ್ಲವಾದರೂ ಅದಕ್ಕೆ ಕಾರಣವನ್ನು ನಾನೀಗ ನಿನಗೆ ಹೇಳಬೇಕು. ನಾನು ಎಲ್ಲರ ಹಾಗಿನ ಸ್ತ್ರೀಯಲ್ಲ, ಒಂದು ದೇವ ಕಾರ್ಯದ ನಿಮಿತ್ತವಾಗಿಯೇ ನಿನ್ನನ್ನು ವರಿಸಿದೆನು. ಋಷಿಯ ಶಾಪದಿಂದ ಅಷ್ಟವಸುಗಳು ಮಾನವ ಜನ್ಮ ಎತ್ತಬೇಕಾಗಿ ಬಂತು. ನಿನ್ನ ಮೂಲಕ ನಾನು ಅವರಿಗೆ ತಾಯಿಯಾಗಲು ಒಪ್ಪಿದೆನು. ಅವರು ಮಾನವರಾಗಿ ಭೂಮಿಯಲ್ಲಿರಲು ಇಷ್ಟಪಡದವರಾದ್ದರಿಂದ ಹುಟ್ಟಿದ ಕೂಡಲೇ ಶಾಪವಿಮುಕ್ತಿ ಮಾಡಬೇಕೆಂದು ನನ್ನನ್ನು ಬೇಡಿಕೊಂಡರು. ಅದಕ್ಕಾಗಿಯೇ ನಾನು ಪಾಪ ಪುಣ್ಯಗಳ ವಿಚಾರವಿಲ್ಲದೆ ಘುಟ್ಟಿದ ಕೂಡಲೇ ನೀರಿಗೆ ಹಾಕಿಬಿಟ್ಟೆನು. ಈಗ ಹುಟ್ಟಿದವನು ಎಂಟನೇ ವಸು. ಇವನು ಚಿರಂಜೀವಿಯಾಗಿ ಬದುಕಿದ್ದು ನಿನಗೆ ಕೀರ್ತಿ ತರುವನು. ಈಗ ಇವನನ್ನು ಪ್ರಾಯಕ್ಕೆ ಬರುವವರೆಗೆ ನನ್ನ ಬಳಿಯಲ್ಲೇ ಇಟ್ಟುಕೊಂಡು, ಆ ಮೇಲೆ ಕರೆ ತಂದು ನಿನಗೆ ಒಪ್ಪಿಸುತ್ತೇನೆ. ಎಂದು ಹೇಳಿ ಆ ಮಗುವನ್ನು ಎತ್ತಿಕೊಂಡು ಹೊರಟುಹೋದಳು.





# ದೇವೀಭಾಗವತ

ತನ್ನ ಪ್ರೇಮದ ಪತ್ನಿಯೂ ಅಕ್ಕರೆಯ ಮಗುವೂ ತನ್ನನ್ನು ಅಗಲಿ ಹೋದ ಮೇಲೆ ಶಂತನು ರಾಜನು ತಾಳಲಾಗದಷ್ಟು ವಿಯೋಗ ದುಃಖಕ್ಕೆ ಒಳಗಾದನು. ತನ್ನ ದುರ್ವಿಧಿಯನ್ನು ನಿಂದಿಸಿಕೊಳ್ಳುತ್ತ ಹೇಗೋ ರಾಜ್ಯಪಾಲನೆ ಮಾಡುತ್ತಿದ್ದನು. ಒಂದು ದಿನ ಅವನು ಬೇಟೆಯಾಡಲು ಕಾಡಿಗೆಹೋಗಿ ತುಂಬಾ ದಣಿದನು. ವಿಶ್ರಾಂತಿ ಪಡೆಯಲು ಗಂಗಾತೀರಕ್ಕೆ ಹೋಗಿ ಗಂಗೆಯನ್ನು ನೋಡಿ ಬಹಳ ಆಶ್ಚರ್ಯಪಟ್ಟನು. ಗಂಗಾನದಿ ಪೂರ್ತಿ ಬತ್ತಿ ಒಣಗಿ ಸಣ್ಣಗಾಗಿ ಹೋಗಿತ್ತು. ಇದಕ್ಕೇನಾಯಿತೆಂದು ಯೋಚಿಸುತ್ತ ಹಾಗೆಯೇ ಕಣ್ಣು ಹರಿಸಿದನು. ಸ್ವಲ್ಪದೂರದಲ್ಲಿ ಒಬ್ಬ ಹುಡುಗನು ತನ್ನ ಬಿಲ್ಲು ವಿದ್ಯೆಯ ಪ್ರಾವೀಣ್ಯತೆಯನ್ನು ಪ್ರದರ್ಶಿಸುತ್ತಿದ್ದನು. ಅವನು ಗಂಗಾನದಿಯ ಪ್ರವಾಹಕ್ಕೆ ಅಡ್ಡವಾಗಿ ಬಾಣಗಳ ಪರಂಪರೆಯನ್ನೇ ಪ್ರಯೋಗಿಸಿ ಪ್ರವಾಹವನ್ನು ಬಂಧಿಸಿಬಿಟ್ಟಿದ್ದನು ಹುಡುಗನು ಅತ್ಯಾಕರ್ಷಕನಾಗಿ ತೋರಿದನು. ಹಾಗೆ ಅವನನ್ನು ನೋಡುತ್ತಿದ್ದಂತೆ ಶಂತನುವಿನ ಮನಸ್ಸಿನಲ್ಲಿ ಅವನು ತನ್ನ ಮಗನಾಗಿದ್ದರೆ ಒಳೆಯದಿತ್ತೆನಿಸಿತು. ಅವನು ಮೆಲ್ಲನೆ ಆ ಹುಡುಗನ ಹತ್ತಿರ ಹೋಗಿ, "ಕಂದಾ, ನಿನ್ನ ತಂದೆ ಯಾರು ? ತಾಯಿ ಯಾರು ? ನಿನ್ನ ಹೆಸರೇನು ? ಯಾವ ಊರಪ್ಪಾ ನಿನ್ನದು ?" ಎಂದು ಪ್ರಶ್ನೆಗಳ ಮೇಲೆ ಪ್ರಶ್ನೆ ಕೇಳಿದನು.

ಆದರೆ ಆ ಹುಡುಗನು ಶಂತನುವಿನ ಪ್ರಶ್ನೆಗಳಿಗೆ ತಿರುಗಿ ಕೂಡಾ ನೋಡದೆ, ಬಾಣ ಪ್ರಯೋಗದಲ್ಲಿಯೇ ಮಗ್ನನಾಗಿಬಿಟ್ಟಿದ್ದನು. ಬಾಣ ಬಿಡುತ್ತ ಬಿಡುತ್ತ ಎಲ್ಲಿಗೋ ಕಾಣದೆ ಹೋಗಿಬಿಟ್ಟನು. ಆಗ ಶಂತನು ತನ್ನನ್ನು ಅಗಲಿಹೋದ ಗಂಗಾದೇವಿಯನ್ನು ನೆನೆಸಿದನು. ಆಕ್ಷಣವೇ ಗಂಗಾದೇವಿ ಹಿಂದಿನ ರೂಪದಲ್ಲಿಯೇ ಅವನಿದಿರು ಪ್ರತ್ಯಕ್ಷಳಾಗಿ ನಿಂತಳು.

"ಇಲ್ಲಿ ಇದೀಗ ಒಬ್ಬ ಹುಡುಗ ಬಾಣದೊಂದಿಗೆ ಆಡುತ್ತ ಎತ್ತೋ ಹೊರಟುಹೋದ. ಅವನು ಯಾರು, ಎತ್ತ ಹೋದನೆಂಬುದು ನಿನಗೇನಾದರೂ ಗೊತ್ತೇ ? ಅವನನ್ನು ಇನ್ನೊಮ್ಮೆ ತೋರಿಸುವೆಯಾ ?" ಎಂದು ಕೇಳಿದನು ಶಂತನು.

೭. ಕೌರವ ಪಾಂಡವರ ವೃತ್ತಾಂತ



ಗಂಗೆ ನೆಗಾಡುತ್ತ, "ಅವನು ಎಂಟನೇವಸು. ನನ್ನ ಹೊಟ್ಟೆಯಲ್ಲಿ ಹುಟ್ಟಿದ ನಿನ್ನ ಮಗನೇ. ಇದೋ ತಂದು ತೋರಿಸುತ್ತೇನೆ. ಇನ್ನು ನೀನೇ ಅವನನ್ನು ಸ್ವೀಕರಿಸಿ ಆದರಿಸಬೇಕು." ಎಂದು ಅತ್ತನೋಡಿ, "ಕಂದಾ !" ಎಂದು ಕರೆದಳು. ಕೂಡಲೇ ಆ ಹುಡುಗ ಅಲ್ಲಿಗೆ ಬಂದನು. "ಇವನು ವಸಿಷ್ಠನ ಹತ್ತಿರ ವೇದಗಳನ್ನು ಕಲಿತನು. ಪರಶುರಾಮನ ಹತ್ತಿರ ಶಿಷ್ಯನಾಗಿದ್ದನು. ಇನ್ನು ಮೇಲೆ ಇವನೇ ನಿನ್ನ ಕುಲವನ್ನು ಉದ್ಧರಿಸುತ್ತಾನೆ" ಎಂದು ಹೇಳಿ ಗಂಗಾದೇವಿ ಅದೃಶ್ಯಳಾದಳು.

ಶಂತನು ತನ ಮಗನನ್ನು ಆಲಿಂಗಿಸಿಕೊಂಡು, ತನ್ನ ರಥದ ಮೇಲೆ ಕುಳ್ಳಿರಿಸಿ ರಾಜಧಾನಿಗೆ ಕರೆದುಕೊಂಡು ಬಂದು, ಮಂತ್ರಿ ಪುರೋಹಿತಾದಿಗಳಿಗೆ ಅವನಾರೆಂಬುದನ್ನು ತಿಳಿಸಿದನು. ಎಲ್ಲರಿಗೂ ಸಂತೋಷವಾಯಿತು. ಎಲ್ಲರ ಅನುಮತಿಯ ಮೇರೆಗೆ ಶಂತನು ರಾಜನು ತನ್ನ ಮಗ ಗಾಂಗೇಯನಿಗೆ ವೈಭವದಿಂದ ಯುವರಾಜ ಪಟ್ಟಾಭಿಷೇಕ ಮಾಡಿದನು. ಅನಂತರ ನಾಲ್ಕು ವರ್ಷಗಳು ಕಳೆದುವು. ತರುವಾಯ ಒಂದುದಿನ ಶಂತನು ಬೇಟೆಯಾಡುತ್ತ, ಕಾಳಿಂದೀನದಿಯ ತೀರಕ್ಕೆ ಹೋಗಿ, ಒಂದು ಮರದ ನೆರಳಿನಲ್ಲಿ ದಣಿವಾರಿಸಿಕೊಳ್ಳುತ್ತಿದ್ದನು. ಆಗ ಅತ್ಯಾನಂದಕರವಾದ ಸುವಾಸನೆ ಬೀರುವಗಾಳಿ ಅವನನ್ನು ಆಕರ್ಷಿಸ ತೊಡಗಿತು.

ಶಂತನು ಆಶ್ಚರ್ಯ ಕುತೂಹಲಗಳಿಂದ ಗಾಳಿ ಬೀಸಿ ಬರುವ ದಿಕ್ಕನ್ನು ಹಿಡಿದು ಅರಣ್ಯದಲ್ಲಿ ತಿರುಗ ತೊಡಗಿದನು. ಸ್ವಲ್ಪ ಹೊತ್ತಿಗೆ ಅವನ ಇದಿರಿನಲ್ಲಿ ಅಪ್ಸರೆಯಂತಹ ಯುವತಿಯೊಬ್ಬಳು ಕಂಡುಬಂದಳು. ನಿಸ್ಸಂದೇಹವಾಗಿಯೂ ಅವಳ ಶರೀರದಿಂದಲೇ ಆ ಸುವಾಸನೆ ಹೊರಡುತ್ತಿರುವುದೆಂದು ತಿಳಿಯಿತು. ಅವಳು ದೇವಕಾಂತೆಯೋ, ಕಿನ್ನರಿಯೋ, ನಾಗಕನ್ಯೆಯೋ ಇರಬೇಕೇ ಹೊರತು, ಮಾನವಿಯಲ್ಲವೆಂದು ತೋರಿತು ಶಂತನುವಿಗೆ.

ಅವನು ಅವಳ ಸಮೀಪ ಹೋಗಿ, "ನೀನು ಯಾರು? ನಿನ್ನ ತಂದೆ ಯಾರು? ಈ ಅರಣ್ಯದಲ್ಲಿ ಹೀಗೆ ಒಬ್ಬಳೇ ಏಕೆ ತಿರುಗುತ್ತಿರುವಿ? ನಿನ್ನ ಗಂಡ ಯಾರು?" ಎಂದು ಕೇಳಿದನು. ಅಷ್ಟಕ್ಕೆ ಬಿಡದೆ, ಅವಳನ್ನು ನೋಡಿದ ಕೂಡಲೇ ತನಗೆ ಅವಳ ಮೇಲೆ ಮೋಹವಾಗಿದೆಯೆಂದೂ ತಾನು ಇಂತಹವನೆಂದೂ ಸಹ ಹೇಳಿಬಿಟ್ಟನು.

ಅದನ್ನೆಲ್ಲ ಕೇಳಿ ಅವಳು ಕಿರು ನಗುಸೂಸುತ್ತ, "ನಾನು ಕನ್ಯೆಯಾಗಿಯೇ ಇದ್ದೇನೆ. ನನ್ನ ತಂದೆಯನ್ನು ದಾಶರಾಜ ಎನ್ನುತ್ತಾರೆ. ದೋಣಿ ನಡೆಸಿಕೊಂಡಿರಲು ನನಗೆ ಹೇಳಿ, ತಾನೂ ಈಗಲೇ ಬರುವುದಾಗಿ ಹೇಳಿದ್ದಾರೆ. ಅದೋ, ಅಲ್ಲಿ ಕಾಣುವುದೇ ನಮ್ಮ ಮನೆ. ಅಲ್ಲಿಯೇ ಇದ್ದಾರೆ ತಂದೆ" ಎಂದಳು.

"ಕುರುವಂಶದ ರಾಜನಾದ ನಾನು ಒಬ್ಬಂಟಿಗನಾಗಿರುವವನು. ನಿನ್ನಂಥ ಸುಕುಮಾರಿಯಾದವಳು



ಹೀಗೆಲ್ಲಾ ಕಷ್ಟಪಡಬಾರದು. ನನ್ನನ್ನು ಮದುವೆಯಾಗಿ ಸಮಸ್ತ ಸುಖಗಳನ್ನೂ ಅನುಭವಿಸು. ನನ್ನ ಹೆಂಡತಿ ನನ್ನನ್ನು ತ್ಯಜಿಸಿ ಹೋಗಿ ಬಹಳ ಕಾಲವಾಯಿತು. ಅವಳು ನನಗೆ ಏನೇನೋ ಆಶೆಗಳನ್ನು ತೋರಿಸಿ ಹೋಗಿಬಿಟ್ಟಳು. ಅಂದಿನಿಂದ ನಾನು ಬೇರೆಯವಳನ್ನು ನೆನೆದವನಲ್ಲ. ಈಗ ನಿನ್ನನ್ನು ನೋಡಿದ ಕೂಡಲೇ ನಿನ್ನಲ್ಲಿ ಸಿಕ್ಕಿಕೊಂಡೆ. ನನ್ನ ಮಾತು ಅಲ್ಲಗಳೆಯಬೇಡ. ನನ್ನನ್ನು ಮತ್ತೆ ಸಂಸಾರಿಯಾಗಿಸು " ಎಂದನು ಶಂತನು.

ಅವನ ಮಾತುಗಳನ್ನು ಕೇಳಿ ಅವಳು ನಾಚಿಕೆಯಿಂದ ಮುಖ ತಗ್ಗಿಸಿಕೊಂಡು, ನಿಮಗೆ ನನ್ನ ಮೇಲೆ ಉಂಟಾದ ಮೋಹವು ನನಗೂ ನಿಮ್ಮ ಮೇಲೆ ಇಲ್ಲವೆಂದು ತಿಳಿಯಬೇಡಿ. ಆದರೆ ಸ್ತ್ರೀಯರು ಸ್ವತಂತ್ರಿಸಿ ನಡೆಯುವುದು ಧರ್ಮವಲ್ಲವಷ್ಟೆ? ಸ್ತ್ರೀಯರಿಗೆ ಹಿರಿಯರು ಮದುವೆಮಾಡಬೇಕೇ ಹೊರತು, ತಾವೇ ತಮ್ಮಿಷ್ಟದಂತೆ ಯಾರನ್ನೋ ಮದುವೆಮಾಡಿಕೊಂಡು ಬಿಟ್ಟರೆ ಹಿರಿಯರಿಗೆ ಅವಮಾನವಲ್ಲವೆ? ಆದುದರಿಂದ ನೀವು ಹೋಗಿ ನನ್ನ ತಂದೆಯೊಡನೆ ನಿಮ್ಮ ಸಂಗತಿಯನ್ನು ಹೇಳಿ ಅವರ ಅನುಮತಿ ಪಡೆದು ಆ ಮೇಲೆ ನನ್ನನ್ನು ಮದುವೆಯಾಗಿರಿ." ಎಂದಳು.

ಅವಳು ಸರಿಯಾದ ಮಾತನ್ನೇ ಹೇಳಿದಳೆಂದು ತಿಳಿದು ಶಂತನು ಅವಳ ತಂದೆಯನ್ನು ಕೇಳಲು ನಿಶ್ಚಯಿಸಿ ಅವಳ ಮನೆಯ ಕಡೆಗೆ ಹೊರಟನು.

ದಾಶರಾಜನು ಶಂತನುವನ್ನು ದೂರದಿಂದಲೇ ನೋಡಿ, ವಿನಯ ವಿಧೇಯತೆಗಳಿಂದ ಕೈ ಜೋಡಿಸಿಕೊಂಡು ಇದಿರಾಗಿ ಬರುತ್ತ, "ತಮ್ಮ ದಾಸ ನಾನು. ದಯಮಾಡಬೇಕು. ತಾವು ಹೀಗೆ ಪಾದ ಬೆಳೆಸುವುದು ನಮ್ಮ ಅದೃಷ್ಟ. ನನ್ನಿಂದ ಏನಾಗಬೇಕೋ ಅಪ್ಪಣೆಯಾಗಲಿ" ಎಂದನು. "ನಾನೊಂದು ಮುಖ್ಯವಾದ ಕೋರಿಕೆಯನ್ನು ಕೇಳಲು ಬಂದಿದ್ದೇನೆ. ನಿನಗೆ ಆಕ್ಷೇಪಣೆ ಇಲ್ಲದಿದ್ದರೆ ನಾನು ನಿನ್ನ ಮಗಳನ್ನು ಮದುವೆ ಮಾಡಿಕೊಳ್ಳಬೇಕೆಂದಿದ್ದೇನೆ. ಏನು ಹೇಳುವೆ?" ಎಂದು ಕೇಳಿದನು ಶಂತನು.

ಆ ಮಾತು ಕೇಳಿ ದಾಶರಾಜನು ಅತ್ಯಾನಂದಪಟ್ಟು "ಮಹಾರಾಜರೇ, ನನ್ನ ಮಗಳನ್ನು ನೀವು ಮದುವೆಯಾಗಿ ನನ್ನ ವಂಶವನ್ನು ಎತ್ತರಿಸುವಿರೆಂದರೆ ಅದಕ್ಕಿಂತ ಹೆಚ್ಚು ನನಗೇನು ಬೇಕಾಗಿದೆ? ಆದರೂ ನನ್ನದೊಂದು ಕೋರಿಕೆ ಬಿನ್ನವಿಸುತ್ತೇನೆ. ನನ ಮಗಳಲ್ಲಿ ಹುಟ್ಟುವ ಮಗನೇ ನಿಮ್ಮ ಅನಂತರ ಪಟ್ಟಕ್ಕೆ ಬರುವವನಾಗಬೇಕು. ಇದಕ್ಕೇನೂ ಆಕ್ಷೇಪಣೆ ಹೇಳಬಾರದು" ಎಂದನು.

ಅವನ ಮಾತು ಕೇಳಿ ಶಂತನುವಿಗೆ ತನ್ನ ಮಗ ಗಾಂಗೇಯನ ಜ್ಞಾಪಕಬಂದು ನೋವಾಯಿತು. ಆದರಿಂದ ಅವನು ದಾಶರಾಜನ ಮಾತಿಗೆ ಏನೂ ಪ್ರತ್ಯುತ್ತರ ಕೊಡದೆ, ಹಿಂದಿರುಗಿ ಸೀದಾ ಮನೆಗೆ ಬಂದುಬಿಟ್ಟನು. ಆದರೆ ಅವನ ಮನಸ್ಸು ಪೂರ್ತಿ



ಆ ದಾಶಕನ್ಯೆಯ ಮೇಲೆಯೇ ಲಯಿಸಿ ಹೋಗಿತ್ತು. ಅವನು ಆ ದಿನ ಊಟವನ್ನೇ ಮಾಡಲಿಲ್ಲ.

ಆ ಸ್ಥಿತಿಯಲ್ಲಿರುವ ತಂದೆಯನ್ನು ನೋಡಿ ಗಾಂಗೇಯನು, "ಅಪ್ಪಾ, ಇದೇನು? ಇಷ್ಟೊಂದು ಚಿಂತೆಗೆ ಕಾರಣವೇನೆಂದು ನನ್ನೊಡನೆ ಹೇಳಬಾರದೆ? ಬಲಿಷ್ಠನಾದ ಶತ್ರು ಯಾವನಾದರೂ, ಏನಾದರೂ ಹೇಳಿದನೇ? . ಆಗಬಾರದ್ದೇನಾದರೂ ಆಯಿತೆ? ನಾನಿರುವಾಗ ಹೀಗೆ ಕೊರಗಿಕೊಂಡಿರುವ ಅಗತ್ಯ ವೇನಿದೆ? ನಿಮ್ಮ ಇಷ್ಟವೇನಿದ್ದರೂ ಅದನ್ನು ತೀರಿಸುವ ಭಾರ ನನ್ನದು" ಎಂದನು.

ಮಗನ ಮಾತನ್ನು ಕೇಳಿ ಶಂತನು ಲಜ್ಜಾಮಿಶ್ರಿತ ಚಿಂತೆಯಿಂದ, "ಕಂದಾ, ನನಗೆ ನೀನೊಬ್ಬನೇ ಮಗನಾಗಿರುವುದು ಚಿಂತೆಯಲ್ಲದೆ ಮತ್ತೇನು ಹೇಳು. ಒಬ್ಬ ಮಗನು ಮಗನಲ್ಲ, ಒಂದು ಕಣ್ಣು ಕಣ್ಣಲ್ಲ ಎನ್ನುತ್ತಾರೆ. ಹೇಗೋ ದೈವಿಕವಾಗಿ ಇರುವ ಒಬ್ಬ ಮಗನೂ ಹೋಗಿಬಿಟ್ಟರೆ ತಂದೆಯ ಗತಿ ಏನಾಗಬೇಕು?" ಎಂದನು. ಅದನ್ನು ಕೇಳಿ ಗಾಂಗೇಯನು ಮತ್ತೇನೂ ಕೇಳದೆ, ಮಂತ್ರಿಗಳನ್ನು ಕೇಳಿ ನಿಜ ಸಂಗತಿಯನ್ನು ತಿಳಿದುಕೊಂಡನು. ಕೂಡಲೇ ಮಂತ್ರಿಗಳನ್ನು ತನ್ನೊಂದಿಗೆ ಕರೆದುಕೊಂಡು ದಾಶರಾಜನ ಬಳಿಗೆ ಹೋಗಿ. "ಏನಯ್ಯಾ, ನನ್ನ ತಂದೆಯೊಂದಿಗೆ ನಿನ್ನ ಮಗಳ ಮದುವೆಯನ್ನು ಮಾಡಲು ನೀನು ವಿಧಿಸುವ ನಿಬಂಧನೆಗೆ ಯಾವ ಆತಂಕವೂ ಬರುವುದಿಲ್ಲ. ನನ್ನ ತಂದೆಯೊಂದಿಗೆ ನಿನ್ನ ಮಗಳ ಮದುವೆಯನ್ನು ನೆರವೇರಿಸಿಬಿಡು. ನಾನು ಅವಳನ್ನು ತಾಯಿಯಾಗಿ ಭಕ್ತಿಯಿಂದ ನೋಡಿಕೊಳ್ಳುತ್ತೇನೆ. ಇದು ಸತ್ಯ." ಎಂದನು.

ಅದಕ್ಕೆ ದಾಶರಾಜನು "ನನ್ನ ಮಗಳನ್ನು ನೀನೇ ಮದುವೆಯಾಗುವುದು ಒಳ್ಳೆಯದು. ಹಿರಿಯನಾಗಿ ನೀನು ಇರುವಾಗ, ಅವಳ ಮಗನು ರಾಜನಾಗುವುದು ಯಥಾವಿಧಿಯಾಗಿಯೇ ಬರುತ್ತದಷ್ಟೇ?" ಎಂದನು.

"ನಾನು ಅವಳನ್ನು ತಾಯಿಯಾಗಿ ಭಾವಿಸಿದ ಮೇಲೆ ಅವಳು ತಾಯಿಯೇ. ಅವಳ ಮಗನೇ ಪಟ್ಟಕ್ಕೆ ಬರುತ್ತಾನೆ. ಇದರಲ್ಲೇನೂ ಸಂದೇಹಬೇಡ" ಎಂದ ಗಾಂಗೇಯ.

"ಅಯ್ಯಾ, ನೀನು ರಾಜ್ಯವು ಬೇಡವೆಂದರೂ ನಿನ್ನ ಮಗನು ನನ್ನ ಮೊಮ್ಮಗನಿಗೆ ರಾಜ್ಯವನ್ನು ಬಿಡುವನೆಂದು ಹೇಗೆ ನಂಬಲಿ?" ಎಂದು ದಾಶರಾಜನು ಕೇಳಿದನು.

"ನಾನು ಮದುವೆಯನ್ನೇ ಮಾಡಿಕೊಳ್ಳಲಾರೆ. ಅಂದ ಮೇಲೆ ನನಗೆ ಮಗನು ಹುಟ್ಟುವುದೆಲ್ಲಿ ಬಂತು? ಇದು ನನ್ನ ಪ್ರತಿಜ್ಞೆ. ಇನ್ನು ಯಾವ ಸಂದೇಹವನ್ನೂ ಇಟ್ಟುಕೊಳ್ಳದೆ ನಿನ್ನ ಮಗಳನ್ನು ನನಗೆ ತಾಯಿಯಾಗಿ ಕೊಟ್ಟುಬಿಡು" ಎಂದನು ಗಾಂಗೆಯ.

ಇದಕ್ಕೆ ದಾಶರಾಜನು ಒಪ್ಪಿದನು. ಆ ಮೇಲೆ ಸತ್ಯವತೀ ಶಂತನುಗಳ ವಿವಾಹವು ನಡೆಯಿತು. ಆ

ಸಮಯದಲ್ಲಿ ತಾನು ಎಂದಿಗೂ ಪಟ್ಟಾಭಿಷೇಕವನ್ನೂ ವಿವಾಹವನ್ನೂ ಮಾಡಿಕೊಳ್ಳಲಾರೆನೆಂದು ಗಾಂಗೇಯನು ಪ್ರತಿಜ್ಞೆ ಮಾಡಿದುದರಿಂದ ಅವನಿಗೆ ಭೀಷ್ಮನೆಂಬ ಸಾರ್ಥಕನಾಮಬಂದಿತು.

ಮುಂದೆ ಕಾಲಕ್ರಮದಲ್ಲಿ ಸತ್ಯವತಿ ಇಬ್ಬರು ಗಂಡು ಮಕ್ಕಳಿಗೆ ತಾಯಿಯಾದಳು. ಹಿರಿಯವನು ಚಿತ್ರಾಂಗದ, ಕಿರಿಯವನು ವಿಚಿತ್ರವೀರ್ಯ. ಆದರೆ ದುರದೃಷ್ಟವಶಾತ್ ಇಬ್ಬರೂ ಮಕ್ಕಳನ್ನು ಪಡೆಯದೆ ಚಿಕ್ಕಪ್ರಾಯದಲ್ಲಿಯೇ ಅಕಾಲ ಮರಣಕ್ಕೆ ತುತ್ತಾದರು.

ಆಗ ವಿಚಿತ್ರವೀರ್ಯನ ಪತ್ನಿಯರಲ್ಲಿ ಹಿರಿಯವಳಾದ ಅಂಬಿಕೆ ತನ ಅತ್ತೆ ಸತ್ಯವತಿಯ ಆಜ್ಞೆಯ ಮೇರೆಗೆ ವ್ಯಾಸನಿಂದ ಒಬ್ಬ ಮಗನನ್ನು ಪಡೆದಳು. ಧೃತರಾಷ್ಟ್ರನೆಂಬ ಆ ಮಗನು ಹುಟ್ಟುಗುರುಡನಾಗಿದ್ದನು. ಅಂತಹವನು ರಾಜನಾಗಿರಲು ಉಪಯೋಗವಿಲ್ಲವೆಂದುಕೊಂಡು ಸತ್ಯವತಿ ತನ್ನ ಎರಡನೇ ಸೊಸೆಯಾದ ಅಂಬಾಲಿಕೆಯನ್ನು ವ್ಯಾಸನ ಸೇವೆಗೆ ಕಳುಹಿಸಿದಳು. ಅವಳಿಗೆ ಹುಟ್ಟಿದ ಮಗನು ಪಾಂಡುರೋಗಿಯಾಗಿದ್ದು ಪಾಂಡುರಾಜನೆನಿಸಿದನು. ಈ ವಿಧವಾಗಿ ಎರಡು ಸಾರಿಯ ಪ್ರಯತ್ನಗಳೂ ತೃಪ್ತಿಕರವಾಗಿಲ್ಲದೆ ಹೋದುದರಿಂದ ಸತ್ಯವತಿ ಅಂಬಿಕೆಯನ್ನು ಒತ್ತಾಯಿಸಿ ಮತ್ತೊಮ್ಮೆ ವ್ಯಾಸನ ಬಳಿಗೆ ಕಳುಹಿಸಿದಳು. ಆದರೆ ಅಂಬಿಕೆಗೆ ಅದು ಇಷ್ಟವಿಲ್ಲದುದರಿಂದ, ಅವಳು ತನ ದಾಸಿಯನ್ನು ವ್ಯಾಸನ ಬಳಿಗೆ ಕಳುಹಿಸಿದಳು. ಆದರಿಂದ ಆ ದಾಸಿಯ ಹೊಟ್ಟೆಯಲ್ಲಿ ಹುಟ್ಟಿದವನು ವಿದುರ.

ಭೀಷ್ಮನು ಪಾಂಡುರಾಜನನ್ನೇ ರಾಜನನ್ನಾಗಿ ಮಾಡಿದನು. ಪಾಂಡುರಾಜನು ವಿದುರನನ್ನು ಮಂತ್ರಿಯಾಗಿ ಇಟ್ಟುಕೊಂಡು ರಾಜ್ಯಭಾರವನ್ನು ನೋಡಿಕೊಳ್ಳಲು ತೊಡಗಿದನು. ಧೃತರಾಷ್ಟ್ರನು ಗಾಂಧಾರಿಯನ್ನೂ ಮತ್ತೊಬ್ಬಳು ವೈಶ್ಯ ಸ್ತ್ರೀಯನ್ನೂ ಮದುವೆ ಮಾಡಿಕೊಂಡನು. ಗಾಂಧಾರಿಗೆ ನೂರು ಮಂದಿ ಕುಮಾರರೂ, ವೈಶ್ಯ ಸ್ತ್ರೀಗೆ ಒಬ್ಬ ಮಗನೂ ಹುಟ್ಟಿದರು. ಪಾಂಡುರಾಜನು ಕುಂತಿ ಮತ್ತು ಮಾದ್ರಿ ಎಂಬ ಕುಮಾರಿಯರನ್ನು ಮದುವೆ ಮಾಡಿ





ಕೊಂಡನು. ಕುಂತಿಗೆ ಮೂರು ಮಂದಿ ಗಂಡು ಮಕ್ಕಳೂ, ಮಾದ್ರಿಗೆ ಇಬ್ಬರು ಕುಮಾರರೂ ಹುಟ್ಟಿದರು. ಇವರು ಐವರು ಕ್ರಮವಾಗಿ ಯುಧಿಷ್ಠಿರ, ಭೀಮ, ಅರ್ಜುನ, ನಕುಲ, ಸಹದೇವ ಎಂಬವರು ಪಾಂಡವರೆನಿಸಿದರು.

ಕುಂತಿ ಮದುವೆಯಾಗುವುದಕ್ಕೆ ಮೊದಲೇ ಸೂರ್ಯನ ಅನುಗ್ರಹದಿಂದ ಒಂದು ಗಂಡು ಮಗುವನ್ನು ಹೆತ್ತು ಯಾರಿಗೂ ತಿಳಿಯದಂತೆ ನದಿಯ ಪ್ರವಾಹದಲ್ಲಿ ಬಿಟ್ಟು ಬಿಟ್ಟಿದ್ದಳು. ಆ ಮಗನು ಒಬ್ಬ ಸೂತನಿಗೆ ಸಿಕ್ಕಿ, ಕರ್ಣನೆಂಬ ಹೆಸರಿನಲ್ಲಿ ಅಲ್ಲಿಯೇ ಬೆಳೆದನು.

ಪಾಂಡವರು ಹುಟ್ಟುವ ಕಾಲದಲ್ಲಿ ಪಾಂಡು ರಾಜನು ರಾಜ್ಯವನ್ನು ಧತರಾಷ್ಟ್ರನಿಗೆ ಒಪ್ಪಿಸಿ, ತನ್ನ ಹೆಂಡತಿಯರೊಂದಿಗೆ ಅರಣ್ಯವಾಸ ಮಾಡುತ್ತ ಅಲ್ಲಿಯೇ ಮೃತಪಟ್ಟನು. ಮಾದ್ರಿ ಅವನೊಂದಿಗೇ ಸಹಗಮನ ಮಾಡಿದಳು. ಆಮೇಲೆ ಕುಂತಿ ಐವರು ಮಕ್ಕಳನ್ನೂ ಕರೆದುಕೊಂಡು ರಾಜಧಾನಿಗೆ ಬಂದು, ಧೃತರಾಷ್ಟ್ರನ ಆಶ್ರಯವನ್ನು ಸೇರಿದಳು.

ಪಾಂಡವರೈವರೂ ವಿದ್ಯಾಭ್ಯಾಸಗಳನ್ನು ಮುಗಿಸಿ ದೊಡ್ಡವರಾದ ಮೇಲೆ, ಪಾಂಚಾಲದ ರಾಜನಾದ ದ್ರುಪದನ ಮಗಳು ದ್ರೌಪದಿಯನ್ನು ಐವರೂ ಸೇರಿಯೇ ಮದುವೆಯಾದರು. ದ್ರೌಪದಿ ಐವರಿಂದಲೂ ಮಕ್ಕಳನ್ನು ಹಡೆದಳು. ಅರ್ಜುನನು ಕೃಷ್ಣನ ತಂಗಿಯಾದ ಸುಭದ್ರೆಯನ್ನು ಮದುವೆಯಾಗಿ, ಅವಳಲ್ಲಿ ಅಭಿಮನ್ಯು ಎಂಬ ಮಗನನ್ನು ಪಡೆದನು. ಮುಂದೆ ನಡೆದ ಪ್ರಸಿದ್ಧವಾದ ಭಾರತಯುದ್ಧದಲ್ಲಿ ಅಭಿಮನ್ಯು ಸಾಯುವಾಗ ಅವನ ಹೆಂಡತಿ ಉತ್ತರೆ ಗರ್ಭಿಣಿಯಾಗಿದ್ದು, ಅವಳು ಮುಂದೆ ಪರೀಕ್ಷಿತನನ್ನು ಹಡೆದಳು.

ಭಾರತ ಯುದ್ಧದಲ್ಲಿ ತನ್ನಮಕ್ಕಳೆಲ್ಲರೂ ಸತ್ತು ಹೋದ ಮೇಲೆ ಧೃತರಾಷ್ಟ್ರನೂ ಗಾಂಧಾರಿಯೂ ಅನಾಥರಂತಾಗಿ ಯುಧಿಷ್ಠಿರನ ಆಶ್ರಯದಲ್ಲಿ ಇರಬೇಕಾಯಿತು. ಧರ್ಮರಾಜನೆನಿಸಿದ ಯುಧಿಷ್ಠಿರನು ಅವರಿಗೆಯಾವ ಕೊರತೆಯೂ ಬಾರದಂತೆ ತುಂಬಾ ಆದರಿಸಿದನು. ಆದರೆ ಭೀಮನು ಮಾತ್ರ ಚುಚ್ಚು ಮಾತುಗಳಿಂದ ಧೃತರಾಷ್ಟ್ರನನ್ನು ಅವಮಾನಪಡಿಸಿಕೊಂಡೇ ಇದ್ದನು.

ಕಟ್ಟಕಡೆಗೆ ಧೃತರಾಷ್ಟ್ರನು ಗಾಂಧಾರಿಯನ್ನೂ, ವಿದುರನನ್ನೂ, ಸಂಜಯನನ್ನೂ ಕರೆದುಕೊಂಡು ವಾನಪ್ರಸ್ಥಾಶ್ರಮವನ್ನು ಕೈಕೊಂಡು ಹೊರಡಲು ನಿಶ್ಚಯಿಸಿದನು. ಕುಂತಿಯೂ ಅವರೊಂದಿಗೆ ಹೊರಟಳು. ಹಾಗೆ ಅವರೆಲ್ಲ ಅರಣ್ಯಕ್ಕೆ ಹೋದ ಮೇಲೆ ಆರುವರ್ಷಗಳು ಕಳೆದುವು.

ಒಂದು ದಿನ ಯುಧಿಷ್ಠಿರನು ಒಂದು ಸ್ವಪ್ನವನ್ನು ಕಂಡನು. ಆ ಸ್ವಪ್ನದಲ್ಲಿ ಕಾಡಿನಲ್ಲಿ ಕುಂತೀದೇವಿ ತುಂಬ ಸೊರಗಿರುವುವನ್ನು ನೋಡಿದನು. ತುಂಬ ಕಳವಳಗೊಳ್ಳುತ್ತಾ ಎಚ್ಚೆತ್ತು ಕನಸಿನಲ್ಲಿ ಕಂಡ

ತಾಯಿಯ ಪರಿಸ್ಥಿತಿಯನ್ನು ತನ್ನ ತಮ್ಮಂದಿರೊಂದಿಗೆ ಹೇಳಿದನು. ತನಗೆ ಕುಂತಿಯನ್ನು ಮಾತ್ರವಲ್ಲ, ಧೃತ ರಾಷ್ಟ್ರ, ಗಾಂಧಾರಿ, ವಿದುರರನ್ನೂ ನೋಡಬೇಕೆಂದು ತೀವ್ರ ಆಸಕ್ತಿಯಾಗಿರುವುದನ್ನು ಹೇಳಿದನು.

ಪಾಂಡವರೈವರೂ ಒಮ್ಮನಸ್ಸಿನಿಂದ ಅರಣ್ಯಕ್ಕೆ ಹೋಗಲು ಸಿದ್ಧರಾದರು. ದ್ರೌಪದಿಯೂ, ಸುಭದ್ರೆಯೂ ಉತ್ತರೆಯನ್ನು ಕರೆದುಕೊಂಡು ಅವ ರೊಂದಿಗೆ ಹೊರಟರು. ಅನೇಕಮಂದಿ ಪುರಜನರೂ ಅವರನ್ನನುಸರಿಸಿದರು.

ಹೀಗೆ ಅವರೆಲ್ಲರೂ ಶತಯೂಪಾಶ್ರಮಕ್ಕೆ ಹೋಗಿ ಅಲ್ಲಿರುವ ಧೃತರಾಷ್ಟ್ರ, ಗಾಂಧಾರಿ, ಕುಂತಿಯ ರನ್ನು ನೋಡಿದರು. ವಿದುರನು ಅಲ್ಲಿರಲಿಲ್ಲ. ಅವನು ಏಕಾಂತಸ್ಥಳದಲ್ಲಿ ತಪಸ್ಸು ಮಾಡುತ್ತಿರುವನೆಂದು ಧೃತರಾಷ್ಟ್ರನು ಹೇಳಿದನು.

ಯುಧಿಷ್ಠಿರನು ವಿದುರನನ್ನು ಹುಡುಕುತ್ತಾ ಗಂಗಾತೀರವನ್ನು ಹಿಡಿದು ಬಹಳದೂರ ಹೋಗಿ, ಅಲ್ಲೊಂದು ಕಡೆ ಘೋರ ತಪಸ್ಸಿನಲ್ಲಿರುವ ವಿದುರ ನನ್ನು ನೋಡಿ, ತನ್ನ ಹೆಸರು ಹೇಳಿಕೊಂಡು ನಮಸ್ಕಾರ ಮಾಡಿದನು. ವಿದುರನಿಂದ ಯಾವ ಪ್ರತ್ಯುತ್ತರವೂ ಹೊರಡಲಿಲ್ಲ. ಅದಕ್ಕೆ ಬದಲಾಗಿ ವಿದುರನ ಮುಖದಿಂದ ದಿವ್ಯ ತೇಜಸ್ಸೊಂದು ಹೊರಟುಬಂದು ಯುಧಿಷ್ಠಿರನ ಮುಖದೊಳಗೆ ಪ್ರವೇಶಿಸುವುದೂ, ವಿದುರನ ಶರೀರವು ಸತ್ತು ಬೀಳುವುದೂ ಒಂದೇ ಸಾರಿ ನಡೆಯಿತು.

ಯುಧಿಷ್ಠಿರನು ಧೃತರಾಷ್ಟ್ರನ ಬಳಿಗೆ ಹಿಂದಿರುಗಿ ಬಂದು ವಿದುರನ ಮರಣವನ್ನು ಕುರಿತು ಅವನಿಗೆ ಹೇಳಿದನು. ಮುಂದೆ ಸ್ವಲ್ಪಕಾಲ ಪಾಂಡವರು ಅವ ರೊಂದಿಗೇ ಇದ್ದು ಆಮೇಲೆ ತನ್ನ ಪರಿವಾರದೊಂದಿಗೆ ಹಸ್ತಿನಾವತಿಗೆ ಹಿಂದಿರುಗಿದರು.

ಆಮೇಲೆ ಬಂದ ಬೇಸಗೆಯಲ್ಲಿ ಧೃತರಾಷ್ಟ್ರ, ಗಾಂಧಾರಿ, ಕುಂತಿಯರು ಕಾಡುಗಿಚ್ಚಿನ ನಡುವೆ ಸಿಕ್ಕಿ ಸುಟ್ಟು ಹೋದರು. ಅವರಿಗಿಂತ ಮೊದಲೇ ಸಂಜ ಯನು ಯಾವುದೋ ಒಂದು ತೀರ್ಥದಲ್ಲಿ ಮುಳುಗಿ ಸತ್ತು ಹೋಗಿದ್ದನು.

ಕೌರವ ಪಾಂಡವರು ಹಾಗೆ ಅಸ್ತಮಿಸಿದ ಮೇಲೆ ಅವರ ವಂಶದ ಅಂಕುರವಾಗಿ ಉಳಿದ ಪರೀಕ್ಷಿ ದ್ರಾಜನು ಒಬ್ಬ ಮುನಿಯ ಶಾಪದಿಂದ ತಕ್ಷಕನ ಕಡಿತಕ್ಕೆ ಗುರಿಯಾಗಿ ತೀರಿಹೋದನು. ಇದನ್ನು ನೋಡಿ ಪರೀಕ್ಷಿದ್ರಾಜನ ಮಗ ಜನಮೇಜಯನು ಮಹಾ ಕೋಪದಿಂದ ತಂದೆಯ ಮರಣಕ್ಕೆ ಪ್ರತೀಕಾರ ವೆಸಗಲು, ಭಯಂಕರವಾದ ಸರ್ಪಯಾಗವನ್ನು ತೊಡಗಿದನು. ಆ ಮಹಾ ಯಾಗದ ಶಕ್ತಿಯಿಂದ ಅನೇಕಾನೇಕ ಸರ್ಪಗಳನ್ನು ಅಗ್ನಿಗೆ ಆಹುತಿಯಾಗು ವಂತೆ ಮಾಡಿ, ಕಡೆಗೆ ವಿರಮಿಸಿದನು.





# ದೇವೀಭಾಗವತ

ಕೋಸಲದೇಶದ ರಾಜಧಾನಿಯಾದ ಅಯೋಧ್ಯಾ ನಗರವನ್ನು ಧ್ರುವಸಂಧಿ ಎಂಬ ರಾಜನು ಪಾಲಿಸಿ ಕೊಂಡಿದ್ದನು. ಅವನಿಗೆ ಇಬ್ಬರು ರಾಣಿಯರಿದ್ದರು. ಹಿರಿಯವಳ ಹೆಸರು ಮನೋರಮ, ಇನ್ನೊಬ್ಬಳ ಹೆಸರು ಲೀಲಾವತಿ. ಮನೋರಮೆಗೆ ಸುದರ್ಶನನೆಂಬ ಮಗನೂ, ಲೀಲಾವತಿಗೆ ಶತ್ರುಜಿತ್ತು ಎಂಬ ಮಗನೂ ಇದ್ದರು.

ಆ ಇಬ್ಬರು ರಾಜಕುಮಾರರಲ್ಲಿ ಸುದರ್ಶನನು ಶತ್ರುಜಿತ್ತುವಿಗಿಂತ ಒಂದು ತಿಂಗಳಿಗೆ ದೊಡ್ಡವನಾಗಿದ್ದನು. ಆದರೆ ಸೌಂದರ್ಯದಲ್ಲಿಯೂ, ಬುದ್ಧಿವಂತಿಕೆಯಲ್ಲಿಯೂ ಸುದರ್ಶನನಿಗಿಂತ ಶತ್ರುಜಿತ್ತು ಹೆಚ್ಚಿನವನಾಗಿದ್ದನು. ಆದುದರಿಂದ ತಂದೆಗೂ, ಮಂತ್ರಿಗಳಿಗೂ ಸೇವಕ ಪರಿವಾರಗಳಿಗೂ, ಪುರಜನರಿಗೂ ಶತ್ರುಜಿತ್ತುವಿನ ಮೇಲೆ ಬಹಳ ಇಷ್ಟ,

ಹೀಗಿರುವಾಗ ಒಂದು ದಿನ ಧ್ರುವಸಂಧಿ ರಾಜನು ಬೇಟೆಯಾಡಲು ಕಾಡಿಗೆ ಹೋದನು. ಅವನು ಬೇಟೆಯಲ್ಲಿ ಮಗ್ನನಾಗಿದ್ದಾಗ, ಅಕಸ್ಮಾತ್ತಾಗಿ ಒಂದು ಪೊದರಿನ ಮರೆಯಲ್ಲಿದ್ದ ಸಿಂಹವು ಅವನ ಮೇಲೆ ಲಂಘಿಸಿಬಿತ್ತು. ಮಹಾವೀರನಾದ ಧ್ರುವಸಂಧಿಯೂ, ಸಿಂಹವೂ ಸ್ವಲ್ಪ ಹೊತ್ತು ಹೋರಾಹೋರಿಯಾಗಿ ಹೊರಳಾಡಿದರು. ಕಡೆಗೆ ಧ್ರುವಸಂಧಿ ಸಿಂಹವನ್ನೂ ಸಿಂಹವು ಧ್ರುವಸಂಧಿಯನ್ನೂ ನಿರ್ಜೀವಪಡಿಸುವುದರಲ್ಲಿ ಕಾಳಗ ಕೊನೆಗಂಡಿತು, ರಾಜನೊಂದಿಗೆ ಬೇಟೆಗೆ ಹೋಗಿದ್ದ ಪರಿವಾರದವರು ಹಿಂದಿರುಗಿ ನಡೆದ ಸಂಗತಿಯನ್ನು ಮಂತ್ರಿಗಳಿಗೆ ಹೇಳಿದರು.

ಮಂತ್ರಿಗಳು ಸತ್ತುಹೋದ ರಾಜನಿಗೆ ಉತ್ತರ ಕ್ರಿಯೆಗಳನ್ನು ವಿಧಿವತ್ತಾಗಿ ಜರುಗಿಸಿ ಆದ ಮೇಲೆ, ಸುದರ್ಶನನಿಗೆ ಪಟ್ಟಾಭಿಷೇಕಮಾಡಲು ಸನ್ನಾಹಕ್ಕೆ ತೊಡಗಿದರು. ಅದು ಎಲ್ಲರಿಗೂ ಒಪ್ಪಿಗೆಯಾಗಿಯೂ ಇದ್ದಿತು. ಹಿರಿಯರಾಣಿ ಮನೋರಮೆಯ ಮಗನೂ, ಹಿರಿಯನೂ ಆದುದರಿಂದ ಅವನೇ ಪಟ್ಟಕ್ಕೆ ಬರುವುದು ಸಹಜವಾಗಿಯೂ ಇತ್ತು.

ಆದರೆ ಇದರಲ್ಲಿಯೂ ಮನಸ್ತಾಪವೇಳುವ ಸೂಚನೆ ತೋರ ತೊಡಗಿತು. ಮನೋರಮೆಯ

**೮. ಧ್ರುವಸಂಧಿಯ ಕಥೆ**



ತಂದೆ ವೀರಸೇನನು ಕಳಿಂಗದೇಶದ ರಾಜನಾಗಿರುವವನು. ಅವನು ತನ್ನ ಅಳಿಯನು ದುರ್ಮರಣಕ್ಕೀಡಾದ ಸಂಗತಿಯನ್ನು ತಿಳಿದು ತನ್ನ ಮೊಮ್ಮಗನಾದ ಸುದರ್ಶನನ ಕ್ಷೇಮ ಸೌಭಾಗ್ಯಗಳನ್ನು ನೋಡಲು ಅಯೋಧ್ಯಗೆ ಬಂದನು. ಹಾಗೆಯೇ ಉಜ್ಜಯಿನಿ ರಾಜನಾದ ಶತ್ರುಜಿತ್ತುವಿನ ಅಜ್ಜ ಯುಧಾಜಿತ್ತುವೂ ಇಲ್ಲಿಗೆ ,ಬಂದನು. ಹೀಗೆ ಬಂದ ಮನೋರಮೆ, ಲೀಲಾವತಿಯರ ತಂದೆಯರು ಅವರವರ ಮೊಮ್ಮಗಂದಿರ ಒಳಿತುಗಳನ್ನು ಕುರಿತು ಮಂತ್ರಿಗಳೊಂದಿಗೆ ಮಾತಾಡಲು ತೊಡಗಿದರು.

ಆ ಸಮಯದಲ್ಲಿ ವೀರಸೇನನೂ ಯುಧಾಜಿತ್ತುವೂ ಒಂದೆಡೆ ಕೂಡಿ ಮಾತಾಡುವಾಗ. ಯುಧಾಜಿತ್ತು ವೀರಸೇನನೊಂದಿಗೆ. "ನಿನ್ನ ಮೊಮ್ಮಗನಾದ ಸುದರ್ಶನನು ವಯಸ್ಸಿನಲ್ಲಿ ಒಂದು ಚೂರು ದೊಡ್ಡವನಾದರೇನಾಯಿತು ? ನನ್ನ ಅಳಿಯ ಶತ್ರುಜಿತ್ತು ಎಲ್ಲಾ ಬಗೆಯ ರಾಜಲಕ್ಷಣಗಳಲ್ಲಿಯೂ ಸುದರ್ಶನನಿಗಿಂತ ಹೆಚ್ಚಿನವನಾಗಿದ್ದಾನೆ. ವಯೋಜ್ಯೇಷ್ಠನಿಗಿಂತಲೂ ಗುಣಜ್ಯೇಷ್ಠನೇ ಹೆಚ್ಚಿನವನಲ್ಲವೇ ? ನಿಜಕ್ಕೂ ರಾಜನಾಗಿರಬೇಕಾದವನು ನನ್ನ ಮೊಮ್ಮಗನೇ !" ಎಂದನು.

ಅದಕ್ಕೆ ವೀರಸೇನನು "ಇದೊಂದು ಹುಚ್ಚು ಮಾತು. ನನ್ನ ಮಗಳು ಮನೋರಮೆಯೇ ಧ್ರುವಸಂಧಿಯ ಪಟ್ಟದರಾಣಿ, ಅವಳಿಗೆ ಹುಟ್ಟಿದ ಸುದರ್ಶನನೇ ಹಿರಿಯನಾಗಿದ್ದು ರಾಜನಾಗಲು ಅರ್ಹನಲ್ಲವೆಂದರೆ ಅದೆಂತಹ ಧರ್ಮ ? ಎಂತಹ ನ್ಯಾಯ ?" ಎಂದನು.

ಅದಕ್ಕೆ ಯುಧಾಜಿತ್ತು ಮಂತ್ರಿಗಳನ್ನು ನೋಡಿ, "ನೀವುಗಳೆಲ್ಲಾ ಒಂದಾಗಿ ಸುದರ್ಶನನಿಗೇ ಪಟ್ಟಾಭಿಷೇಕ ಮಾಡಿದರೆ. ನನ್ನ ಮೊಮ್ಮಗನು ಕೈಕಟ್ಟಿಕೊಂಡು ಸುಮ್ಮನಿರುವನೆಂದು ಭಾವಿಸುವಿರೇನು ? ಅವನಿಗೆ ಬುದ್ಧಿಶಕ್ತಿಯೂ, ಯುದ್ಧಶಕ್ತಿಯೂ ಬೇಕಾದಷ್ಟಿದೆ. ಬೆಂಬಲಕ್ಕೆ ಬಲಸಂಪನ್ನನಾದ ನಾನೂ ಇದ್ದೇನೆ. ನಿಮ್ಮೆಲ್ಲರನ್ನೂ ಒರೆಸಿಹಾಕಿ ಅವನು ರಾಜ್ಯವನ್ನು ಪಡೆಯಬಲ್ಲನು. ನಾನು ಕತ್ತಿಯನ್ನು ಎತ್ತಿಕೊಂಡೆನೆಂದರೆ ಭೂಮಿಯನ್ನೇ ಸೀಳಿ ಬಿಸುಡಬಲ್ಲೆ. ಜಾಗ್ರತೆ !" ಎಂದು ಹೆದರಿಸಿದನು.

ಹೀಗೆ ಇಬ್ಬರುತಾತಂದಿರೂ ಘರ್ಷಣೆಗೆ ತೊಡಗಿದರು. ಅದನ್ನು ನೋಡುತ್ತಿದ್ದವರಿಗೆ ರೋಸಿಕೆಯೇ ಹುಟ್ಟಿತು. ಇದರೆಡೆಯಲ್ಲಿ ಧ್ರುವಸಂಧಿ ರಾಜನು ಸತ್ತು ರಾಜಧಾನಿಯಲ್ಲಿ ಒಡಕು ಹುಟ್ಟಿರುವುದನ್ನು ತಿಳಿದು, ನಗರದೊಳಗೆ ಸಾಧ್ಯವಾದಷ್ಟು ದೋಚಿಕೊಳ್ಳಬೇಕೆಂದು ಶೃಂಗಿಬೇರಪುರದಿಂದ ಅರಣ್ಯವಾಸಿಗಳಾದ ಬೇಡರಗುಂಪೊಂದು ಧಾವಿಸಿ ಬಂದಿತು. ಅವರು ಒಂದಷ್ಟು ದೂರದಲ್ಲಿ ನಗರವನ್ನು ಮುತ್ತಲು ಕೂಡಿದಾಗ, ಯುಧಾಜಿತ್ತುವೂ. ವೀರಸೇನನೂ ತಮ್ಮ ತಮ್ಮ ಸೇನೆಗಳನ್ನು ಸಾಗಿಸಿಕೊಂಡು. ಅವರನ್ನು ಓಡಿಸಿ. ಅದೇ ವೇಗದಲ್ಲಿ ತಮ್ಮೊಳಗೇ

ದಾರುಣವಾಗಿ ಹೋರಾಡಲು ತೊಡಗಿದರು. ಈ ಹೋರಾಟದಲ್ಲಿ ಯುಧಾಜಿತ್ತು ವೀರಸೇನನನ್ನು ಕೊಂದು ಹಾಕಿಬಿಟ್ಟನು.

ತನ್ನ ತಂದೆಯ ಸಾವನ್ನು ನೋಡಿ ಮನೋರಮೆ ತುಂಬಾ ಶೋಕಿಸಿದಳು. ಗಂಡನು ತೀರಿದ ದುಃಖ ದೊಂದಿಗೆ, ತಂದೆ ತೀರಿದ ದುಃಖವೂ ಸೇರಿ ಅವಳ ಪಾಲಿಗೆ ಶೋಕಸಾಗರವೇ ಆಯಿತು. ಮಗನು ಪ್ರಾಯಕ್ಕೆಬಾರದ ಚಿಕ್ಕ ಹುಡುಗ. ಇನ್ನು ತನಗೆ ದಿಕ್ಕು ಯಾವುದು ? ತನ್ನ ತಂದೆಯನ್ನು ಯುದ್ಧದ ನೆವನದಲ್ಲಿಕೊಂದ ಯುಧಾಜಿತ್ತು ತನ ಮಗ ಸುದರ್ಶನನನ್ನು ಕೊಲ್ಲದೆ ಬಿಡುವನೇ ? ತನ್ನ ಮೊಮ್ಮಗನನ್ನು ರಾಜನನ್ನಾಗಿ ಮಾಡುವುದೇ ಯುಧಾಜಿತ್ತುವಿನ ಆಶಯವಾಗಿತ್ತು. ಇನ್ನು ತನಗೆ ಎಂದೆಂದಿಗೂ ಸವತಿ ಮತ್ಸರದ ಹೋರಾಟವೇ ಗತಿ ಯಾಯಿತು. ಅವಳು ತನ್ನನ್ನು ಕಾರಾಗೃಹದಲ್ಲಿ ಡಿಸದೇ ಬಿಡಲಾರಳು. ಮಂತ್ರಿಗಳೇನೋ ಮೊದಲು ತನ್ನ ಮಗನಿಗೆ ರಾಜ್ಯಾಭಿಷೇಕಮಾಡಲು ಸಿದ್ಧರಾದ ವರೇ, ಆದರೆ ಅವರು ಈಗ ಯುಧಾಜಿತ್ತುವಿನ ಮಾತು ಕೇಳಲೇ ಬೇಕಾಗುತ್ತದೆ. ಹೇಗೆ ನೋಡಿ ದರೂ ತನಗೂ ತನ್ನ ಮಗನಿಗೂ ಆಶ್ರಯವಿಲ್ಲದಾಯಿ ತೆಂದು ಅವಳು ತಪಿಸುತ್ತಿದ್ದಳು.

ವಿದಲ್ಲು ಎಂಬ ಮಂತ್ರಿ ಅವಳ ಮೇಲೆ ತುಂಬಾ ಸಹಾನುಭೂತಿಪರನಾಗಿ, ನಂಬುಗೆಯವನಾಗಿದ್ದನು. ಅಂತೆಯೇ ಮನೋರಮೆ ಆ ಮಂತ್ರಿಯನ್ನು ರಹಸ್ಯ ವಾಗಿ ಬರಮಾಡಿಕೊಂಡು, ತನ್ನ ಪರಿಸ್ಥಿತಿಯನ್ನು ಅವನ ಮುಂದೆ ಬಿಚ್ಚಿ, ತನಗೂ ತನ್ನ ಮಗನಿಗೂ ಏನಾದರೂ ದಾರಿ ತೋರಿಸಬೇಕೆಂದು ಕೇಳಿಕೊಂಡಳು.

ವಿದಲ್ಲು ಅವಳೊಂದಿಗೆ, "ಅಮ್ಮಾ, ನಿನಗೂ ನಿನ್ನ ಮಗನಿಗೂ ಎಷ್ಟು ಮಾತ್ರಕ್ಕೂ ಇಲ್ಲಿ ಕ್ಷೇಮವಿಲ್ಲ. ಕಾಶೀರಾಜನಾದ ಸುಬಾಹು ನನಗೆ ಸೋದರ ಮಾವ ನಾಗುತ್ತಾನೆ. ಅವನು ಹೆಚ್ಚಿನ ಬಲಶಾಲಿಯೂ



ಹೌದು. ನಾವು ಅಲ್ಲಿಗೆ ಹೋದರೆ ಅವನು ಆಶ್ರಯ ನೀಡಿ ಕಾಪಾಡಬಲ್ಲನು" ಎಂದನು.

ಮನೋರಮೆ ಅದಕ್ಕೆ ಒಪ್ಪಿದಳು. ವಿಶ್ವಾಸಿಕಳಾದ ಸೈರಂಧ್ರಿ ಎಂಬವಳನ್ನೂ ತನ್ನ ಮಗನನ್ನೂ ಕರೆದು ಕೊಂಡು ವಿದಲ್ಲುವಿನೊಂದಿಗೆ ಕಾಶೀ ರಾಜ್ಯಕ್ಕೆ ಹೊರ ಟಳು. ಆ ದಿನ ರಾತ್ರಿಯಲ್ಲಿ ಅವಳನ್ನೂ ಅವಳೊಂದಿ ಗಿದ್ದವರನ್ನೂ ಕಳ್ಳರು ಅಟಕಾಯಿಸಿ ಇದ್ದುದನ್ನೆಲ್ಲಾ ದೋಚಿಕೊಂಡು ಹೋದರು. ಕೇವಲ ಉಟ್ಟಬಟ್ಟೆ ಗಳಷ್ಟೆ ಉಳಿದಿದ್ದುವು. ಬೆಳಗಾದ ಮೇಲೆ ಅವರು ಮೂವರೂ ಕಾಶೀರಾಜನ ಬಳಿಗೆ ಹೋಗುವ ಯೋಚನೆಬಿಟ್ಟು, ದೋಣಿಯಲ್ಲಿ ಗಂಗಾನದಿಯನ್ನು ದಾಟಿ, ಭರದ್ವಾಜ ಮುನಿಯ ಆಶ್ರಮವನ್ನು ಪ್ರವೇಶಿಸಿದರು.

ಭರದ್ವಾಜನು, ದೀನಳಾದ ಮನೋರಮೆಯನ್ನು ನೋಡಿ, "ಯಾರಮ್ಮಾ ನೀನು ?" ಎಂದು ಕೇಳಿದನು. ಅವಳು ಏನೂ ಹೇಳಲಾಗದೆ.



ಧಾರೆ ಧಾರೆಯಾಗಿ ಕಣ್ಣೀರನ್ನೇ ಸುರಿಸಿಕೊಂಡಿರಲು, ವಿದಲ್ಲು ಮುನಿಯೊಂದಿಗೆ, ಧ್ರುವಸಂಧಿ ರಾಜನ ಮರಣದಿಂದ ಹಿಡಿದು ನಡೆದ ಎಲ್ಲಾ ಸಮಾಚಾರಗಳನ್ನೂ ಹೇಳಿದನು. ಅದನ್ನೆಲ್ಲ ಕೇಳಿ ಭರದ್ವಾಜನು ಮನೋರಮೆಯೊಂದಿಗೆ, "ಆದುದಾಯಿತು, ನೀನೇನೂ ದುಃಖಿಸಬೇಡ. ಇನ್ನು ನಿನಗೆ ಯಾವ ಭಯವೂ ಇಲ್ಲ. ನಿನ್ನ ಮಗನಾದ ಈ ಬಾಲಕನೇ ರಾಜನಾಗುತ್ತಾನೆ. ನಂಬು ನನ್ನ ಮಾತು. ನೀನು ಈ ಆಶ್ರಮದಲ್ಲೆ ನಿರ್ಭಯಳಾಗಿದ್ದುಬಿಡು" ಎಂದನು.

ಭಾರದ್ವಾಜಮುನಿ ತೆರವು ಮಾಡಿಕೊಟ್ಟ ಪರ್ಣಶಾಲೆಯಲ್ಲಿ ಮನೋರಮೆ ತನ್ನ ಮಗ ಸುದರ್ಶನನೊಂದಿಗೂ, ವಿದಲ್ಲು, ಸೈರಂಧ್ರಿಯರೊಂದಿಗೂ ಸುಖವಾಗಿ ದಿನಗಳನ್ನು ಕಳೆದು ಕೊಂಡಿದ್ದಳು.

ಅಯೋಧ್ಯೆಯಲ್ಲಿ ಯುಧಾಜಿತ್ತು ನಿರಾತಂಕವಾಗಿ ತನ್ನ ಮೊಮ್ಮಗೆ ಶತ್ರುಜಿತ್ತುವಿಗೆ ಮಹಾವೈಭವದಿಂದ ಪಟ್ಟಾಭಿಷೇಕವನ್ನು ನೆರವೇರಿಸಿದನು. ಯಾರೂ ಯಾವ ಆಕ್ಷೇಪಣೆಯನ್ನೂ ಎತ್ತಲಿಲ್ಲ. ಮನೋರಮೆಯೂ ಸುದರ್ಶನ ಕುಮಾರನೂ ಎಲ್ಲಿಗೆ ಹೊದರೋ ಏನಾದರೋ ಎಂಬುದು ಪ್ರಜೆಗಳಿಗೆ ಗೊತ್ತಾಗಲಿಲ್ಲ. ಆದರೆ ಯುಧಾಜಿತ್ತು ನಿಯೋಜಿಸಿದ ಗೂಢಚಾರರ ಮೂಲಕವಾಗಿ ಮನೋರಮೆಯೂ ಸುದರ್ಶನನೂ ಭರದ್ವಾಜಾಶ್ರಮದಲ್ಲಿ ಸುಖವಾಗಿರುವರೆಂಬ ಸಂಗತಿ ಗೊತ್ತಾಯಿತು. ಶತ್ರು ಶೇಷವನ್ನು ಉಳಿಸುವುದು ಒಳ್ಳೆಯದಲ್ಲವೆಂದುಕೊಂಡು ಯುಧಾಜಿತ್ತು, ಸುದರ್ಶನನನ್ನು ಕೊಲ್ಲಲು ನಿಶ್ಚಯಿಸಿ, ಚಿತ್ರಕೂಟ ಪರ್ವತಕ್ಕೆ ಹೋದನು. ಅಲ್ಲಿದ್ದ ನಿಷಾದರಾಜನಾದ ಬಲನೆಂಬವನನ್ನು ಸಂಧಿಸಿ ಮಾತಾಡಿ ಅವನನ್ನು ಕರೆದುಕೊಂಡು ಶೃಂಗಿಬೇರ ಪುರವನ್ನಾಳುವ ದುರ್ಧರ್ಷನೆಂಬವನ ಬಳಿಗೆ ಹೋದನು.

ಹೀಗೆ ಯುಧಾಜಿತ್ತು ತನ್ನ ನಾಶಕಾರ್ಯಕ್ಕೆ ಹೊರಟಿರುವುದನ್ನು ಕೇಳಿ ಮನೋರಮೆ ಅಳುತ್ತಾ ಭರದ್ವಾಜ ಮುನಿಯ ಬಳಿಗೆ ಹೋಗಿ ತನಗೆ ಬರಲಿರುವ ಆಪದವನ್ನು ಕುರಿತು ಹೇಳಿದಳು. ಭರದ್ವಾಜನು ಅವಳಿಗೆ ಧೈರ್ಯ ಹೇಳಿ, ಸಮಾಧಾನ ಪಡಿಸಿದನು.

ಯುಧಾಜಿತ್ತು ಭರದ್ವಾಜಾಶ್ರಮದ ಬಳಿಗೆಬಂದ ಕೂಡಲೇ ಭರದ್ವಾಜಮುನಿ ಆಶ್ರಮದೊಳಗಿನಿಂದ ಹೊರಗೆಬಂದು ಯುಧಾಜಿತ್ತುವನ್ನು ನೋಡಿ, ಬಂದ ಕಾರ್ಯವೇನೆಂದು ಕೇಳಿದನು. ಮನೋರಮೆಗಾಗಿ ಬಂದೆನೆಂದನು ಯುಧಾಜಿತ್ತು.

"ಗಂಡನನ್ನು ಕಳೆದುಕೊಂಡು, ತಂದೆಯನ್ನು ಕಳೆದುಕೊಂಡು, ಶೋಕದಲ್ಲಿ ಮುಳುಗಿ ತೇಲುತ್ತ, ತನ್ನ ಮಗನೊಂದಿಗೆ ಈ ಆಶ್ರಮದಲ್ಲಿ ಶರಣು ಪಡೆದಿರುವ ಮನೋರಮೆ ಇಲ್ಲಿಂದ ಹೊರಡುವಳೆಂದು ಕೊಂಡೆಯೇನು ?" ಎಂದನು ಭರದ್ವಾಜ.

"ಒಳ್ಳೆಯ ಮಾತಿನಲ್ಲಿ ಅವಳನ್ನು ಕಳುಹಿಸಿದರೆ ಸರಿ, ಇಲ್ಲದಿದ್ದರೆ ಬಲಾತ್ಕಾರವಾಗಿ ಎಳೆದುಕೊಂಡು ಹೋಗಬೇಕಾಗುತ್ತದೆ." ಎಂದನು ಯುಧಾಜಿತ್ತು.



ಯುಧಾಜಿತ್ತುವಿನ ಮಾತುಕೇಳಿ ಭರದ್ವಾಜನು ಕೋಪಾವೇಶದಿಂದ, "ಎಲೋ ಪಾಪಿಯೇ! ಹೀನ ಮನುಷ್ಯನೇ! ಬಲಾತ್ಕಾರವಾಗಿ ಅವಳನ್ನು ಎಳೆದು ಕೊಂಡು ಹೋಗುವಿಯಾ? ಎಲ್ಲಿ, ಎಳೆದುಕೊಂಡು ಹೋಗು ನೋಡುತ್ತೇನೆ. ನಾವು ಋಷಿಗಳೆಂದರೆ ನಿನ್ನಂಥ ರಾಜವಂಶದವರಿಗೆ ಅಷ್ಟು ಹಗುರಾಗಿ ಹೋಯಿತೇನು?" ಎಂದನು.

ಯುಧಾಜಿತ್ತು ದುಡುಕದೆ ತನ್ನ ಮಂತ್ರಿ ಯೊಂದಿಗೆ, "ಈ ಮುನಿ ಹೇಳಿದ ಮಾತು ಕೇಳಿದೆ ಯಷ್ಟೇ? ಮನೋರಮೆಯನ್ನೂ ಅವಳ ಮಗನನ್ನೂ ಕರೆದುಕೊಂಡು ಹೋಗುವ ದಾರಿ ಹೇಗೆ? ಶತ್ರು ಶೇಷವನ್ನು ಉಳಿಸಲೇಬಾರದಷ್ಟೇ? ಸುದರ್ಶನನನ್ನು ಕೊಂದರೆ ಹೊರತು ನನ್ನ ಮೊಮ್ಮಗನಿಗೆ ಕ್ಷೇಮವಿಲ್ಲ. ನನ್ನನ್ನು ಇದಿರಿಸಿ ಹೋರಾಡುವವರಂತೂ ಯಾರೂ ಇಲ್ಲ. ಮುನಿ ಹೇಳಿದ ಮಾತುಕೇಳಿ ನಾವು ಹೆದರಿ ಸುಮ್ಮನಿರಬೇಕೇನು?" ಎಂದು ಕೇಳಿದನು.

ಅದಕ್ಕೆ ಮಂತ್ರಿ "ಮುನಿಗಳ ಮೇಲೆ ಒಂಟಿ ಗಾಲಿ ನಿಂದ ದುಡುಕಿ ಧುಮುಕುವುದು ಒಳ್ಳೆಯದಲ್ಲವೆಂದೇ ನನಗೆ ತೋರುತ್ತದೆ. ಅವರಲ್ಲಿ ತಪಃಶಕ್ತಿ ತುಂಬಿರು ತ್ತದೆ. ಪೂರ್ವದಲ್ಲಿ ವಸಿಷ್ಠನ ಮೇಲೆ ಹೀಗೆಯೇ ಹಾರಿಬಿದ್ದ ವಿಶ್ವಾಮಿತ್ರನು ದೊಡ್ಡ ಪರಾಜಯವನ್ನೆ ತಿಂದನು. ಆ ಏಟಿನಿಂದ ವಿಶ್ವಾಮಿತ್ರನು ರಾಜ್ಯ ವನ್ನೇ ಬಿಟ್ಟು ತಪಶ್ಶಕ್ತಿ ಸಂಪಾದಿಸಲು ಹೋಗಿ ಋಷಿಯಾದನು. ಅದಲ್ಲದೆ ಈಗ ಸುದರ್ಶನನು ಪರಮದೀನ ಪರಿಸ್ಥಿತಿಯಲ್ಲಿದ್ದಾನೆ. ಚಿಕ್ಕಾಸಿಗೂ ಗತಿಯಿಲ್ಲದ ಹುಡುಗ. ನಿಮ್ಮ ಮೇಲೆ ಏರಿಬರುವ ಸಾಧ್ಯತೆಯಾದರೂ ಎಲ್ಲಿದೆ? ಹಾಗೊಂದು ವೇಳೆ ಅವನು ಬಂದಾಗ ನೋಡಿಕೊಂಡರಾಯಿತು. ಅಷ್ಟೇ ಹೊರತು ಈ ಮುನಿಯೊಂದಿಗೆ ತಗಾದೆ ಮಾಡಿ ಕೊಂಡು ಪ್ರಾಣಕ್ಕೆ ಸಂಚಕಾರ ತಂದುಕೊಳ್ಳುವ ಅಗತ್ಯ ವೇನೂ ಇಲ್ಲ." ಎಂದು ಹಿತಬೋಧನೆ ಮಾಡಿದನು.

ತನ್ನ ಮಂತ್ರಿಯ ಮಾತನ್ನು ಅನುಮೋದಿಸಿ ಯುಧಾಜಿತ್ತು ಒಳ್ಳೆಯ ರೀತಿಯಲ್ಲಿ ಭರದ್ವಾಜನ ದರ್ಶನ ಮಾಡಿ, ನಡೆದ ತಪ್ಪಿಗೆ ಕ್ಷಮೆ ಕೇಳಿಕೊಂಡು ತನ್ನ ಮನೆಗೆ ಹೊರಟುಹೋದನು.

ಹೀಗೆ ಬಂದ ಗಂಡವು ತಪ್ಪಿಹೋದ ಮೇಲೆ ಮನೋರಮೆ ಆಶ್ರಮದಲ್ಲಿ ನಿಶ್ಚಿಂತೆಯಾಗಿದ್ದಳು. ಸುದರ್ಶನನು ಕ್ರಮವಾಗಿ ಬೆಳೆದು ಹನ್ನೊಂದು ವರ್ಷ ಪ್ರಾಯದವನಾಗಿ, ಮುನಿಯ ಹತ್ತಿರ ವೇದಗಳನ್ನು ಅಭ್ಯಾಸ ಮಾಡಿದನು. ಹಾಗೆಯೇ ಇತರ ಶಾಸ್ತ್ರ ಗಳನ್ನೂ ಧನುರ್ವೇದವನ್ನೂ ಕಲಿತುಕೊಂಡನು.

ಒಂದು ದಿನ ಸುದರ್ಶನನ ಕನಸಿನಲ್ಲಿ ಲೋಕ ಮಾತೆಯಾದ ಮಹಾದೇವಿ ಕಾಣಿಸಿ, ಅವನಿಗೆ ಅಸ್ತ್ರ ವಿದ್ಯೆಗಳನ್ನು ಉಪದೇಶಿಸಿದಳು. ಅದರಿಂದ ಸುದರ್ಶನನ ವಿದ್ಯಾ ತೇಜಸ್ಸು ಬೆಳಗಿತು.

ಆ ಕಾಲದಲ್ಲಿ ಕಾಶೀರಾಜನ ಮಗಳಾದ ಶಶಿಕಳೆ ಅದ್ಭುತ ಸೌಂದರ್ಯವತಿ ಎಂಬ ಸಂಗತಿ ಸುದರ್ಶನನ

ಕಿವಿಗೆ ಬಿತ್ತು. ಅವಳನ್ನು ಮದುವೆಯಾಗಬೇಕೆಂದು ಅವನಿಗೆ ತೋರಿತು. ಅದೇ ವಿಧವಾಗಿ ಶಶಿಕಳೆ ಭರದ್ವಾಜಾಶ್ರಮದಲ್ಲಿರುವ ಸುದರ್ಶನನನ್ನು ಕುರಿತು ಕೇಳಿದ್ದಳು. ಆ ರಾಜಕುಮಾರನ ದೀನಸ್ಥಿತಿಯನ್ನೂ, ವಿದ್ಯಾ ಪ್ರತಿಭೆಯನ್ನೂ ಕೇಳುತ್ತಿದ್ದಂತೆ ತಾನು ಅವನನ್ನೇ ಮದುವೆಯಾಗಬೇಕೆಂದು ನಿಶ್ಚಯಿಸಿಕೊಂಡಳು.

ಭರದ್ವಾಜಾಶ್ರಮದಲ್ಲಿ ಸುದರ್ಶನನು ಹಗಲಿನಲ್ಲಿ ಶಶಿಕಳೆಯನ್ನೇ ಕುರಿತು ಆಲೋಚಿಸುತ್ತ, ರಾತ್ರಿ ಕನಸಿನಲ್ಲಿ ಅವಳನ್ನೇ ನೋಡುತ್ತ ಕಾಲಕಳೆಯುತ್ತಿದ್ದನು. ಒಂದು ದಿನ ಅವನಬಳಿಗೆ ಶೃಂಗಿ ಬೇರಪುರದ ರಾಜನಾದ ನಿಷಾದನು ಬಂದು ನಾಲ್ಕು ಕುದುರೆಗಳಿರುವ ರಥವನ್ನೂ, ಪತಾಕೆಯನ್ನೂ, ಸಮಸ್ತ ಆಯುಧಗಳನ್ನೂ ಮಿತ್ರಭಾವದಿಂದ ಬಹುಮಾನವಾಗಿ ಕೊಟ್ಟನು.



ಇದೇ ಸಮಯದಲ್ಲಿ ಭರದ್ವಾಜಾಶ್ರಮದೊಳಗಿನ ಮುನಿಗಳು ಸುದರ್ಶನನೊಂದಿಗೆ, "ಇನ್ನು ಮೇಲೆ ನಿನಗೆ ಯಾವ ಕೊರತೆಯೂ ಇಲ್ಲ. ನೀನು ಬೇಗದಲ್ಲೇ ರಾಜನಾಗಲಿರುವಿ. ನಿನಗೆ ಲೋಕಮಾತೆಯಾದ ಮಹಾದೇವಿಯ ಕಟಾಕ್ಷವಿದೆ. ಅದು ಎಂದಿಗೂ ವೃಥಾ ಹೋಗುವಂತಹುದಲ್ಲ" ಎಂದು ಮನೋರಮೆಯೊಂದಿಗೆ "ಅಮ್ಮಾ, ವೀರಮಾತಾ! ನಿನ್ನ ಮಗನು ರಾಜನಾಗುವುದು ನಿಶ್ಚಯ!" ಎಂದರು.

"ನಿಮ್ಮ ಆಶೀರ್ವಾದ ಬಲದಿಂದ ಹಾಗೆಯೇ ಆಗಲಿ! ಏನೋ ಯಾರಿಗೆ ಗೊತ್ತು? ಯಾರೊಬ್ಬರ ಸಹಾಯವೂ ಇಲ್ಲದ ನನ್ನ ಮಗನು ರಾಜನಾಗುವ ಬಗೆ ಹೇಗೋ? ನಿಮ್ಮ ಆಶೀರ್ವಾದವೇ ಎಲ್ಲಕ್ಕೂ ಹೆಚ್ಚಿನ ಸಹಾಯ!" ಎಂದು ಮನೋರಮೆ ತನ್ನ ಮನಸ್ಸಿನಲ್ಲೇ ಸಂತೋಷದಿಂದ ಉಬ್ಬಿದಳು. ಹೇಗಾದರೂ ಬದುಕಿಕೊಂಡಿದ್ದರೆ ಒಂದು ದಿನ, ಸಂತೋಷದಕಾಲ ಮೂಡುತ್ತದೆಂಬ ಮಾತನ್ನು ಅವಳು ಕೇಳಿದ್ದಳು. ಅದನ್ನೇ ನಂಬಿದ್ದಳು. ಅದಕ್ಕೆ ತಕ್ಕಕಾಲ ಬರುವುದೋ ಏನೋ?

ಸುದರ್ಶನನು ತನ್ನ ರಥದ ಮೇಲೇರಿ ಎಲ್ಲಿ ತಿರುಗಿದರೂ ಅವನ ಸುತ್ತಲೂ ಒಂದು ಅಕ್ಷೌಹಿಣಿ ಸೇನೆ ಇರುವ ಹಾಗೆ ಕಾಣುತ್ತಿತ್ತು. ಸುದರ್ಶನನ ಮೇಲೆ ಮನಸ್ಸು ನಿಲ್ಲಿಸಿದ ಶಶಿಕಳೆ ಮಾತ್ರ ಅನ್ನಾಹಾರಗಳಲ್ಲಿ ಇಷ್ಟವಿಲ್ಲದೆ ಕೃಶಳಾಗ ತೊಡಗಿದಳು. ಅವಳ ಚಿಂತೆಯನ್ನು ಸ್ವಲ್ಪ ಮಟ್ಟಿಗೆ ಗ್ರಹಿಸಿದ ತಂದೆ ಸುಬಾಹು ರಾಜನು ಅವಳಿಗೆ ಸ್ವಯಂವರ ಮಾಡಲು ನಿಶ್ಚಯಿಸಿ ಎಲ್ಲಾ ರಾಜರಿಗೂ ವರ್ತಮಾನ ಕಳುಹಿಸಿದನು.

ಸ್ವಯಂವರದಲ್ಲಿ ಪಣಸ್ವಯಂವರ, ಶುಲ್ಕ ಸ್ವಯಂವರ, ಇಚ್ಛಾಸ್ವಯಂವರ ಎಂಬ ಮೂರು ಬಗೆಗಳಿದ್ದುವು. ರಾಮನು ಶಿವಧನುರ್ಭಂಗ ಮಾಡಿ ಸೀತೆಯನ್ನು ವರಿಸಿಕೊಂಡುದು ಪಣಸ್ವಯಂವರದಲ್ಲಿ! ಸುಬಾಹು ತನ್ನ ಮಗಳಿಗೆ ನಿಶ್ಚಯಿಸಿದುದು ಇಚ್ಛಾಸ್ವಯಂವರವನ್ನೇ.

ಯಾರು ಯಾರು ಸ್ವಯಂವರಕ್ಕೆ ಬಂದಿರುವರೆಂಬುದನ್ನು ಆಗಿಂದಾಗ ತಿಳಿದುಕೊಳ್ಳುತ್ತಿದ್ದ ಶಶಿಕಳೆ ಕಣ್ಣೀರು ತುಂಬಿ ತನ್ನ ಸಖಿಯೊಂದಿಗೆ, "ಇವರೆಲ್ಲಾ ಯಾಕೆ ಬರಬೇಕು ? ನಾನು ಸುದರ್ಶನನ ಹೊರತು ಬೇರೊಬ್ಬನನ್ನು ಹೇಗೆ ಮದುವೆಯಾಗಲಿ ? ಧನವೂ ರಾಜ್ಯಗಳೂ ನನಗೇಕೆ ಸುಡಲಿಕ್ಕೋ ? ಮದುವೆಯಾದರೆ ಪ್ರಜ್ಞಾ ಪ್ರಭಾವವಿರುವ ಸುದರ್ಶನನೊಬ್ಬನನ್ನೇ ಆಗಬೇಕು. ಅವನೊಬ್ಬನೇ ನನಗೆ ತಕ್ಕವನು ! ಬೇರೆ ಯಾರೂ ಅಲ್ಲ !" ಎಂದಳು.

ಅವಳ ಸಖಿ ಅವಳ ಅಭಿಪ್ರಾಯವನ್ನು ಒಯ್ದು ರಾಣಿಗೆ ಹೇಳಿದಳು : "ಅಮ್ಮಾ ! ನಮ್ಮ ಶಶಿಕಳೆ ತನ್ನ ಮನಸ್ಸನ್ನು ಸುದರ್ಶನನೆಂಬವನಿಗೆ ಧಾರೆಯೆರೆದು ಬಿಟ್ಟಿದ್ದಾಳೆ. ಅವನು ಮಹಾಮುನಿ ಭರದ್ವಾಜಾಶ್ರಮದಲ್ಲಿ ಇರುವವನಂತೆ."

ಈ ಮಾತನ್ನು ಕೇಳಿ ರಾಣಿ ಅದನ್ನು ಗಂಡನಿಗೆ ತಿಳಿಸಿದಳು. ಅದನ್ನು ಕೇಳಿ ಸುಬಾಹು ರಾಜನು ರಾಣಿಯೊಂದಿಗೆ, "ಆ ಸುದರ್ಶನನ ಸಂಗತಿ ಪೂರಾ ನನಗೆ ಗೊತ್ತಿದೆ. ಅವನು ರಾಜ್ಯಭ್ರಷ್ಟನಾಗಿ ತಿನ್ನಲು ಗತಿಯಿಲ್ಲದೆ ಅರಣ್ಯದಲ್ಲಿ ತಾಯಿಯೊಂದಿಗೆ ಮುನಿಗಳ ಕೊಂಪೆಯಲ್ಲಿ ಇರುವವನು. ಅಂಥವನಿಗೆ ನಮ್ಮ ಹುಡುಗಿಯನ್ನು ಕೊಡುವುದೆಂದರೇನು ? ಅದೃಷ್ಟಶಾಲಿಗಳಾಗಿ, ಭಾಗ್ಯವಂತರಾದ ರಾಜಕುಮಾರರು ಸಾವಿರಾರು ಮಂದಿ ಇದ್ದಾರೆ. ಹುಡುಗಿಯ ಮನಸು ಬದಲಾಯಿಸುವ ಹಾಗೆ ಬುದ್ಧಿ ಹೇಳು," ಎಂದನು.

ರಾಣಿ ಅದಕ್ಕೆ ಒಪ್ಪಿ. ಶಶಿಕಳೆಯ ಬಳಿಗೆ ಹೋಗಿ ಅವಳನ್ನು ಬಾಚಿತಬ್ಬಿಲಲ್ಲಿಗೆಯ್ಯು. "ಮಗಳೇ, ನೀನು ಬಯಸುವ ಆ ಸುದರ್ಶನನು ಅರಣ್ಯದಲ್ಲಿ ಕಂದಮೂಲಗಳನ್ನು ತಿನ್ನುತ್ತ ದೀನಸ್ಥಿತಿಯಲ್ಲಿ, ಬಂಧುಗಳಾರಿಗೂ ಬೇಡದವನಾಗಿ. ಜನಬಲ ಧನಬಲಗಳೇನೂ ಇಲ್ಲದ ನಿರ್ಭಾಗ್ಯದವನು. ಎಷ್ಟೋ ದೊಡ್ಡ ದೊಡ್ಡ ರಾಜ ಕುಮಾರರು ನಿನಗಾಗಿ ಬಂದಿದ್ದಾರೆ. ಹಾಗೆ ಬಂದವರಲ್ಲಿ ಆ ಸುದರ್ಶನನ ತಮ್ಮನೇ ಇದ್ದಾನೆ. ತುಂಬಾ ಸುಂದರನಾಗಿದ್ದಾನೆ. ಬಲಶಾಲಿಯಾಗಿಯೂ ಬುದ್ಧಿಶಾಲಿಯಾಗಿಯೂ, ತುಂಬ ಚೆನ್ನಾಗಿ ರಾಜ್ಯಪಾಲನೆ ಮಾಡುತ್ತಾನೆ. ಅವನ ಹೆಸರು ಶತ್ರುಜಿತ್ತು. ನಿನಗೆ ಸರಿಯಾದ ಜೋಡಿ ಆತನೇ. ಇವನಿಗಾಗಿ ತಾನೇ ಇವನ ತಾತ ಕಳಿಂಗ ರಾಜನನ್ನು ಕೊಂದನು ? ಸಂದರ್ಭ ಸಿಕ್ಕಿದ ಕೂಡಲೇ ಇವನ ತಾತ ಯುಧಾಜಿತ್ತು ಈ ಸುದರ್ಶನನನ್ನು ಖಂಡಿತಾ ಕೊಲ್ಲುತ್ತಾನೆ. ಆ ಭಯದಿಂದಲೇ ಅವನು ಭರದ್ವಾಜಾಶ್ರಮದಲ್ಲಿ ಅಡಗಿದ್ದಾನೆ ಗೊತ್ತಾ ? ನಿನ್ನ ತಂದೆ ಅಂಥವನಿಗೆ ನಿನ್ನನ್ನು ಎಷ್ಟು ಮಾತ್ರಕ್ಕೂ ಕೊಡಲಾರರು. ಆದುದರಿಂದ ಗತಿ ಗೇಡಿಯಾದ ಸುದರ್ಶನನ ಆಲೋಚನೆಯನ್ನು ಬಿಟ್ಟುಬಿಡು." ಎಂದಳು.





# ದೇವೀ ಭಾಗವತ

**ಸು**ದರ್ಶನನನ್ನು ಮದುವೆಯಾಗುವ ಆಲೋಚನೆಯನ್ನು ಬಿಟ್ಟುಬಿಡುವಂತೆ ತಂದೆಯೂ ತಾಯಿಯೂ ತುಂಬಾ ಒತ್ತಾಯಪಡಿಸಿದರು. ಕಡೆಗೆ ಶಶಿಕಳೆ ತನ್ನ ತಾಯಿಯೊಂದಿಗೆ ಹೀಗೆಂದಳು :

"ಅಮ್ಮಾ, ಸುದರ್ಶನನು ಕಾಡಿನಲ್ಲಿದ್ದರೇನು ? ನಾಡಿನಲ್ಲಿದ್ದರೇನು ? ನಗರದಲ್ಲಿದ್ದರೇನು ? ಅವನ ಹತ್ತಿರ ಚಿಕ್ಕಾಸುಕೂಡಾ ಇಲ್ಲದಿದ್ದರೇನು ? ಅಥವಾ ನವನಿಧಿಗಳೇ ಅವನ ಹತ್ತಿರ ಇದ್ದರೇನು ? ನನ್ನ ಮನಸ್ಸು ಅವನನ್ನು ಬಿಟ್ಟು ಕೂದಲಿನಷ್ಟೂ ಕದಲುವಂತಹುದಲ್ಲ. ಬ್ರಹ್ಮ ಬರೆದುದನ್ನು ಬದಲಾಯಿಸಲು ಬ್ರಹ್ಮನಿಗೂ ಸಾಧ್ಯವಾಗುವುದಿಲ್ಲ, ಗಂಡನಿಗೆ ಸಂತೋಷದಿಂದ ಸೇವೆ ಮಾಡುವವಳಿಗೆ ಸ್ವರ್ಗ ಮೋಕ್ಷ ಸಮಸ್ತವೂ ಸಿಗುತ್ತವೆ ಅಮ್ಮಾ. ನನ್ನ ಭವಿಷ್ಯತ್ತನ್ನು ಮಹಾದೇವಿಯೇ ನಿಶ್ಚಯಿಸಿ ಬಿಟ್ಟಿದ್ದಾಳೆ. ನನಗೆ ಇಷ್ಟವಾದವನು ಸುದರ್ಶನನೇ !"

ಹೀಗೆ ಶಶಿಕಳೆಯು ದೃಢನಿರ್ಧಾರದ ಮಾತುಗಳನ್ನು ಅವಳ ತಾಯಿ ತನ್ನ ಗಂಡನೊಂದಿಗೆ ಹೇಳಿದಳು. ಆತನೂ ದೇವರಮೇಲೆ ಭಾರ ಹಾಕಿದನು. ಸ್ವಯಂವರಕ್ಕೆ ನಿರ್ಣಯಿಸಿದ ದಿನವು ಸಮೀಪಿಸುತ್ತಿದ್ದಿತು. ಯಾರಾರೋ ಬರುತ್ತಿದ್ದರಾಗಲೀ ಸುದರ್ಶನನು ಬರಲಿಲ್ಲ. ಶಶಿಕಳೆ ತನ್ನ ಹಿತ ಚಿಂತಕನಾದ ಒಬ್ಬ ಬ್ರಾಹ್ಮಣನನ್ನು ರಹಸ್ಯವಾಗಿ ಕರೆದು, ಅವನೊಂದಿಗೆ. "ಅಯ್ಯಾ, ನೀವು ನನ್ನ ತಂದೆಗೆ ತಿಳಿಯದ ಹಾಗೆ ಭರದ್ವಾಜಾಶ್ರಕ್ಕೆ ಹೋಗಿ ಸುದರ್ಶನನನ್ನು ನೋಡಿ, ನಾನು ಹೇಳಿದೆನೆಂದು ಹೇಳಿರಿ, ಅಂಬಾ ದೇವಿ ನನಗೆ ಸುದರ್ಶನನನ್ನೇ ಮಾಡುವೆಯಾಗಲು ಹೇಳಿದ್ದಾಳೆ, ನನ್ನ ಸ್ವಯಂವರಕ್ಕಾಗಿ ರಾಜರೆಲ್ಲಾ ಬಂದು ಕೂಡುತ್ತಿದ್ದಾರೆ. ನನ್ನ ಮನಸ್ಸು ನಿನ್ನ ಮೇಲೆಯೇ ನಿಂತಿದೆ, ನಿನ್ನನ್ನು ಹೊರತು ಬೇರೊಬ್ಬನನ್ನು ವರಿಸಲಾರೆನು. ನಿನ್ನನ್ನು ಮದುವೆಯಾಗಲು ಸಾಧ್ಯವಾಗದೇ ಹೋದ ಪಕ್ಷದಲ್ಲಿ ನಾನು ಅಗ್ನಿಗೆ ಹಾರುತ್ತೇನೆ. ನೀನು ತಪ್ಪಿದರೆ ನಾನು ಜೀವದೊಂದಿಗೆ ಇರುವೆನೆಂಬುದು ಸುಳ್ಳು ! ಅಂಬಾದೇವಿಯ ದಯದಿಂದ ನಮಗೆ ಸಮಸ್ತ ಶುಭಗಳೂ ಕೈ ಗೂಡುತ್ತವೆ. ಅವಳು ಹೇಳಿದ ಮಾತು

೯. ಶಶಿಕಳಾ ಸ್ವಯಂವರ



ಎಂದಿಗೂ ಸುಳ್ಳಾಗದು. ಆ ಜಗನ್ಮಾತೆಯನ್ನು ನಂಬಿ ನೀನು ತಪ್ಪದೆ ಬಂದು ನನ್ನ ಕೈಯನ್ನು ಹಿಡಿಯಲೇ ಬೇಕು. ನನ್ನ ಸ್ವಯಂವರವು ನಿನ್ನೊಂದಿಗೇ ನಡೆಯುವುದೆಂದು ನಂಬಿದ್ದೇನೆ." ಎಂದಳು.

ಶಶಿಕಳೆಯ ಸಂದೇಶವನ್ನೂ, ಅದಕ್ಕೆ ತಕ್ಕ ದಕ್ಷಿಣೆಯನ್ನೂ ತೆಗೆದುಕೊಂಡು ಆ ಬ್ರಾಹ್ಮಣನು ಭರದ್ವಾಜಾಶ್ರಮಕ್ಕೆ ಹೋದನು. ಅಲ್ಲಿ ಸುದರ್ಶನನನ್ನು ನೋಡಿ ಶಶಿಕಳೆಯ ಸಂದೇಶವನ್ನು ಅವನಿಗೆ ತಿಳಿಸಿದನು. ಅದನ್ನು ಕೇಳಿದ ಕೂಡಲೇ ಸುದರ್ಶನನು ಅತ್ಯುತ್ಸಾಹದಿಂದ ಶಶಿಕಳೆಯ ಸ್ವಯಂವರಕ್ಕೆ ಹೊರಟುಬಿಟ್ಟನು.

ಹೀಗೆ ಅವನು ಹೊರಟು ನಿಂತುದನ್ನು ನೋಡಿ, ಅವನ ತಾಯಿ ಮನೋರಮೆಯ ಎದೆಗೆ ಕಲ್ಲು ಒತ್ತಿಕೊಂಡ ಹಾಗಾಯಿತು. ಅವಳು ತಡೆಯಲಾಗದ ದುಃಖದಿಂದ ಮಗನೊಂದಿಗೆ ಹೀಗೆ ಹೇಳಿದಳು: "ಅಪ್ಪಾ, ನನ್ನ ಕಂದಾ! ಅಷ್ಟು ಮಂದಿ ದೊಡ್ಡ ದೊಡ್ಡ ರಾಜರಿರುವ ಸ್ಥಳಕ್ಕೆ, ಸಹಾಯಕರಾರೂ ಇಲ್ಲದೆ, ನೀನೊಬ್ಬನೇ ಹೋಗುವೆಯಾ? ನಿನ್ನ ಪಾಲಿಗೆ ಯಮನಲ್ಲವೇ ಆ ಯುಧಾಜಿತ್ತು? ಅವನು ಅಲ್ಲಿಗೆ ಬಂದೇ ಬರುತ್ತಾನೆ. ನೀನು ಅವನ ಕಣ್ಣಿಗೆ ಬಿದ್ದರೆ ಏನು ಗತಿಯಪ್ಪಾ? ನನಗೆ ಪುತ್ರಶೋಕವನ್ನು ತರಬೇಡವೋ ಕಂದಾ! ನನ್ನಮಾತು ಸ್ವಲ್ಪ ಕೇಳಪ್ಪ. ಈ ಹಟವನ್ನು ಬಿಡಪ್ಪಾ!"

ಆಗ ತನ್ನ ತಾಯಿಗೆ ಸುದರ್ಶನನು, "ಅಮ್ಮಾ! ಮಹಾದೇವಿಯ ಆಜ್ಞೆಯನ್ನು ಪಾಲಿಸಲು ಸಿದ್ಧನಾಗಿ ನಿಂತವನಿಗೆ ಕೆಡುಕು ಹೇಗಾಗುತ್ತದೆ? ಇನ್ನೊಬ್ಬನ ಬಲವನ್ನು ಎಣಿಸಿಕೊಂಡು ನಾನೇಕೆ ಹೆದರಬೇಕು? ನೀನು ಕ್ಷತ್ರಿಯ ವನಿತೆಯಾಗಿದ್ದು ಹೀಗೆ ಕಣ್ಣೀರು ತುಂಬಿಕೊಳ್ಳಬಹುದೆ? ಆಗುವಂತಹುದು ಹೇಗಾದರೂ ಆಗಿಯೇ ಆಗುತ್ತದೆ. ಸುಖ ದುಃಖಗಳು ಕಾವಡಿ ಬಿಂದಿಗೆಗಳೆಂದು ತಿಳಿಯಮ್ಮಾ. . ದೇವಿಯನ್ನು ನಂಬಿ ಧೈರ್ಯವಾಗಿರು" ಎಂದು ತಾಯಿಗೆ ಧೈರ್ಯ ಹೇಳಿ, ನಿಷಾದ ರಾಜನು ತನಗೆ ಕೊಟ್ಟ ರಥವನ್ನು ಏರಿಕೊಂಡು ಹೊರಡಲು ಸಿದ್ಧನಾಗಿ ತಾಯಿಯನ್ನು ನೋಡಿದನು.

ಆಗ ಮನೋರಮೆ ಅವನನ್ನು ಹರಸುತ್ತ, "ಕಂದಾ, ನಿನ್ನನ್ನು ಬಿಟ್ಟು ಒಂದುಕ್ಷಣ ಕಳೆಯುವುದೂ ನನಗೆ ಕಷ್ಟವಾಗಿದೆ. ನಿನ್ನನ್ನು ನೋಡಿಕೊಂಡೇ ಇಷ್ಟು ಕಾಲ ಬದುಕಿರಲು ಸಾಧ್ಯವಾಯಿತು. ಈಗ ನಿನ್ನನ್ನು ಅಗಲಿ ಬದುಕಿರಲು ನನಗೆ ಸಾಧ್ಯವಾಗದು. ನಾನೂ ಬರುವೆನು. ನನ್ನನ್ನು ಸಹಾ ನಿನ್ನ ರಥದ ಮೇಲೆ ಏರಿಸಿಕೊಂಡು ಹೋಗಪ್ಪ" ಎಂದಳು.

ಹಾಗೇ ಆಗಲೆಂದು ಸುದರ್ಶನನು ತನ್ನ ತಾಯಿಯನ್ನೂ, ಸೈರಂಧ್ರಿಯನ್ನೂ ರಥದ ಮೇಲೆ ಏರಿಸಿಕೊಂಡು ಹೋಗಿ ಕಾಶೀ ನಗರವನ್ನು ತಲುಪಿದನು. ಸ್ವಯಂವರಕ್ಕಾಗಿ ಬಂದ ರಾಜರಿಗೆಲ್ಲಾ ಗೌರವ ಮರ್ಯಾದೆಗಳನ್ನು ತೋರಿಸಿದ ಹಾಗೆಯೇ,

ಸುಬಾಹುರಾಜನು ಸುದರ್ಶನನಿಗೂ ಇದಿರಾಗಿಬಂದು ಸ್ವಾಗತ ಹೇಳಿ ಬಿಡದಿಯನ್ನು ತೋರಿಸಿ, ಪರಿಚಾರಕರನ್ನೂ ನಿಯಮಿಸಿದನು.

ಶಶಿಕಳೆಯ ಸ್ವಯಂವರಕ್ಕೆ ತನ್ನ ಮೊಮ್ಮಗನೊಂದಿಗೆ ಬಂದ ಯುಧಾಜಿತ್ತು ಮತ್ತು ಇತರ ರಾಜರುಕೂಡಾ ಸುದರ್ಶನನನ್ನು ನೋಡಿ, "ಎಲೆಲಾ! ಈ ತಿರುಕ ತಾನೂ ಒಬ್ಬ ತಕ್ಕವನ ಹಾಗೆ ಈ ಸ್ವಯಂವರಕ್ಕೆ ಬಂದಿದ್ದಾನಲ್ಲ! ಮಹಾ ಮಹಾ ರಾಜಕುಮಾರರನ್ನು ಬಿಟ್ಟು ಆ ರಾಜಕುಮಾರಿ ತನ್ನನ್ನೇ ವರಿಸುತ್ತಾಳೆಂದುಕೊಂಡಿದ್ದಾನೇನೋ! ಏನೋ ಹೇಳುತ್ತಾರಲ್ಲ, ಆಸೆಬಿಟ್ಟ ಬಂಜೆಯೂ ಬಸಿರಾದಳಂತೆ!" ಎಂದು ತಮ್ಮೊಳಗೆ ತಾವು ಮಾತಾಡಿಕೊಂಡರು.

ಅವರ ಮಾತುಗಳನ್ನು ಕೇಳಿ ಯುಧಾಜಿತ್ತು, "ನೀವೆಲ್ಲಾ ನೋಡುತ್ತಾ ಇರಿ. ಈ ಸುದರ್ಶನನಿಗೆ ನಾನೇ ಯಮ!" ಎಂದನು.

ಅದನ್ನು ಕೇಳಿ ಕೇರಳದ ರಾಜನು, "ಇದರಲ್ಲಿ ಯಾರೇನು ಮಾಡಲು ಸಾಧ್ಯವಿದೆ? ಇದು ಇಚ್ಛಾ ಸ್ವಯಂವರ. ವಧು ತನಗೆ ಇಷ್ಟಬಂದವರನ್ನು ವರನಾಗಿ ಸ್ವೀಕರಿಸುತ್ತಾಳೆ. ಅದಕ್ಕೆ ಉಳಿದವರೆಲ್ಲಾ ಒಪ್ಪಿಕೊಂಡು ತೀರಲೇಬೇಕು. ಅದನ್ನು ವಿರೋಧಿಸಿ ಗಲಭೆ ಎಬ್ಬಿಸಿದರೆ ಯಾವ ರಾಜರಿಗೂ ಮರ್ಯಾದೆ ಗೊತ್ತಿಲ್ಲವೆಂಬ ಕೆಟ್ಟಮಾತು ಬರುತ್ತದೆ. ಅದು ಹೋಗಲಿ. ಯುಧಾಜಿತ್ತೂ, ನೀನು ಈ ಸುದರ್ಶನನ ರಾಜ್ಯವನ್ನು ಅಕ್ರಮವಾಗಿ ವಶಪಡಿಸಿಕೊಂಡು ನಿನ್ನ ಮೊಮ್ಮಗನಿಗೆ ಪಟ್ಟಗಟ್ಟಿದೆ. ಒಂದು ವೇಳೆ ಸ್ವಯಂವರದಲ್ಲಿ ನಿನ್ನ ಮೊಮ್ಮಗನ ಕೊರಳಿಗೆ ವರಮಾಲೆ ಬಿತ್ತು ಅಂದುಕೋ. ಆಗ ಸುದರ್ಶನನು ನಿನ್ನನ್ನೇನಾದರೂ ಮಾಡಲೂಬಹುದು! ಎಚ್ಚರಾಗಿರು. ಏನಾದರೂ ಕಡೆಗೆ ಧರ್ಮವೇ ಜಯಿಸುತ್ತದೆ. ಸತ್ಯವು ವೃದ್ಧಿಗೊಳ್ಳುತ್ತದೆ. ಸುಮ್ಮನೆ



ಹಟಗಟ್ಟಿ ದುಷ್ಟತನವನ್ನು ತೋರಿಸ ಬೇಡಯ್ಯ. ರಾಜಕುಮಾರಿ ಇಲ್ಲಿ ಸೇರಿದವರನ್ನೆಲ್ಲಾ ವರಿಸಲು ಸಾಧ್ಯವಿಲ್ಲ ವಷ್ಟೆ? ಒಬ್ಬನನ್ನು ಮಾತ್ರವರಿಸುತ್ತಾಳೆ. ಉಳಿದವರು ಅಸೂಯೆಪಡುವುದು ನ್ಯಾಯವಲ್ಲ" ಎಂದನು.

ಆ ಮಾತಿಗೆ ಯುಧಾಜಿತ್ತು "ನೀನು ಹೇಳಿದಂತೆ ಇದು ಇಚ್ಛಾ ಸ್ವಯಂವರವೇ. ಇಲ್ಲಿ ಕೂಡಿದವರಲ್ಲಿ ಹೆಚ್ಚಿನ ಯೋಗ್ಯತೆಯುಳ್ಳವವನನ್ನು ರಾಜಕುಮಾರಿ ವರಿಸಿದರೆ ನಮಗೂ ಸಂತೋಷವೇ. ಆದರೆ ಇಷ್ಟು ಮಂದಿ ತೇಜೋವಂತರೂ, ಉತ್ತಮೋತ್ತಮರೂ ಆದ ರಾಜಕುಮಾರರಿರುವಾಗ ಅವಳು ಊರೂ ಹೆಸರು ಇಲ್ಲದ ಅನಾಮಧೇಯನನ್ನು ವರಿಸಿಬಿಟ್ಟರೆ ಉಳಿದವರೆಲ್ಲಾ ನೋಡುತ್ತಾ ಸುಮ್ಮನಿರಬೇಕೇನು? ಸಿಂಹವು ಭುಜಿಸಬೇಕಾದುದನ್ನು ನರಿ ತಿನ್ನಬಹುದೆ? ನೀನು ಹೇಳುವ ನೀತಿ ಇಂತಹುದೇನು? ಬ್ರಾಹ್ಮಣರಿಗೆ ವೇದಗಳೇ ಬಲ. ಕ್ಷತ್ರಿಯರಿಗೆ ಆಯುಧವೇ



ಬಲ. ಕ್ಷತ್ರಿಯರ ವಿವಾಹಗಳಿಗೆ ಕೂಡಾ ಆಯುಧ ಬಲವೇ ಶುಲ್ಕ. ಈ ವಧು ಬಲವಂತನ ಸೊತ್ತು, ಏನು ಇಚ್ಛಾ ಸ್ವಯಂವರವಾದರೂ!" ಎಂದನು.

"ಆ ಬಲವು ಸುದರ್ಶನನದೇ ಆದರೆ ಅವನೇ ತೆಗೆದುಕೊಳ್ಳುತ್ತಾನಲ್ಲ!" ಎಂದರು ಕೆಲವರು ಜಗಳದ ಬೆಂಕಿಗೇ ತುಪ್ಪ ಹಾಕಲು ಸಿದ್ಧರಿದ್ದವರ ಹಾಗೆ. ಆ ಮಾತು ಕೇಳಿ ಕೆಲವರು ಗಟ್ಟಿಯಾಗಿ ನಕ್ಕರು,

ಸ್ವಯಂವರಕ್ಕೆ ಬಂದ ರಾಜರೊಳಗೆ ವಾಗ್ವಾದವು ಬೆಳೆಯಿತು. ಸುಬಾಹುವನ್ನು ಕೂಡಾ ತಮ್ಮ ವಿವಾದಕ್ಕೆ ಕರೆಯಿಸಿದರು. ಅವರ ವಾದ ವಿವಾದ ಗಳನ್ನು ಕೇಳಿ ಸುಬಾಹು, "ಮಹಾರಾಜ ಬಾಂಧವರೇ. ನಿಜ ಹೇಳುತ್ತೇನೆ. ನನ್ನ ಮಗಳು ಸುದರ್ಶನನನ್ನೇ ಮನಃ ಪೂರ್ವಕವಾಗಿ ವರಿಸಲು ನಿಶ್ಚಯಿಸಿದ್ದಾಳೆ. ಅವನು ಅರ್ಹನಲ್ಲವೆಂದು ಎಷ್ಟು ಹೇಳಿದರೂ ಕೇಳುವುದಿಲ್ಲ. ಅವನು ಕೂಡಾ ಸ್ವಯಂವರಕ್ಕೆ ಬಂದಿದ್ದಾನೆ. ಹೇಗೆ ನಡೆಯಬೇಕೆಂದಿರುವುದೋ ಹಾಗೆಯೇ ನಡೆಯುತ್ತದೆ. ವಾಗ್ವಾದವನ್ನು ಬೆಳೆಸ ಬೇಡಿರಿ" ಎಂದು ಕೈ ಮುಗಿದು ಕೇಳಿಕೊಂಡನು.

ಸುಬಾಹು ಸುದರ್ಶನನನ್ನು ಸ್ವಯಂವರದಿಂದ ಬಹಿಷ್ಕರಿಸುವುದಿಲ್ಲವೆಂದು ಎಲ್ಲರಿಗೂ ತಿಳಿಯಿತು. ಕಡೆಗೆ ಅವರು ಸುದರ್ಶನನನ್ನೇ ಕರೆಯಿಸಿ ಹೀಗೆಂದರು: "ನೋಡಪ್ಪ, ನೀನು ಒಬ್ಬಂಟಿಗನಾಗಿ ಬಂದವನು. ಭಾರಿಭಾರಿ ಸೇನೆಗಳನ್ನು ಕರೆದುಕೊಂಡು ಬಂದಿರುವ ರಾಜಕುಮಾರರೂ. ಅನೇಕ ಮಂದಿ ರಾಜರೂ ಇಲ್ಲಿದ್ದಾರೆ. ಯುದ್ಧಮಾಡಿಯಾದರೂ ಶಶಿಕಳೆಯನ್ನು ಮದುವೆಯಾಗುವ ನಿರ್ಧಾರದಲ್ಲಿ ಬಂದಿದ್ದಾರೆ. ನೀನೊಬ್ಬನು ಏನು ಮಾಡಲು ಸಾಧ್ಯ? ನಿನ್ನ ತಮ್ಮನಾದ ಶತ್ರುಜಿತ್ತು ಅಪಾರಕಾರ್ಯ ಸಾಹಸ ಉಳ್ಳವನು. ಮಹಾ ಯೋಗ್ಯನು. ಸುಂದರನಾಗಿಯೂ ಇದ್ದಾನೆ. ಅವನಿಗೆ ಸಹಾಯವಾಗಿ ಅವನ ತಾತ, ಪ್ರತ್ಯೇಕವಾಗಿ ನಿನ್ನನ್ನು ಕೊಲ್ಲಲಿಕ್ಕೇ ಬಂದಿದ್ದಾನೆ. ಇಂತಹ ಸ್ಥಳಕ್ಕೆ ನೀನು ಬಂದುದು ಎಷ್ಟು ದೊಡ್ಡ ತಪ್ಪೆಂದು ಗೊತ್ತಾಯಿತೆ? ನಿನ್ನನ್ನು ಯಾರು ಕರೆದರೋ ಪಾಪ? ಯಾಕೆ ಬಂದೆಯಪ್ಪಾ? ಇರುವ ಮಾತು ಹೇಳಿದ್ದೇವೆ. ಆಮೇಲೆ ನಿನ್ನ ಇಷ್ಟ!"

ಅವರ ಮಾತಿಗೆ ಸುದರ್ಶನನು ಹೀಗೆಂದನು: "ಮಹಾರಾಜರೇ, ನಿಮ್ಮ ದಯೆಗೂ ಹಿತಚಿಂತನೆಯ ಮಾತುಗಳಿಗೂ ತುಂಬಾ ಕೃತಜ್ಞನು. ನೀವು ಹೇಳಿದ್ದೆಲ್ಲವೂ ನಾನೂ ಬಲ್ಲೆನು. ಇಷ್ಟರವರೆಗೆ ಬಂದ ಮೇಲೆ ನಿಮ್ಮ ಮಾತು ಕೇಳಿ ಭಯಪಟ್ಟು ಹೋಗುವುದರಿಂದ ಯಾವ ಪ್ರಯೋಜನವೂ ಇಲ್ಲ. ನನ್ನ ಭಾರವನ್ನೆಲ್ಲಾ ಹೊತ್ತು ನನ್ನನ್ನು ಇಲ್ಲಿಗೆ ಬರುವಂತೆ ಮಾಡಿದವಳು ಮಹಾ ಮಾತೆ! ಅವಳು ನನಗೆ ಏನಾದರೂ ಸಹಾಯ ಮಾಡದೆ ಶತ್ರುಗಳಿಗೆ ಒಪ್ಪಿಸಿ ಬಿಡುವಳೇ? ನಿಜಕ್ಕೂ ನನಗೆ ಶತ್ರುಗಳೂ ಇಲ್ಲ, ಮಿತ್ರರೂ ಇಲ್ಲ. ಎಲ್ಲಿ ನೋಡಿದರೂ ಆ ಮಹಾಮಹೇಶ್ವರಿಯೇ ಕಾಣುತ್ತಿದ್ದಾಳೆ. ಅವಳ ಆದೇಶದ ಮೇಲೆಯೇ ನಾನು

ಈ ಸ್ವಯಂವರಕ್ಕೆ ಬಂದೆ. ನನ್ನ ಮೇಲೆ ಯಾರಾದರೂ ಕೋಪದಿಂದ ಕನಲುವರಾದರೆ ಅವರು ದೇವಿಗೆ ಶತ್ರುಗಳಾಗುವರು. ನನಗೆ ಸೇನೆಗಳು ಇಲ್ಲವೆನ್ನುವಿರಾ? ಅಗತ್ಯವಿಲ್ಲ. ಯಾವ ಮಹಾದೇವಿ ಎಂತಹ ದುರ್ಬಲರಿಗಾದರೂ ಬಲವನ್ನೂ, ಸಂಪತ್ತನ್ನೂ ಕೊಡುವಳೋ ಆ ದೇವಿಯೇ ನನಗೆ ಬಲ! ಇತರ ಬಲಗಳ ವಿಷಯದಲ್ಲಿ ನನಗೆ ನಂಬುಗೆ ಇಲ್ಲ. ನನ್ನ ದೃಷ್ಟಿಗೆ ಶಕ್ತರೂ ಅಶಕ್ತರೂ ಎಂಬುದೇನಿಲ್ಲ. ಮಹಾಶಕ್ತಿಯ ಅನುಗ್ರಹಕ್ಕೆ ಪಾತ್ರರಾದವರೆಲ್ಲಾ ಶಕ್ತಿವಂತರೇ. ಆವಳ ಅನುಗ್ರಹಕ್ಕೆ ಪಾತ್ರರಾಗದ ಬ್ರಹ್ಮಾದಿಗಳಾದರೂ ಶಕ್ತಿಹೀನರೇ! ನನಗೆ ಜಯವಾದರೂ ಅಪಜಯವಾದರೂ ಅದು ಜಗದಂಬೆಯದೇ ಹೊರತು ನನ್ನದಲ್ಲ. ಆದುದರಿಂದ ನೀವಾರೂ ನನ್ನನ್ನು ಕುರಿತು ಚಿಂತಿಸಬೇಡಿರಿ"



ಈ ಮಾತುಗಳನ್ನು ಕೇಳಿ ಕೆಲಮಂದಿ ರಾಜರು ಸಂತೋಷ ಪಟ್ಟು, "ಅಪ್ಪಾ, ನಿನ್ನ ಮಾತುಗಳು ಮೂರುಕಾಲಕ್ಕೂ ನಿಜ. ನೀನೊಬ್ಬ ಪುಣ್ಯಾತ್ಮ. ಆದರೆ ನಿನ್ನ ಮೇಲೆ ಯುಧಾಜಿತ್ತುವಿನದು ಹುಟ್ಟು ಹಗೆ ಯೆಂಬುದನ್ನು ಮಾತ್ರ ಮರೆಯಬೇಡ!" ಎಂದು ಎಚ್ಚರಿಸಿದರು.

ಆ ಮಾತು ಹೇಳಿದವರನ್ನು ನೋಡಿ ಸುದರ್ಶನನು, "ಮಹಾರಾಜರೆ, ನನ್ನ ಮೇಲೆ ನಿಮಗೆಲ್ಲಾ ಇರುವ ತುಂಬು ಅನುಗ್ರಹದ ಒತ್ತಡದಲ್ಲಿ ನೀವು ನನಗೆ ಈ ಮಾತುಗಳನ್ನು ಹೇಳುವಿರಿ. ಈ ಪ್ರಪಂಚದಲ್ಲಿ ಮರಣವು ಯಾರ ಅಧಿನದಲ್ಲಿಯೂ ಇಲ್ಲ. ಪ್ರಾಣವಿರುವವರೆಲ್ಲ ಕರ್ಮಕ್ಕೆ ಕಟ್ಟುಬಿದ್ದವರೇ. ಯಾರಿಗೂ ಸ್ವೇಚ್ಛೆಯೆಂಬುದಿಲ್ಲ. ಕಾಲವೇ ಕರ್ಮವನ್ನೂ ಸ್ವಭಾವವನ್ನೂ ಮೊದಲೇ ನಿರ್ಣಯಿಸಿಟ್ಟಿರುತ್ತದೆ. ಕಾಲವು ಬಾರದಿದ್ದರೆ ದೇವರಿಂದಲೂ ಕೊಲ್ಲಲು ಸಾಧ್ಯವಿಲ್ಲ. ಯಮಧರ್ಮರಾಜನಾದರೂ ನಿಮಿತ್ತ ಮಾತ್ರನೇ. ನನ್ನ ತಂದೆಯನ್ನು ಕೊಂದ ಸಿಂಹವೂ ನನ್ನ ತಾತನನ್ನು ಕೊಂದ ಯುಧಾಜಿತ್ತೂ ಸಹಾ ನಿಮಿತ್ತ ಮಾತ್ರರೇ. ಒಂದು ವೇಳೆ ಮರಣವೇ ಬರುವುದಾಗಿದ್ದರೆ ತಪ್ಪಿಸಲು ಯಾರಿಂದ ಸಾಧ್ಯ? ಆದುದರಿಂದ ನನ್ನ ದೃಷ್ಟಿಗೆ ಒಬ್ಬರನ್ನು ಒಬ್ಬರು ರಕ್ಷಿಸುವರೆಂದು ನಂಬಲು ಸಾಧ್ಯವಿಲ್ಲ. ದೈವಬಲವಿದ್ದರೆ ಸಾವಿರ ವರ್ಷವೂ ಬದುಕಬಹುದು. ನಾನು ದೈವವನ್ನು ನಂಬಿಕೊಂಡೇ ಬಂದಿದ್ದೇನೆ. ನನಗೆ ಸಹಾಯಕವಾಗಿರುವ ಸೇನೆಕೂಡಾ ಆ ದೈವವೇ. ನನಗೆ ಶತ್ರುಗಳಿದ್ದರೆ ಅದುಕೂಡಾ ದೈವವೇ. ನನ್ನನ್ನು ಕುರಿತು ಯಾರೂ ಚಿಂತಿಸಬೇಕಾಗಿಲ್ಲ" ಎಂದನು. ಅವನ ಮಾತುಗಳನ್ನು ಕೇಳಿ ಎಲ್ಲರೂ ಮೆಚ್ಚಿಗೆಯಿಂದ ಸಂತೋಷ ವ್ಯಕ್ತಪಡಿಸಿದರು. ಸುದರ್ಶನನು ತನ್ನ ಬಿಡದಿಗೆ ಹೊರಟು ಹೋದನು.

ಸ್ವಯಂವರದ ದಿನವು ಉದಯವಾಯಿತು. ಸುಬಾಹು ಬಂದಿರುವ ರಾಜರನ್ನೆಲ್ಲಾ ಸ್ವಯಂವರ ಮಂಟಪದಲ್ಲಿ ಸಮಾವೇಶಗೊಳಿಸಿದನು. ಎಲ್ಲರೂ



ಶಶಿಕಳೆಯ ಬರುವಿಕೆಯನ್ನು ಎದುರು ನೋಡಿಕೊಂಡಿದ್ದರು. ಅವಳು ಬಂದು ಯಾರ ಕೊರಳಿಗೆ ಮಾಲೆಹಾಕುವಳೋ ಎಂದು ಎಲ್ಲರೂ ಆಶ್ಚರ್ಯಪಡುತ್ತಿದ್ದರು. ಕೆಲವರು ತಮ್ಮ ತಮ್ಮೊಳಗೆ ಶಶಿಕಳೆ ಸುದರ್ಶನನ ಹೊರತು ಬೇರೊಬ್ಬನನ್ನು ವರಿಸಲಾರಳೆಂದು ನಂಬುಗೆಯಿಂದ ಹೇಳುತ್ತಿದ್ದರು. ಹಾಗಿದ್ದರೆ ಯುದ್ಧವು ತಪ್ಪದೆಂದು ಮತ್ತೆ ಕೆಲವರು ಹೇಳುತ್ತ ಆಗ ತಾವೇನು ಮಾಡಬೇಕು ಎಂಬುದನ್ನು ಕುರಿತು ಮಥಿಸಿಕೊಳ್ಳುತ್ತಿದ್ದರು.

ಮಂಗಳವಾದ್ಯಗಳು ಮೊಳಗುತ್ತಿರಲು ಶಶಿಕಳೆ ಸ್ನಾನಮಾಡಿ, ದಿವ್ಯಾಲಂಕಾರ ಭೂಷಿತೆಯಾಗಿ ಕೈಯಲ್ಲಿ ಇಷ್ಟೇಹೂವಿನ ವರಮಾಲಿಕೆಯನ್ನು ಹಿಡಿದುಕೊಂಡು ಗೆಳತಿಯರೊಂದಿಗೆ ಬಂದು ಒಂದು ಸ್ತಂಭದ ಬಳಿಯಲ್ಲಿ ಗಕ್ಕನೆ ನಿಂತಳು. ತಲೆ ಬಗ್ಗಿಸಿಕೊಂಡು ಏನೋ ಆಲೋಚನೆಯಲ್ಲಿರುವವಳ ಹಾಗೆ ಸುಮ್ಮನೆ ನಿಂತಿದ್ದಳು.

ಅದನ್ನು ನೋಡಿ ಅವಳ ತಂದೆ ಸುಬಾಹು ಅವಳ ಹತ್ತಿರ ಹೋಗಿ ನಗುತ್ತ, "ನೋಡಮ್ಮಾ! ಈ ದಿನ ಇಲ್ಲಿ ಎಷ್ಟೆಷ್ಟೋ ದೊಡ್ಡ ದೊಡ್ಡ ರಾಜಕುಮಾರರು, ಮಹಾಮಹಾ ಕೀರ್ತಿವಂತರು ನಿನ್ನನ್ನು ಮದುವೆಯಾಗಲು ಬಂದು ಕೂಡಿದ್ದಾರೆ. ಅವರಲ್ಲಿ ಎಲ್ಲಾ ವಿಧದಲ್ಲಿಯೂ ನಿನ್ನ ಮನಸ್ಸಿಗೆ ಹಿಡಿಸಿದವನನ್ನು ಆರಿಸಿ ಮಾಲೆ ಹಾಕಿಬಿಡಮ್ಮಾ" ಎಂದನು. ತಂದೆಯ ಮಾತಿಗೆ ಶಶಿಕಳೆ ತಲೆಯೆತ್ತಿ ಹೀಗೆಂದಳು: "ಅಪ್ಪಾ, ಇವರೆಲ್ಲರೂ ಕೇವಲ ಕಾಮು:ಕರು, ಉನ್ಮತ್ತರು, ದುಷ್ಟಾತ್ಮರು, ಪಾಪಿಗಳು. ಸಾಧ್ವಿಯಾದವಳು ಇವರ ಇದಿರಿಗೆ ಬರಲೇ ಬಾರದು. ವರಮಾಲೆ ಹಿಡಿದುಕೊಂಡು ಅನೇಕ ಮಂದಿಯ ಮುಂದೆ ಬರುವವಳು ಬೆಲೆವೆಣ್ಣಲ್ಲವೇ? ಈ ರಾಜರ ಮಧ್ಯಕ್ಕೆ ಹೋಗಲು ನಾನು ಬೆಲೆವೆಣ್ಣೇ ಅಪ್ಪಾ? ನಾನು ಸುದರ್ಶನನ ಸೊತ್ತು. ಇತರರನ್ನು ನೋಡುವ ಅಗತ್ಯವಾದರೂ ನನಗೇನಿದೆ? ನನ್ನನ್ನು ನಾನೇ ಅವಮಾನಿಸಿಕೊಳ್ಳಬೇಕೇ? ಪ್ರಪಂಚನೇ ತಲೆ ಕೆಳಗಾಗಿ ನಿಂತರೂ ನಾನು ಬೇರೊಬ್ಬನನ್ನು ವರಿಸಲಾರೆನು. ಆದುದರಿಂದ ಈ ದಿನವಲ್ಲದಿದ್ದರೆ ನಾಳೆಯಾದರೂ ನನ್ನನ್ನು ಸುದರ್ಶನನಿಗೇ ಕೊಟ್ಟು ಮದುವೆಮಾಡಿ ಕನ್ಯಾದಾನದ ಪುಣ್ಯ ಕಟ್ಟಿಕೊಳ್ಳಿರಿ ಅಪ್ಪಾ."

ಮಗಳ ಮಾತು ಕೇಳು ಕೇಳುತ್ತ ಸುಬಾಹು ರಾಜನು ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡವನಂತಾದನು. ಸ್ವಯಂವರಕ್ಕೆ ಬಂದವರೆಲ್ಲಾ ಮಹಾಬಲಿಷ್ಠರಾದ ರಾಜರು. ಅಂಥವರ ಸಂಖ್ಯೆ ಅನೇಕವಾಗಿದೆ. ಹೋಗಿ ಬಿಡಿರೆಂದು ಬೇಡಿಕೊಂಡರೆ ಹೋಗುವವರಲ್ಲ. ತನ್ನ ಮಗಳು ಮೆಚ್ಚುವಂಥ ಸುದರ್ಶನನಿಗೆ ಗಾಳಿಯ ಹೊರತು ಬೇರೆ ಯಾವ ಸಹಾಯವೂ ಇಲ್ಲ. ಈ ಸ್ಥಿತಿಯಲ್ಲಿ ಇವರೆಲ್ಲರ ಕೈಯಲ್ಲಿ ತನಗೆ ಮರಣತಪ್ಪುವ ಮಾತು ಸುಳ್ಳು. ಮಗಳ ರೂಪದಲ್ಲಿ ಮೃತ್ಯು ದೇವತೆಯೇ ಅವನ ಪಾಲಿಗೆ ನಿಂತಿದ್ದಳು!

ತಲೆ ತುಂಬಾ ಆಲೋಚನೆಯನ್ನೂ ಭೀತಿಯನ್ನೂ ತುಂಬಿಸಿಕೊಂಡು, ಸುಬಾಹು ರಾಜರ ಮಧ್ಯಕ್ಕೆ ಹೋಗಿ ಅತ್ಯಂತ ವಿನಯದಿಂದ. ಕೈ ಜೋಡಿಸಿ, "ಘನಶಾಲಿಗಳಾದ ಮಹಾರಾಜರೇ! ದಯಾಮಯರೇ! ಮಹಾತ್ಮರೇ! ನನ್ನ ತಪ್ಪನ್ನು ಕ್ಷಮಿಸಿ ನನ್ನ ಮೇಲೆ ಅನುಗ್ರಹವಿಟ್ಟು, ನಾನು ಕೊಡುವ ಕಾಣಿಕೆಗಳನ್ನು ಸ್ವೀಕರಿಸಿಕೊಂಡು ಎಲ್ಲರೂ ದಯಮಾಡಬೇಕೆಂದು ಪ್ರಾರ್ಥಿಸುತ್ತೇನೆ. ಎಷ್ಟು ವಿಧವಾಗಿ ಹೇಳಿದರೂ ನನ್ನ ಮಗಳು ಇನ್ನೊಬ್ಬನನ್ನು ವರಿಸಲಾರೆನೆಂದೇ ಹೇಳುತ್ತಾಳೆ. ಅವಳಿಗೆ ಏನೂ ತಿಳಿಯದು. ಮುಗ್ಧೆ! ನನ್ನ ಮೂಲಕವಾಗಿ ನಿಮಗೆಲ್ಲರಿಗೂ ನಿಷ್ಕಾರಣವಾಗಿ ಶ್ರಮವಾಯಿತು. ನನ್ನ ತಪ್ಪನ್ನು ದೊಡ್ಡ ಮನಸ್ಸಿನಿಂದ ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ. ನಿಮಗೆಲ್ಲರಿಗೂ, ಆನೆಗಳನ್ನು, ರತ್ನಗಳನ್ನು, ಕುದುರೆಗಳನ್ನು ಗ್ರಾಮಗಳನ್ನು, ನನ್ನ ರಾಜ್ಯವನ್ನೇ ಬೇಕಾದರೂ ಹಂಚಿ ಕೊಟ್ಟುಬಿಡುತ್ತೇನೆ." ಎಂದು ಪರಿಪರಿಯಾಗಿ ಕೇಳಿಕೊಂಡನು.

ಆದರೆ ಅವನಿಗೆ ಯಾರೂ ಯಾವ ಬಗೆಯ ಸಮಾಧಾನವನ್ನೂ ಕೊಡಲಿಲ್ಲ. ಎಲ್ಲರನ್ನೂ ನೋಡಿ ಯುಧಾಜಿತ್ತು ಮಾತ್ರ ಕೋಪದಿಂದ ಹಲ್ಲುಗಳನ್ನು ಕಟಕಟನೆ ಕಡಿಯುತ್ತ, "ಏನಯ್ಯಾ ನೀನು ಹೇಳುವುದು? ಬುದ್ಧಿಯಿಲ್ಲದೆ ನಿನ್ನ ಮಗಳನ್ನು ಆ ಸುದರ್ಶನನಿಗೇ ಕೊಡಲು ನಿಶ್ಚಯಿಸಿ, ಬಂದಿರುವ ವರನ್ನೆಲ್ಲ ಹೋಗಿ ಬಿಡಿ ಎನ್ನಲಾಗದೆ, ಜಂಬುಕ ತಂತ್ರ ತೋರಿಸುವೆಯಾ? ನಮ್ಮನ್ನೆಲ್ಲಾ ಮೂರ್ಖರೆಂದುಕೊಂಡೆಯಾ? ಮೊದಲೇ ಅನುಮಾನವಿರುವಾಗ ಇಷ್ಟು ಮಂದಿಯನ್ನು ಏತಕ್ಕಾಗಿ ಕರೆಯಿಸಿದೆ? ಕರೆಯಿಸಿಕೊಂಡ ಮೇಲೆ ಈಗ ಆಳುಮೋರೆ ತೋರಿಸಿದರೆ ಏನು ಲಾಭ? ನೋಡು, ನಾನು ನಿನ್ನ ಮದವನ್ನು ಕರಗಿಸಿ, ಈ ಸುದರ್ಶನನಿಗೊಂದು ಗತಿ ಕಾಣಿಸಿ, ನನ್ನ ಮೊಮ್ಮಗನೊಂದಿಗೇ ನಿನ್ನ ಮಗಳ ಮದುವೆ ಮಾಡುತ್ತೇನೆ! ನನಗೆ ಈ ಸುದರ್ಶನನು ಉಪ್ಪೋ ಉಪ್ಪಿನ ಕಾಯಿಯೋ! ಎಲ್ಲರೂ ಒಂದಾಗಿ ಪ್ರತಿಭಟಿಸಿದರೂ ಒಂದು ನಿಮಿಷದೊಳಗೆ ಎಲ್ಲರನ್ನೂ ಜಯಿಸಿ ಬಿಡುತ್ತೇನೆ. ಹಿಂದೆ ಭರದ್ವಾಜ ಮುನಿಗೆ ಗೌರವ ಕೊಟ್ಟು ಅವನ ಪ್ರಾಣ ತೆಗೆಯದೆ ಉಳಿಸಿದ್ದೆ. ಈ ದಿನ ಅವನನ್ನು ಉಪೇಕ್ಷಿಸಲಾರೆ. ಕಾಲ ತೀರಿದುದರಿಂದಲೇ ಅವನು ಇಲ್ಲಿಗೆ ಬಂದಿದ್ದಾನೆ. ನಿನ್ನ ಮಗಳನ್ನು ನನ್ನ ಮೊಮ್ಮಗನೊಂದಿಗೇ ಮದುವೆ ಮಾಡಿ, ನಿನ್ನನ್ನೂ ನಿನ ರಾಜ್ಯವನ್ನೂ ಕಾಪಾಡಿಕೋ! ಇಲ್ಲಾ, ನಿನ್ನ ಮಗಳನ್ನು ಸಭೆಯ ಮುಂದೆ ಬಂದು ಸುದರ್ಶನನ ಹೊರತು ಬೇರೆಯಾರನ್ನಾದರೂ ವರಿಸಿಕೊಳ್ಳಲು ಹೇಳು. ಬೇರೆ ಮಾತಿಗೆ ಅವಕಾಶವೇ ಇಲ್ಲ!" ಎಂದನು.





# ದೇವೀಭಾಗವತ

ಯುಧಾಜಿತ್ತು ಹೇಳಿದ ಕರುಳು ಚುಚ್ಚುವ ಮಾತುಗಳಿಗೆ ಏನು ಉತ್ತರ ಕೊಡುವುದೆಂದೇ ಕಾಶೀರಾಜನಿಗೆ ತೋರಲಿಲ್ಲ. ಅವನು ತಲೆ ತಗ್ಗಿಸಿಕೊಂಡು ಅಂತಃಪುರಕ್ಕೆ ಹೋಗಿ ತನ್ನ ಹೆಂಡತಿಯೊಂದಿಗೆ, "ನಮ್ಮ ಹುಡುಗಿ ಆ ಸುದರ್ಶನನನ್ನು ಬಿಟ್ಟು ಬೇರೆ ಯಾವನನ್ನಾದರೂ ವರಿಸಿದರೆ ಹೊರತು ನಮ್ಮ ಮಾನ ಉಳಿಯುವಂತಿಲ್ಲ" ಎಂದನು.

ಅದನ್ನು ಕೇಳಿ ರಾಣಿಯೂ ಹೊರೆ ಚಿಂತೆಯೊಂದಿಗೆ ತನ್ನ ಕುಮಾರಿಯ ಬಳಿಗೆ ಹೋಗಿ, "ಏಕೆ ಮಗಳೇ ಇಷ್ಟು ಹಟ ಮಾಡುವಿ? ನಿನ್ನನ್ನು ಮದುವೆಯಾಗಬೇಕೆಂದು ಅಷ್ಟು ಮಂದಿ ರಾಜರೂ ರಾಜಕುಮಾರರೂ ಬಂದಿರುವಾಗ, ಆ ಗತಿಗೇಡಿ ಸುದರ್ಶನನನ್ನೇ ಮದುವೆಯಾಗುವುದೆಂದು ಹಟ ಹಿಡಿದು ನಮ್ಮ ಪ್ರಾಣದ ಮೇಲೆ ತರುತ್ತೀಯಲ್ಲಮ್ಮಾ? ಬಾ, ಸ್ವಯಂವರ ಮಂಟಪಕ್ಕೆ ಹೋಗೋಣ. ನೀನು ಸುದರ್ಶನನನ್ನೇ ವರಿಸುವಿಯಾದರೆ ಯುಧಾಜಿತ್ತು ಆ ಸುದರ್ಶನನನ್ನು ಮಾತ್ರವಲ್ಲ, ನಿನ್ನನ್ನು ನನ್ನನ್ನು ನಿನ್ನ ತಂದೆಯನ್ನೂ ಸಹ ಕೊಂದುಬಿಡುತ್ತಾನೆ. ಮಹಾ ಕ್ರೂರನಾದ ಅವನಿಗೆ ಅಷ್ಟೊಂದು ಶಕ್ತಿಯೂ ಇದೆ. ಬೇಡಮ್ಮಾ ಈ ಹಟ" ಎಂದು ನಯಭಯಗಳಿಂದ ತುಂಬಾ ಹೇಳಿದಳು. ಅದೇ ಸಮಯದಲ್ಲಿ ತಂದೆಯೂ ಅಲ್ಲಿಗೆ ಬಂದು ಶಶಿಕಳೆಗೆ ಹಟವನ್ನು ಬಿಡಲು ಬಗೆ ಬಗೆಯಾಗಿ ಹೇಳಿದನು.

ಯಾರೆಷ್ಟೇ ಹೇಳಿದರೂ ಶಶಿಕಳೆ ತನ್ನ ದೃಢತೆಯನ್ನು ಬಿಡದೆ, ಆತ್ಮಹತ್ಯ ಮಾಡಿಕೊಳ್ಳುವೆನೇ ಹೊರತು ಇನ್ನೊಬ್ಬನನ್ನು ಕಣ್ಣೆತ್ತಿಯೂ ನೋಡಲಾರೆನೆಂದು ಹೇಳಿಬಿಟ್ಟಳು. ಆ ಮೇಲೆ ತಂದೆಯೊಂದಿಗೆ, "ಅಪ್ಪಾ, ನಿಮಗೆ ಈ ರಾಜ ಮಹಾರಾಜರನ್ನು ನೋಡಿ ಭಯವಾಗಿದ್ದರೆ ನನ್ನನ್ನು ಸುದರ್ಶನನಿಗೆ ಧಾರೆಯೆರೆದು ದಾನಮಾಡಿಕೊಟ್ಟು ರಥದ ಮೇಲೆ ಕೂಡಿಸಿ ರಾಜಧಾನಿಯ ಗಡಿ ದಾಟಿಸಿ ಬಿಟ್ಟುಬಿಡಿ. ಯುದ್ಧ ನಡೆದರೆ ಸುದರ್ಶನನೇ ನೋಡಿಕೊಳ್ಳುತ್ತಾನೆ. ನಿಮಗೆ ಆ ಭಯಬೇಡ" ಎಂದಳು. "ನೋಡಮ್ಮಾ, ಅನೇಕ ಮಂದಿಗಳೊಂದಿಗೆ

೧೦. ಸುದರ್ಶನನಿಗೆ ರಾಜ್ಯಪ್ರಾಪ್ತಿ



ವಿರೋಧ ತಂದು ಕೊಳ್ಳುವುದು ಯಾರಿಗೂ ಒಳ್ಳೆಯದಲ್ಲ. ಸುಮ್ಮನೆ ಮೊಂಡುಪಟ್ಟು ಮಾಡಬೇಡ. ಎಲ್ಲಾ ಕೆಲಸಗಳಿಗೂ ದುಃಸಾಹಸ ತೋರಿಸಬಾರದು. ನಿಮ್ಮನ್ನು ಗಡಿದಾಟಿಸಿ ಬಿಟ್ಟ ಮಾತ್ರಕ್ಕೆ ಆಗಿ ಹೋಯಿತೆ ? ಆ ದುಷ್ಟರೂ ನಿಮ್ಮನ್ನು ಸುತ್ತಿ ಮುತ್ತಿದರೆ ನೀವೇನು ಮಾಡ ಬಲ್ಲಿರಿ ? ನನಗೊಂದು ಕ್ರಮ ಹೊಳೆಯುತ್ತದೆ. ಸೀತೆಯ ಮದುವೆಗೆ ಇಟ್ಟ ಹಾಗೆ ನಿನ್ನ ಮದುವೆಗೂ ಒಂದು ಪರೀಕ್ಷೆ ಇಡುತ್ತೇನೆ. ಅದರಲ್ಲಿ ಗೆದ್ದವನನ್ನು ಮದುವೆಯಾಗು " ಎಂದನು ಸುಬಾಹು.

" ಆದರಿಂದಾದರೂ ಸಮಸ್ಯೆ ತೀರುವುದು ಹೇಗೆ ? ಆ ಪಂಥದಲ್ಲಿ ಯಾವನೋ ಗೆದ್ದು ನನ್ನನ್ನು ಮದುವೆಯಾಗಿ ಬಿಡುತ್ತಾನೆ. ಆಗ ಮಾತ್ರ ಉಳಿದವರು ನೋಡುತ್ತಾ ಸುಮ್ಮನಿರುವರೆ? ಪಂಥದಲ್ಲಿ ಸುದರ್ಶನನೇ ಗೆದ್ದರೂ ಉಳಿದವರು ಯುದ್ಧಕ್ಕೆ ಬರುವುದಂತೂ ಖಂಡಿತ. ಧರ್ಮವೋ ನ್ಯಾಯವೋ ಯಾರಿಗೂ ಬೇಡ. ಅಪ್ಪಾ, ನೀವು ಧೈರ್ಯದಿಂದ ಮಹಾದೇವಿಯನ್ನೇ ನಂಬಿರುವ ನನ್ನನ್ನು ಸುದರ್ಶನನಿಗೆ ಕೊಟ್ಟು ಮದುವೆ ಮಾಡಿಬಿಡಿ " ಎಂದಳು ಶಶಿಕಳೆ. ಮಗಳ ನಿರ್ಣಯದಂತೆ ಮಾಡಲು ನಿಶ್ಚಯಿಸಿ ಸುಬಾಹುರಾಜನು ಸಭೆಗೆ ಬಂದು ಎಲ್ಲರನ್ನೂ ನೋಡಿ ಕೈ ಮುಗಿದು, "ಮಹಾರಾಜರೇ, ಈ ದಿನಕ್ಕೆ ಸಭೆಯನ್ನು ಸಾಕು ಮಾಡೋಣ. ನಾಳೆ ನಿಮಗೆಲ್ಲಾ ಒಪ್ಪಿತವಾಗುವ ರೀತಿಯಲ್ಲಿ ಸ್ವಯಂವರವು ನಡೆಯುತ್ತದೆ. ಈ ದಿನ ನೀವು ನಿಮ್ಮ ಬಿಡದಿಗಳಿಗೆ ದಯಮಾಡಿರಿ " ಎಂದು ಕೇಳಿಕೊಂಡನು.

ರಾಜರೆಲ್ಲರೂ ತಮ್ಮ ತಮ್ಮ ಶಿಬಿರಗಳಿಗೆ ಹಿಂದಿರುಗಿ ಹೋಗಿ ನಗರದ ನಾಲ್ಕು ಪಕ್ಕಗಳಲ್ಲಿಯೂ ತಮ್ಮ ತಮ್ಮ ಸೇನೆಗಳನ್ನು ಕಾವಲಿಗಿಟ್ಟರು. ಸುಬಾಹುವಿನ ಮೇಲೆ ಅವರಿಗೇನೋ ಸಂದೇಹವಾಗಿತ್ತು.

ಸುಬಾಹುರಾಜನು ರಹಸ್ಯವಾಗಿ ವಿವಾಹದ ಏರ್ಪಾಡುಗಳನ್ನು ಮಾಡಿ, ಸುದರ್ಶನನನ್ನು ಕರೆಯಿಸಿ ತನ್ನ ಕುಮಾರಿ ಶಶಿಕಳೆಯನ್ನು ಶಾಸ್ತ್ರೋಕ್ತವಾಗಿ ಅವನಿಗೆ ಕನ್ಯಾದಾನ ಮಾಡಿ ಕೊಟ್ಟುಬಿಟ್ಟನು. ಆ ಸಂದರ್ಭದಲ್ಲಿ ಅವನು ತನ್ನ ಅಳಿಯನಿಗೆ ಎರಡು ನೂರು ರಥಗಳನ್ನೂ, ಕೆಲವು ಸಾವಿರ ಕುದುರೆಗಳನ್ನೂ, ಕೆಲವು ನೂರು ಮಂದಿ ದಾಸಿಯರನ್ನೂ ಇತರ ಕಾಣಿಕೆ ವಸ್ತುಗಳನ್ನೂ ಕೊಟ್ಟನು. ಆ ಮೇಲೆ ಅವನು ಮನೋರಮೆಯೊಂದಿಗೆ, " ಅಮ್ಮಾ, ಇನ್ನು ನನ್ನ ಮಗಳು ನಿನ್ನ ಮಗನ ಸೊತ್ತು. ಅವಳನ್ನು ಪ್ರೀತಿಯಿಂದ ನೋಡಿಕೋ " ಎಂದು ಹೇಳಿಕೊಂಡು ನಮಸ್ಕಾರ ಮಾಡಿದನು.

ಮನೋರಮೆ ಬಹಳ ಸಂತೋಷಪಟ್ಟು, " ಅಯ್ಯಾ, ಮಹಾರಾಜರಾಗಿದ್ದು ಕೂಡಾ ರಾಜ್ಯವಿಹೀನನಾದ ನನ್ನ ಮಗನಿಗೆ ನಿಮ್ಮ ಮಗಳನ್ನು ಕೊಟ್ಟಿದ್ದೀರಿ. ಆ ಹುಡುಗಿಕೂಡ ರತ್ನಗಳ ಬೊಂಬೆಯೇ. ನಿಮ್ಮಂಥ ಉತ್ತಮರು ಎಲ್ಲಿಯೂ ಇರಲಾರರು.

ನಿಮ್ಮ ಕುಮಾರಿಯ ಭಾರವು ನಮ್ಮದು, ನಮ್ಮ ಭಾರ ನಿಮ್ಮದು !" ಎಂದಳು.

ಅದಕ್ಕೆ ಸುಬಾಹು, "ಅಮ್ಮಾ, ನಿನ್ನ ಮಗನು ರಾಜ್ಯ ವಿಹೀನನೆಂದು ಏಕೆ ಅಂದುಕೊಳ್ಳಬೇಕು ? ನನ್ನ ರಾಜ್ಯವು ಅವನದೇ ಅಲ್ಲವೇ ? ನನ್ನ ಎಲ್ಲಾ ಸೇನೆಯನ್ನೂ ಕೊಡುತ್ತೇನೆ. ನಾವು ಹಾಲು ನೀರಿನಂತೆ ಒಂದುಗೂಡಿರುವಾಗ, ಒಬ್ಬನು ರಾಜನೆಂದೂ, ಇನ್ನೊಬ್ಬನು ಸೇವಕನೆಂದೂ ಭೇದಮಾಡಿ ನೋಡುವ ಅವಶ್ಯವೇನಿದೆ? ಇತರ ರಾಜರಿರುವ ಮಾತು ನಿಜವೇ. ಅವರನ್ನು ಸಾಮ ದಾನ ಭೇದಗಳಿಂದ ಸಮಾಧಾನ ಪಡಿಸುತ್ತೇನೆ. ಹಾಗೂ ಮೀರಿ ಬಂದರಾದರೆ, ನಾನೂ ಯುದ್ಧಮಾಡಲು ಹಿಂಜರಿಯುವವನಲ್ಲ. ಜಗದಂಬೆಯ ಆಶ್ರಯವಿರುವಾಗ ಚಿಂತೆ ಮಾಡುತ್ತ ಬೇಡದ್ದನ್ನು ಏಕೆ ಶಂಕಿಸಿ ಕೊಂಡಿರಬೇಕು?" ಎಂದನು.

"ಎಂತಹ ಒಳ್ಳೆಯ ಮಾತು ಹೇಳಿದಿರಿ ! ನಿಮಗೆ ಶುಭವಾಗುತ್ತದೆ. ನಿಮ್ಮ ರಾಜ್ಯವನ್ನು ನೀವೂ, ನಿಮ್ಮ ಕುಮಾರರೂ ಸುಖವಾಗಿ ಆಳಿಕೊಂಡಿರಿ. ಜಗನ್ಮಾತೆಯ ಅನುಗ್ರಹದಿಂದ ನನ್ನ ಮಗನು ತನ್ನ ತಂದೆಯ ರಾಜ್ಯವನ್ನೇ ತಿರುಗಿ ಸಂಪಾದಿಸಿ ಕೊಳ್ಳುವನು. ಗ್ರಹಚಾರವು ಸರಿಯಾಗಿದ್ದವನು ಮಣ್ಣು ಹಿಡಿದುಕೊಂಡರೆ ಚಿನ್ನವಾಗಿಬಿಡುತ್ತದೆ. ಅವನು ಏನು ಮಾಡಿದರೂ ಒಳಿತೇ ಕೂಡಿಬರುತ್ತದೆ. ಎಲ್ಲರೂ ಸಹಾಯಕರಾಗುತ್ತಾರೆ. ಈಗ ನನ್ನ ಮಗನ ಅದೃಷ್ಟವು ಚೆನ್ನಾಗಿದೆ. ಇನ್ನು ಬರುವುದೆಲ್ಲಾ ಅವನಿಗೆ ಒಳ್ಳೆಯ ದಿನಗಳೇ. ಕೆಟ್ಟದಿನಗಳು ಕಳೆದು ಹೋದುವು" ಎಂದಳು ಮನೋರಮೆ.

ಆ ಸಮಯದಲ್ಲಿ ಬಿಡದಿಗಳಲ್ಲಿದ್ದುಕೊಂಡು ಸಂದೇಹಪಡುತಾ ಕಿವಿಚೂಪು ಮಾಡಿಕೊಂಡಿದ್ದ ರಾಜರಿಗೆ ಮಂಗಳ ವಾದ್ಯಗಳ ಧ್ವನಿ ಕೇಳಿಸಿತು. "ಈ ವಾದ್ಯಗಳ ಧ್ವನಿ ಎಂತಹುದು ?" "ಇದು ಮದುವೆಯ ವಾದ್ಯ ಧ್ವನಿಯಂತಿದೆಯಲ್ಲಾ ?"



"ಈ ರಾಜನು ನಮ್ಮೆಲ್ಲರ ಕಣ್ಣಿಗೂ ಧೂಳುಚೆಲ್ಲಿ ಮಗಳನ್ನು ಅವನಿಗೆ ಕೊಟ್ಟು ಮದುವೆ ಮಾಡಿ ಬಿಡಲಿಲ್ಲವಷ್ಟೆ ?" ಎಂದು ಅವರವರು ಅಂದು ಕೊಳ್ಳುತ್ತಿರುವಾಗ, ಸುಬಾಹು ರಾಜನು ಅವರ ಬಳಿಗೆ ಬಂದು ವಿನಯದಿಂದ ಕೈಮುಗಿದು "ಮಹಾರಾಜರೇ, ಮದುವೆಯ ಔತಣದೂಟಕ್ಕೆ ತಾವೆಲ್ಲರೂ ದಯ ಮಾಡಬೇಕು" ಎಂದು ಆಹ್ವಾನಿಸಿದನು.

ಅವನ ಆಹ್ವಾನ ವಾರ್ತೆಯನ್ನು ರಾಜರಾರೂ ಆದರದಿಂದ ಕೇಳಿಸಿಕೊಳ್ಳದೆ ಅರ್ಥವೇನೆಂಬಂತೆ ಹುಬ್ಬೆತ್ತಿ ನೋಡಿದರು. ಕಾಶೀರಾಜನು ಅವರೊಂದಿಗೆ, "ನಾನೇನು ಮಾಡಲಿ ? ನಾನು ಎಷ್ಟು ವಿಧವಾಗಿ ಹೇಳಿದರೂ ನನ್ನ ಮಗಳು ಕೇಳಲಿಲ್ಲ. ಅಂಥವಳನ್ನು ಬೇರೆ ಯಾರು ಮದುವೆ ಮಾಡಿ ಕೊಂಡರೂ ಸುಖವಾಗದು. ಅವಳು ಸುದರ್ಶನನನ್ನೇ ಮದುವೆಯಾಗಿ ಬಿಟ್ಟಳು. ಎಲ್ಲಾ ಶಾಸ್ತ್ರೋಕ್ತವಾಗಿ ನಡೆಯಿತು. ನೀವೆಲ್ಲಾ ನನ್ನ ಮೇಲೆ ಅನುಗ್ರಹ



ಬಿಟ್ಟು ಔತಣದಲ್ಲಿ ಭಾಗವಹಿಸಿ ನನ್ನ ಮರ್ಯಾದೆಯನ್ನು ಉಳಿಸಬೇಕು" ಎಂದನು.

"ರಾಜಾ, ನಮ್ಮ ಭೋಜನ ಮುಗಿಯಿತು ಇನ್ನು ಯಾರೂ ಬಾರರು. ಅರ್ಧ ರಾತ್ರಿಯ ಮದುವೆಯಿಂದ ತುಂಬಾ ಬಳಲಿರುವಿ. ಊಟವ್ವೇನು ಮಹಾ ? ನೀನು ಹೋಗಿಬಿಡು. ನಾವು ಹೊರಡುತ್ತೇವೆ." ಎಂದರು ರಾಜರು.

ಸುಬಾಹುರಾಜನು ಅವರ ಮೇಲೆ ಅನುಮಾನ ಪಡುತ್ತ ತನ್ನ ಭವನಕ್ಕೆ ಹಿಂದಿರುಗಿದನು. ಅವನು ಅಲ್ಲಿಂದ ಹೋದ ಕೂಡಲೇ ರಾಜರಲ್ಲಿ ಕೆಲವರು, ಸುದರ್ಶನನನ್ನು ಕೊಂದು ರಾಜಕುಮಾರಿಯನ್ನು ವಶಪಡಿಸಿಕೊಳ್ಳೋಣವೆಂದರು. ಅದು ಅನ್ಯಾಯವೆಂದೂ ಮಾತಾಡದೆ ಅವರವರ ದಾರಿ ಹಿಡಿದು ಅವರವರು ಹೋಗಿ ಬಿಡುವುದೇ ಒಳ್ಳೆಯದೆಂದೂ ಮತ್ತೆ ಕೆಲವರು ಹೇಳಿದರು. ಉಳಿದವರು ಬೇರೆ ಬೇರೆ ವಿಧವಾಗಿ ಮಾತಾಡಿದರು.

ಇಷ್ಟರೊಳಗೆ ಸುಬಾಹುರಾಜನು ಮದುವೆಯ ಕಾರ್ಯಾಂಗಗಳೆಲ್ಲವನ್ನೂ ಮುಗಿಸಿ, ಮಗಳನ್ನೂ ಅಳಿಯನನ್ನೂ ಕಳುಹಿಸಿಕೊಡುವ ಏರ್ಪಾಡುಗಳನ್ನು ಮಾಡುತ್ತಿರುವಾಗ ಕೆಲವರು ಬಂದು, "ರಾಜಾ, ವಧೂವರರನ್ನು ಈಗ ಕಳುಹಿಸಿ ಕೊಡಬೇಡ. ದಾರಿಯಲ್ಲಿ ಶತ್ರುಗಳು ರಾಕ್ಷಸರ ಹಾಗೆ ಹೊಂಚು ಹಾಕಿಕೊಂಡಿದ್ದಾರೆ" ಎಂದು ಹೇಳಿದರು.

ಆ ರಾಜ ಮಹಾರಾಜರ ಸಂಗತಿ ತಿಳಿದವನಾದ ಸುಬಾಹು ಕಳುಹಿಸಿ ಕೊಡಲೋ ಬಿಡಲೋ ಎಂದು ಸಂಶಯ ಪಡತೊಡಗಿದನು. ಆತನ ಆಂದೋಳನೆಯನ್ನು ನೋಡಿ ಸುದರ್ಶನನು, "ಮಹಾರಾಜರೇ, ನೀವೇನೂ ಸಂದೇಹಿಸಬೇಡಿ, ಹಿಂಜರಿಯುವುದೂ ಬೇಡ. ಮಹಾದೇವಿ ನನ್ನ ಪಕ್ಷದಲ್ಲಿರುವಾಗ ಈ ರಾಜರೆಲ್ಲ ನನ್ನನ್ನೇನು ಮಾಡಬಲ್ಲರು ? ನಾವು ನಮ್ಮ ಆಶ್ರಮಕ್ಕೆ ಹೋಗಿ ಸಂತೋಷವಾಗಿರುತ್ತೇವೆ. ಆಶ್ರಮದಲ್ಲಿ ಅದೇನು ಸಂಸಾರವೋ ಎಂದು ಅನುಮಾನಿಸಬೇಡಿ. ಆ ಪ್ರಕೃತಿ ಸೌಂದರ್ಯದ ಮುಂದೆ ನಿಮ್ಮ ನಗರಗಳೆಲ್ಲ ಯಾವ ಮೂಲೆಗೆ ? " ಎಂದನು.

ಆದರಿಂದ ಧೈರ್ಯಗೊಂಡ ಕಾಶೀರಾಜನು ತನ್ನ ಅಳಿಯನಿಗೆ ಅಪಾರವಾಗಿ ಧನ ಕನಕಾದಿಗಳನ್ನು ಕೊಟ್ಟು ಕಳುಹಿಸುತ್ತ, ತಾನು ಕೂಡಾ ಸೈನ್ಯದೊಂದಿಗೆ ಜತೆಯಲ್ಲೇ ಹೊರಟನು.

ದಾರಿಯಲ್ಲಿ ಕಾದುಕೊಂಡಿದ್ದ ರಾಜರು ದೂರದಿಂದ ಬರುವ ಗುಂಪನ್ನು ನೋಡಿ, "ಅದೋ ರಥ ! ಅವನೇ ಸುದರ್ಶನ ! ಹೆಂಡತಿಯೊಂದಿಗೆ ಕುಳಿತಿದ್ದಾನೆ ! ತಡೆಯೋಣ. ಹಿಡಿಯೋಣ ! ಹೊಡೆದು ಸುದರ್ಶನನ ಇತಿ ಶ್ರೀ ಮಾಡಿಬಿಡೋಣ ! ವಧುವಿಗೇನೂ ಆಗದಂತೆ ಎಚ್ಚರ !" ಎಂದು ಜೋರಾಗಿ ಕೂಗುತ್ತ ವಿಜೃಂಭಿಸಿದರು.

ಸುಬಾಹು ಅವರನ್ನು ಮುಂದಕ್ಕೆ ಬಾರದಂತೆ ತಡೆದನು. ಸುದರ್ಶನನು ಮಂತ್ರವನ್ನು ಜಪಿಸುತ್ತ



ಅಂಬಾದೇವಿಯನ್ನು ಧ್ಯಾನಿಸಿದನು. ಆ ಸಮಯದಲ್ಲಿ ಶತ್ರುಜಿತ್ತು ಮತ್ತು ಯುಧಾಜಿತ್ತುಗಳು ತೀವ್ರ ಯುದ್ಧವನ್ನು ಮಾಡಲು, ಸುಬಾಹು ವೀರಾವೇಶದಿಂದ ಶಂಖನಾದ ಮಾಡಿ, ಯುಧಾಜಿತ್ತುವಿನ ಮೇಲೆ ಬಾಣ ಪರಂಪರೆಗಳನ್ನು ಕರೆಯ ತೊಡಗಿದನು. ಇಬ್ಬರೊಳಗೆ ಘೋರ ಯುದ್ಧವೇ ನಡೆಯಿತು.

ಆಗ ಜಗದಂಬೆ ದಿವ್ಯವಾದ ಆಕಾರದಿಂದ ಜಗಜಗಿಸಿ ಪ್ರತ್ಯಕ್ಷಳಾಗಿ, ಅನೇಕ ಮಹಾ ಯುದ್ಧಗಳಿಂದಲೂ, ಹೂಗಳ ಮಾಲೆಗಳಿಂದಲೂ ಸಿಂಹದ ಮೇಲೆ ಕುಳಿತು ಸುದರ್ಶನನ ಇದಿರಿಗೆ ಬಂದಳು. ಸುದರ್ಶನನು ಆನಂದದಿಂದ ಪುಲಕಿತನಾದನು. ಆ ಮಹಾದೇವಿಯನ್ನು ತನ್ನ ಮಾವನಿಗೆ ತೋರಿಸಿ "ಇನ್ನು ನಮಗೆ ಭಯವೆಲ್ಲಿಯದು ? " ಎಂದು ಹೆಂಡತಿಯೊಂದಿಗೆ ರಥದಿಂದಿಳಿದು ಮಾವಯ್ಯ ನನ್ನೂ ಕೈ ಹಿಡಿದು ಕರೆದು ದೇವಿಯ ಕಾಲಿಗೆ ಪ್ರಣಾಮ ಮಾಡಿದನು.

ಮಹಾ ಸಿಂಹವನ್ನು ನೋಡಿ ಶತ್ರು ಪಕ್ಷದ ಆನೆಗಳು ಹೆದರಿ ಘೀಳಿಡುತ್ತಿದ್ದುವು. ಅವುಗಳನ್ನು ನೋಡಿ ಸಿಂಹವೂ ಗರ್ಜಿಸಿತು. ಅದೇ ಸಮಯದಲ್ಲಿ ದಾರುಣವಾಗಿ ಬಿರುಗಾಳಿ ಬೀಸ ತೊಡಗಿತು. ಅದರಿಂದ ಪ್ರಕೃತಿಯೇ ಬೀಭತ್ಸ ರೂಪತಾಳಿದುದನ್ನು ನೋಡಿ ರಾಜರೆಲ್ಲಾ ಭೀತಿಯಿಂದ ಕಂಪಿಸುತ್ತ ಕಡೆಗೆ ನಿಶ್ಚೇಷ್ಟಿತರಾಗಿಬಿಟ್ಟರು.

ಸುದರ್ಶನನು ತಮ್ಮ ಸೇನಾಧಿಪತಿಯನ್ನು ನೋಡಿ, "ಮಹಾ ದೇವಿಯೇ ನಮ್ಮನ್ನು ರಕ್ಷಿಸಲು ಬಂದಳು. ನೀನು ಸ್ವಲ್ಪ ಕೂಡಾ ಸಂಶಯ ತಾಳದೆ ರಾಜರ ಮೇಲೆ ಸೇನೆಗಳನ್ನು ನಡೆಯಿಸು" ಎಂದನು.

ಕೂಡಲೇ ಕಾಶೀರಾಜನ ಸೇನೆಗಳು ಶತ್ರು ರಾಜರ ಮೇಲೆ ಧಾವಿಸಿಕೊಂಡು ಹೋದುವು.

ನಿಶ್ಚೇಷ್ಟಿತರಾಗಿ ನಿಂತಿದ್ದ ರಾಜರನ್ನೆಲ್ಲ ನೋಡಿ ಯುಧಾಜಿತ್ತು "ಬಿರುಗಾಳಿ ನಿಂತಿತು. ಇದೆಲ್ಲಾ ಹುಸಿ, ಮಾಯೆ. ಯಾವಳೋ ಹೆಂಗುಸು ಸಿಂಹದ ಮೇಲೆ ಕುಳಿತು ಬಂದದ್ದು ನೋಡಿ ನಿಮಗೆಲ್ಲಾ ಬುದ್ಧಿ ಮಂಕಾಯಿತೇನು ? ಒಬ್ಬ ಅರ್ಭಕನು ಒಂದು ಹೆಂಗುಸನ್ನು ಜತೆಗಿಟ್ಟು ಕೊಂಡರೆ ಇಷ್ಟು ಮಂದಿ ರಾಜರೂ ಮರಗಟ್ಟಿ ಹೋಗಬೇಕೆ ? ಕ್ಷಣ ಮಾತ್ರದಲ್ಲಿ ಅವನನ್ನು ಕೊಂದು ರಾಜಕುಮಾರಿಯನ್ನು ಎಳೆದುಕೊಂಡು ತನ್ನಿರಿ ! ಹೋಗಿರಿ !" ಎಂದು ತನ್ನ ಮೊಮ್ಮಗನಾದ ಶತ್ರುಜಿತ್ತುವನ್ನು ಕರೆದುಕೊಂಡು ಸುದರ್ಶನನ ಮೇಲೆ ಯುದ್ಧಕ್ಕೆ ಹೋದನು.

ಆಗ ಅಂಬಾದೇವಿ ಎಲ್ಲಾ ರಾಜರೊಂದಿಗೂ ಅನೇಕರೂಪಗಳಲ್ಲಿ ಕಂಡು ಎಲ್ಲರೊಂದಿಗೂ ಒಂದೇ ಸಾರಿ ಯುದ್ಧ ಮಾಡಿದಳು. ಕ್ಷಣ ಮಾತ್ರದಲ್ಲಿ ಯುಧಾಜಿತ್ತುವೂ, ಶತ್ರುಜಿತ್ತುವೂ ದೇವಿಯ ಬಾಣಗಳಿಂದ ಸತ್ತುಬಿದ್ದರು. ಉಳಿದವರೆಲ್ಲ ಮತ್ತೆ ಯುದ್ಧ ಮಾಡುವುದನ್ನು ಬಿಟ್ಟು ನಿಶ್ಚೇಷ್ಟಿತರಾದರು. ಸುಬಾಹುರಾಜನು ಆನಂದ ಬಾಷ್ಪಗಳನ್ನು



ಉದುರಿಸುತ್ತಾ ಆ ಪರಾಶಕ್ತಿಯನ್ನು ಸ್ತೋತ್ರ ಮಾಡಿದನು. ತರುವಾಯ ಅವನು ದೇವಿಯೊಂದಿಗೆ, "ತಾಯೇ ! ನಿನ್ನ ದರ್ಶನದಿಂದ ಧನ್ಯನಾದೆನು. ನೀನು ಶಾಶ್ವತವಾಗಿ ನನ್ನ ಹೃದಯದೊಳಗೆ ನಿಂತು ಕೊಳ್ಳಬೇಕು. ನೀನು ಈ ಕಾಶಿಯಲ್ಲೇ ನೆಲೆಸಿರಬೇಕು. ಬೇರೆಯಾರ ಆಶ್ರಯವೂ ನನಗೆ ಬೇಕಾಗಿಲ್ಲ. ಭೂಮಿ ಇರುವವರೆಗೂ ಕಾಶಿಯೂ ಇರುತ್ತದೆಂದು ಹೇಳು ತ್ತಾರೆ. ಕಾಶಿ ಇರುವಷ್ಟು ಕಾಲವೂ ನೀನೂ ಇಲ್ಲೇ ಇದ್ದು, ಕಾಶಿಗೆ ಶತ್ರು ಭಯವಿಲ್ಲದಂತೆ ಮಾಡಮ್ಮಾ. ಇದೇ ನಾನು ನಿನ್ನನ್ನು ಬೇಡುವ ವರ" ಎಂದು ಪ್ರಾರ್ಥಿಸಿಕೊಂಡನು. ಹಾಗೆಯೇ ಆಗಲೆಂದು ಮಹಾ ದೇವಿ ಒಪ್ಪಿಕೊಂಡಳು.

ತರುವಾಯ ಸುದರ್ಶನನು ಮಹಾ ದೇವಿಯನ್ನು ಸ್ತೋತ್ರ ಮಾಡಿ, "ಅಮ್ಮಾ, ಇನ್ನು ನನ್ನ ಕರ್ತವ್ಯವೇನೆಂಬುದನ್ನು ತಿಳಿಸಬೇಕು. ನಾನು ಎಲ್ಲರ ಬೇಕೆಂಬುದನ್ನೂ ನೀನೇ ತಿಳಿಸಬೇಕು. ನಾನು ಅಸಮರ್ಥನಾಗಿದ್ದರೂ ನಿನ್ನ ಅನುಗ್ರಹವಿದ್ದರೆ ಏನನ್ನಾದರೂ ಸಾಧಿಸಬಲ್ಲೆನು. ಆದುದರಿಂದ ನಾನು ಮಾಡಬೇಕಾದುದನ್ನು ತಿಳಿಸಿ ಅನುಗ್ರಹಿಸು" ಎಂದು ಬೇಡಿಕೊಂಡನು. ಅದಕ್ಕೆ ದೇವಿ, "ಕಂದಾ, ನೀನು ಮಾಡಬೇಕಾದುದು ಹೆಚ್ಚೇನಿಲ್ಲ. ನಿನ್ನ ಹೆಂಡತಿಯೊಂದಿಗೆ ಅಯೋಧ್ಯೆಗೆ ಹೋಗಿ ಸಿಂಹಾಸನವನ್ನು ಏರಿಕೋ. ಒಳ್ಳೆಯ ರೀತಿಯಲ್ಲಿ ರಾಜ್ಯಭಾರ ಮಾಡಿಕೊಂಡಿರು. ಮೇಲಿನಿಂದ ನಿನ್ನನ್ನು ನಾನು ಕಾಪಾಡುತ್ತಾ ಇರುತ್ತೇನೆ. ಪ್ರತಿ ಅಷ್ಟಮಿ, ನವಮಿ, ಚತುರ್ದಶಿಗಳಲ್ಲಿ ನನ್ನನ್ನು ಪೂಜಿಸು. ನನಗೆ ಶರತ್ಕಾಲವೆಂದರೆ ತುಂಬ ಇಷ್ಟ. ನವರಾತ್ರಿಯ ಪೂಜೆಗಳನ್ನು ನಾನು ಮೆಚ್ಚುತ್ತೇನೆ. ಮಾಘ, ಚೈತ್ರ, ಆಶ್ವೀಜ, ಆಷಾಢ ಮಾಸಗಳಲ್ಲಿ ನನಗೆ ಉತ್ಸವಗಳನ್ನು ನಡೆಯಿಸು. ನಿನಗೂ ಪ್ರಜೆಗಳಿಗೂ ಶುಭವಾಗುವುದು" ಎಂದು ಹೇಳಿ ದೇವಿ ಅದೃಶ್ಯಳಾದಳು.

ತರುವಾಯ ರಾಜರು ಒಬ್ಬೊಬ್ಬರಾಗಿ ಬಂದು ಇಂದ್ರನಿಗೆ ದೇವತೆಗಳು ನಮಸ್ಕಾರ ಮಾಡಿದಂತೆ ಸುದರ್ಶನನಿಗೆ ನಮಸ್ಕಾರ ಮಾಡಿ, ಅಂಬಾದೇವಿಯನ್ನೂ ಸ್ತುತಿಸಿದರು. ಅವರೆಲ್ಲಾ ಸುದರ್ಶನನನ್ನು ತಮ್ಮ ಚಕ್ರವರ್ತಿಯಾಗಿ ಒಪ್ಪಿಕೊಂಡು, "ಮಹಾತ್ಮಾ, ನೀನು ಅಯೋಧ್ಯೆಯಲ್ಲಿದ್ದು ನಮ್ಮನ್ನೆಲ್ಲಾ ಪಾಲಿಸುತ್ತ, ನಮ್ಮ ಅಪಚಾರಗಳನ್ನು ಮನ್ನಿಸಿ ನಮಗೆ ಆಜ್ಞೆಗಳನ್ನು ಮಾಡುತ್ತ ರಾಜ್ಯಭಾರ ಮಾಡು. ನಿನ್ನ ಅನುಗ್ರಹದಿಂದಲೇ ಮಹಾ ದೇವಿ ಜಗದಂಬೆಯನ್ನು ನೋಡುವ ಭಾಗ್ಯ ನಮಗೆ ಸಿಕ್ಕಿತು." ಎಂದರು.

ತರುವಾಯ ರಾಜರೆಲ್ಲಾ ಅವರವರ ದೇಶಗಳಿಗೆ ಹೊರಟು ಹೋದರು. ಕಾಶೀರಾಜನೂ ತನ್ನ ಅಳಿಯನನ್ನೂ ಮಗಳನ್ನೂ ಇನ್ನಷ್ಟು ಚೆಂದಾಗಿ ಕಳುಹಿಸಿಕೊಟ್ಟನು.

ಸುದರ್ಶನನು ಅಯೋಧ್ಯೆಯನ್ನು ತಲಪುವ ಮೊದಲೇ ಈ ವಾರ್ತೆಗಳೆಲ್ಲ ಅಲ್ಲಿಗೆ ಮುಟ್ಟಿದ್ದುವು.

ಅಂತೆಯೇ ಮಂತ್ರಿ ಮುಂತಾದವರು ಮಂಗಳ ವಾದ್ಯಾದಿಗಳೊಂದಿಗೆ ಇದಿರಾಗಿಬಂದು ಪತ್ನೀ-ಸಹಿತನಾದ ಸುದರ್ಶನನನ್ನು ಭವ್ಯವಾದ ಸ್ವಾಗತೋಪಚಾರಗಳಿಂದ ನಗರದೊಳಗೆ ಕರೆದುಕೊಂಡು ಹೋದರು.

ಸುದರ್ಶನನು ಮೊದಲು ತನ್ನ ಸವತಿ ತಾಯಿಯ ಬಳಿಗೆ ಹೋಗಿ, ಅವಳಿಗೆ ನಮಸ್ಕಾರ ಮಾಡಿದನು. ತನ್ನ ಮಗನು ಸತ್ತುದರಿಂದ ಅಳುತ್ತಾ ಇದ್ದ ಲೀಲಾವತಿಯನ್ನು ಸುದರ್ಶನನು ಸಮಾಧಾನ ಪಡಿಸುತ್ತ, "ಅಮ್ಮಾ, ನಿನ್ನ ತಂದೆಯನ್ನೂ ನಿನ್ನ ಮಗನನ್ನೂ ಕೊಂದವನು ನಾನಲ್ಲ, ಮಹಾಶಕ್ತಿ! ನಿನ್ನ ಪಾದ ಸಾಕ್ಷಿಯಾಗಿ ಹೇಳುವ ಮಾತಿದು. ನನಗೆ ರಾಜ್ಯ ಪ್ರಾಪ್ತಿಯಾಗುವಂತೆ ಮಾಡಿದವಳೂ ಅವಳೇ. ಹೀಗೆ ಯಾರೋ ಮಾಡಿದ ಕರ್ಮಗಳಿಗೆ ನೀನೇಕೆ ಅಳಬೇಕು? ನನ್ನನ್ನು ನಿನ್ನ ಮಗನ ಹಾಗೆಯೇ ನೋಡಿಕೋ. ನನ್ನ ತಾಯಿ ಮನೋರಮೆಗಿಂತಲೂ ನೀನೇ ಹೆಚ್ಚಿನವಳಾಗು. ನಾನು ಯಾವ ಬಗೆಯ ಭೇದ ಬುದ್ಧಿಯನ್ನೂ ತೋರಿಸಲಾರೆ. ನಿನಗೆ ಯಾವಾಗಲೂ ಮಾತೃ ಸೇವೆ ಮಾಡಿಕೊಂಡಿರುತ್ತೇನೆ. ನಾನು ಸಣ್ಣವನಾಗಿದ್ದಾಗ ನಿನ್ನ ತಂದೆ ದುರುದ್ದೇಶದಿಂದ ನನ್ನನ್ನು ರಾಜ್ಯ ಭ್ರಷ್ಟನನ್ನಾಗಿ ಮಾಡಿದಾಗ, ಅದು ನನ್ನ ಪ್ರಾರಬ್ಧ ಕರ್ಮವೆಂದು ಕೊಂಡೆನೇ ಹೊರತು ಶೋಕಿಸಲಿಲ್ಲ. ನಿನ್ನ ತಂದೆ ನನ್ನ ತಾತನನ್ನು ಕೊಂದಾಗ, ನನ್ನ ತಾಯಿ ಶೋಕದ ಮೂರ್ತಿಯಾಗಿ ನನ್ನನ್ನೆತ್ತಿಕೊಂಡು ಕಾಡು ದಾರಿಯಲ್ಲಿ ಹೋಗುವಾಗ, ಕಳ್ಳರು ನಮ್ಮಲ್ಲಿದ್ದುದನ್ನೆಲ್ಲಾ ದೋಚಿಕೊಂಡರು. ತರುವಾಯ ಗಂಗಾ ತೀರದ ಋಷ್ಯಾಶ್ರಮದಲ್ಲಿ ರುತ್ತ. ಅವರ ಅನುಗ್ರಹದಿಂದ ಈಗ ಈ ಸ್ಥಿತಿಗೆ ಬಂದೆವು. ಈಗ ಕೂಡಾ ನನಗೆ ಯಾರ ಮೇಲೆಯೂ ಕೋಪವಿಲ್ಲ. ನೀನೂ ಕೋಪಿಸಬಾರದು" ಎಂದನು.

ಅವನ ಮಾತು ಕೇಳಿ ಲೀಲಾವತಿ ನಾಚಿಕೆ ಪಡುತ್ತ, "ನಾನು ಬೇಡೆಂದರೂ ಕೇಳದೆ ನನ್ನ ತಂದೆ ನಿನಗೆ ತುಂಬಾ ದ್ರೋಹಮಾಡಿ ಕಡೆಗೆ ತಾನೂ ಸತ್ತರು. ನನ್ನ ಮಗನ ಸಾವಿಗೂ ಕಾರಣರಾದರು. ನಿನ್ನ ತಾಯಿ, ನನ್ನ ಅಕ್ಕನೇ ಆದುದರಿಂದ ನೀನೂ ನನ ಮಗನೇ ಅಪ್ಪ. ಇನ್ನು ಚಿಂತಿಸಿ ಲಾಭವಾದರೂ ಏನಿದೆ? ನನ್ನವರೆಲ್ಲ ಸಾಯಲು ಕಾರಣನಾದವನು ನೀನಲ್ಲವೆಂದು ನನಗೆ ಗೊತ್ತಿದೆಯಪ್ಪಾ" ಎಂದಳು.

ತರುವಾಯ ಸುದರ್ಶನನು ತನ್ನ ಮಂತ್ರಿಗಳಿಂದ ಒಂದು ಬಂಗಾರದ ಸಿಂಹಾಸನವನ್ನು ತಯಾರು ಮಾಡಿಸಿ, ಅದರ ಮೇಲೆ ಜಗದಂಬೆಯನ್ನು ಯಥಾ ವಿಧಿಯಾಗಿ ಸ್ಥಾಪಿಸಿದನು. ದಿನಾ ಪೂಜೆಗಳು ನಡೆಯುವಂತೆ ಏರ್ಪಾಡು ಮಾಡಿ, ಆಮೇಲೆ ತಾನು ಪಟ್ಟಾಭಿಷಿಕ್ತನಾಗಿ ಸೊಗಸಾಗಿ ರಾಜ್ಯಭಾರ ಮಾಡಿದನು.





# ದೇವೀಭಾಗವತ

## ೧೧. ನರನಾರಾಯಣರು

ಬ್ರಹ್ಮನ ಮಾನಸಪುತ್ರರಲ್ಲಿ ಧರ್ಮನೆಂಬವನು ಪ್ರಭಾವಶಾಲಿಯಾಗಿದ್ದನು. ಅವನು ದಕ್ಷ ಪ್ರಜಾಪತಿಯ ಅನೇಕ ಕುಮಾರಿಯರಲ್ಲಿ ಹತ್ತುಮಂದಿಯನ್ನು ಮದುವೆಯಾಗಿದ್ದನು. ಅವನಿಗೆ ನಾಲ್ಕು ಮಂದಿ ಗಂಡು ಮಕ್ಕಳಾಗಿದ್ದರು. ಅವರಿಗೆ ಹರಿ, ಕೃಷ್ಣ, ನರ ಮತ್ತು ನಾರಾಯಣ ಎಂದು ಹೆಸರು. ಅವರೊಳಗೆ ದೊಡ್ಡವರಾದ ಹರಿಯೂ ಕೃಷ್ಣನೂ ಯೋಗಾಭ್ಯಾಸಗಳಲ್ಲಿ ಉತ್ತೀರ್ಣರಾಗಿ ದೊಡ್ಡ ಯೋಗಿಗಳಾದರು.

ನರ ಮತ್ತು ನಾರಾಯಣರು ಹಿಮಾಲಯ ಪರ್ವತದ ಮೇಲೆ ಹೋಗಿ, ಮಂದಾಕಿನೀ ನದಿಯ ತೀರದಲ್ಲಿ ಸಾವಿರ ವರ್ಷಗಳ ವರೆಗೆ ತಪಸ್ಸುಮಾಡಿದರು. ಅವರ ತಪಸ್ಸಿನ ಪ್ರಭಾವದಿಂದ ಭೂಮಿ ಕಂಪಿಸಿ ಬೆಟ್ಟಗಳು ನಡುಗುತ್ತಿದ್ದುವು. ಇದನ್ನೆಲ್ಲ ನೋಡಿ ಇಂದ್ರನಿಗೆ ಭಯವಾಯಿತು. ಯಾರು ತೀವ್ರವಾಗಿ ತಪಸ್ಸುಮಾಡುತ್ತಿದ್ದರೂ ಇಂದ್ರನ ಕಾಲುಗಳು ತಣ್ಣಗಾಗುತ್ತಿದ್ದುವು. ಆ ತಪಸ್ವಿಗಳ ಆಸೆ ಇಂದ್ರಪದವಿ ಎಂದೇ ಇಂದ್ರನ ಭ್ರಮೆ. ಅಂತೆಯೇ ಅವನು ನರನಾರಾಯಣರ ತಪಸ್ಸನ್ನು ಹೇಗಾದರೂ ಭಂಗಪಡಿಸಲು ನಿಶ್ಚಯಿಸಿದನು.

ಇಂದ್ರನು ತನ್ನ ಐರಾವತದ ಮೇಲೆ ಕುಳಿತುಕೊಂಡು ನರನಾರಾಯಣರ ಬಳಿಗೆ ಬಂದು, ಆನೆಯಿಂದ ಇಳಿದು ಅವರ ಮುಂದೆ ನಿಂತು ನಮಸ್ಕರಿಸುತ್ತ, "ಮಹಾತ್ಮರೇ! ನೀವು ಯಾವ ಉದ್ದೇಶಕ್ಕಾಗಿ ತಪಸ್ಸು ಮಾಡುವಿರೋ? ನಾನು ಇಂದ್ರನು. ನಿಮ್ಮ ತಪಸ್ಸನ್ನು ನೋಡಿ ಆತ್ಮಾನಂದಪಟ್ಟು ನಿಮಗೆ ಬೇಕಾದ ವರವನ್ನು ಕೊಡಬೇಕೆಂದು ಬಂದಿರುವೆನು. ನಿಮ್ಮ ಅಭೀಷ್ಟವು ನೆರವೇರುವ ಕಾಲ ಬಂದಿತು. ಇನ್ನು ನಿಮ್ಮ ತಪಸ್ಸನ್ನು ನಿಲ್ಲಿಸಬಹುದು, ಏನು ಬೇಕು ನಿಮಗೆ?" ಎಂದನು.

ತಪಸ್ಸಮಾಧಿಯಲ್ಲಿ ಮುಳುಗಿದ್ದ ನರ ನಾರಾಯಣರು ಇಂದ್ರನ ಮಾತಿಗೆ ಕಣ್ಣು ಕೂಡಾ ತೆರೆಯಲಿಲ್ಲ. ಅವನ ಮಾತುಗಳು ಅವರಿಗೆ ಕೇಳಿಸಲೂ ಇಲ್ಲ. ಅವರು ಸುಮ್ಮನಿರುವುದನ್ನು ನೋಡಿ ಇಂದ್ರನಿಗೆ



ಕೋಪ ಬಂದಿತು. ಆದರಿಂದ ಅವನ ಬುದ್ಧಿ ವಿಕಾರವಾಗಲು, ಒಂದು ಮಾಯೆಯನ್ನು ಸೃಷ್ಟಿಸಿದನು. ಅದರ ಫಲಿತವಾಗಿ ಸಿಂಹಗಳೂ, ಹುಲಿಗಳೂ, ಚಿರತೆಗಳೂ, ತೋಳಗಳೂ, ಹಾವುಗಳೂ ಸಹಸ್ರಗಣನೆಯಲ್ಲಿ ಅಲ್ಲೆಲ್ಲಾ ತಿರುಗ ತೊಡಗಿದುವು. ಎಲ್ಲಿ ನೋಡಿದರೂ ನೆರೆಗಳೆದ್ದುವು. ಕಾಡು ಕಿಚ್ಚು ಸುತ್ತಲೂ ಉರಿಯ ತೊಡಗಿತು. ಅದರ ಮೇಲೆ ಗಾಢಾಂಧಕಾರವೂ ಕವಿಯಿತು. ಕತ್ತಲೆಯಲ್ಲಿ ಭಯಂಕರ ಶಬ್ದ ಮಾಡುತ್ತ ಕಲ್ಲಿನ ಮಳೆ ಸುರಿಯಿತು. ಈ ಬಗೆಯ ಇಂದ್ರಜಾಲಗಳಿಗೂ ನರನಾರಾಯಣರು ಚಲಿಸದೆ ತಮ್ಮ ತಪಸ್ಸಿನಲ್ಲಿ ಮುಳುಗಿ ಹೋಗಿದ್ದರು.

ವರ ಕೊಡುವೆನೆಂದರೆ ಕಿವುಡರಾಗಿದ್ದಾರೆ. ಕ್ರೂರ ಮೃಗಗಳನ್ನೂ, ಪ್ರಕೃತಿ ವಿಕೋಪವನ್ನೂ ಲಕ್ಷ್ಯ ಮಾಡಲಿಲ್ಲ. ಈ ನರ ನಾರಾಯಣರ ತಪಸ್ಸನ್ನು ಹೇಗೆ ಹಾಳುಮಾಡಬೇಕೋ ಇಂದ್ರನಿಗೆ ತಿಳಿಯಲಿಲ್ಲ. ಮಹಾದೇವಿಗೆ ಸಂಬಂಧಿಸಿದ ಬೀಜತ್ರಯವೆಂಬ ಮಂತ್ರವನ್ನು ಪುರಶ್ಚರಣೆಮಾಡುತ್ತ ದೇವಿಯ ದಿವ್ಯ ರೂಪದಲ್ಲಿ ಲಯವಾಗಿ ಹೋದವರನ್ನು ಕದಲಿಸಲು ಯಾರಿಂದಲೂ ಸಾಧ್ಯವಿಲ್ಲವೆಂಬುದನ್ನು ಮನಗಂಡು ಇಂದ್ರನು ಸ್ವರ್ಗಕ್ಕೆ ಹಿಂದಿರುಗಿ, ವಸಂತನನ್ನೂ, ಮನ್ಮಥನನ್ನೂ ಕರೆದು ಈ ರೀತಿಯಾಗಿ ಹೇಳಿದನು :

"ನರನಾರಾಯಣರೆಂಬ ಸೋದರರು ಬದರಿಕಾಶ್ರಮದಲ್ಲಿ ಏಕಾಗ್ರತೆಯಿಂದ ತಪಸ್ಸುಮಾಡಿಕೊಂಡಿದ್ದಾರೆ. ಅವರನ್ನು ತಪಸ್ಸಿನಿಂದ ಹೊರಡಿಸಬೇಕೆಂದು ನಾನು ಹೋಗಿ, ಬೇಕಾದ ವರಗಳನ್ನು ಕೊಡುವೆನೆಂದು ಹೇಳಿದೆ; ಅವರು ನನ್ನ ಮಾತನ್ನು ಕೇಳಿಸಿಕೊಳ್ಳಲೂ ಇಲ್ಲ. ಈ ಕೆಲಸ ನಿಮ್ಮ ಹೊರತು ಬೇರೆ ಯಾರಿಂದಲೂ ಆಗದೆಂದು ನಿಮ್ಮನ್ನು ಕರೆಯಿಸಿದ್ದೇನೆ. ಮನ್ಮಥಾ, ನೀನು ವಸಂತನನ್ನೂ ಬೇಕಾದಷ್ಟು ಅಪ್ಸರೆಯರನ್ನೂ ಕರೆದುಕೊಂಡು ಹೋಗಿ ಈ ಕೆಲಸ ಮುಗಿಸಬೇಕು. ಹರಿಹರ ಬ್ರಹ್ಮಾದಿಗಳನ್ನು ಜಯಿಸಿದ ನಿನಗೆ ಈ ನರ ಮುನಿಗಳು ಒಂದು ಲೆಕ್ಕವೇನು? ರಂಭೆ ಮೊದಲಾದ ಅಪ್ಸರೆಯರಲ್ಲಿ ಯಾವಳೋ ಒಬ್ಬಳೇ ಸಾಕು ಅವರ ತಪೋಭಂಗಮಾಡಲು! ನೀನು ಅನೇಕ ಮಂದಿ ಅಪ್ಸರೆಯರನ್ನು ಕರೆದುಕೊಂಡು ಹೋಗು. ಅವರ ಮುಂದೆ ಯಾವ ತಪಸ್ಸೂ ನಿಲ್ಲಲಾರದು. ನಿನಗೆ ಜಯವಾಗಲಿ".

ಇಂದ್ರನ ಮಾತು ಕೇಳಿ ಮನ್ಮಥನು ಸಂದೇಹಿಸುತ್ತ, "ದೇವಾ! ನಾನು ನಿನ್ನ ಕಿಂಕರ. ನಿನ್ನ ಆಜ್ಞೆ ಪಾಲಿಸುವುದು ನನ್ನ ವಿಧಿ. ಆದರೂ ಒಂದು ಭಯ. ನನ್ನ ಮನಸ್ಸಿನಲ್ಲಿರುವುದನ್ನು ಹೇಳಲು ಅಪ್ಪಣೆ ಕೊಡಬೇಕು. ನೀವು ಹೇಳಿದ ಹರಿಹರಬ್ರಹ್ಮರನ್ನು ಕುರಿತು ತಪಸ್ಸುಮಾಡುವವರ ತಪಸ್ಸನ್ನು ಭಂಗಪಡಿಸಬಹುದಾದರೂ ಮಹಾದೇವಿಯನ್ನು ಕುರಿತು ತಪಸ್ಸು ಮಾಡುವವರನ್ನು ಭಗ್ನಪಡಿಸಲು ನನ್ನಿಂದಾಗಲಾರದು. ಬೀಜತ್ರಯಗಳನ್ನು ತಮ್ಮ ಹೃದಯದೊಳಗಿಟ್ಟುಕೊಂಡು ಜಪಿಸುವವರ ತಂಟೆಗೆ ಹೋಗು

ವಂತಹ ಧೈರ್ಯ ನನಗಿಲ್ಲ ಪ್ರಭುವೆ. ಈ ನರ ನಾರಾಯಣರೆಂಬ ಸಹೋದರರು ಆದಿಶಕ್ತಿಯ ಕಟು ಭಕ್ತರು. ಅವರನ್ನು ನನ್ನ ಬಾಣಗಳು ಏನೂ ಮಾಡ ಲಾರವು." ಎಂದನು.

ಆದರೂ ಬಿಡದೆ ಇಂದ್ರನು, "ನಿನ್ನ ಬಾಣಗಳನ್ನು ನೇರಾಗಿ ಪ್ರಯೋಗಿಸಲು ಸಾಧ್ಯವಿಲ್ಲದೆ ಹೋದರೆ ಮಾಯೋಪಾಯವನ್ನು ಮಾಡು. ಇದು ದೇವಕಾರ್ಯ ವಾದುದರಿಂದ ನಿನಗೇನೂ ಆಗದು. ಇಂದ್ರಲೋಕದ ಭಯ ನಿವಾರಣೆಗಾಗಿ ನೀನು ಈ ಕಾರ್ಯ ಮಾಡಿಯೇ ತೀರಬೇಕು." ಎಂದನು.

ಮನ್ಮಥನು ಮತ್ತೇನೂ ಹೇಳದೆ, ಮುಂದಾಗಿ ವಸಂತನನ್ನು ಬದರಿಕಾಶ್ರಮಕ್ಕೆ ಕಳುಹಿಸಿದನು. ಅವನ ಹಿಂದೆ ತಾನು ಸ್ವಲ್ಪತಡವಾಗಿ ರಂಭೆ ಮೊದ ಲಾದ ಅಪ್ಸರಸಿಯರನ್ನು ಕರೆದುಕೊಂಡು ಅಲ್ಲಿಗೆ ಹೋದನು.

ವಸಂತನ ಪ್ರಭಾವದಿಂದ ನರನಾರಾಯಣರು ತಪಸ್ಸುಮಾಡುವ ಸುತ್ತಮುತ್ತಲ ವನಪ್ರದೇಶವು ವಸಂತ ಶೋಭೆಯಿಂದ ಕಂಗೊಳಿಸ ತೊಡಗಿತು. ಹಿತಕರವಾಗಿ ಬೀಸುವ ಗಾಳಿಯಲ್ಲಿ ಮೋಹಕವಾದ ಸುವಾಸನೆಗಳು ತುಂಬಿಕೊಂಡವು. ಗಿಳಿಗಳು ಗುಂಪು ಗುಂಪಾಗಿ ಮರಗಳ ಮೇಲೆ ಸೇರಿ ಕೀಚು ಕೀಚೆಂದು ಕೂಗುತ್ತಿದ್ದುವು. ಆಗಾಗ ಕೋಗಿಲೆಗಳ ಇಂಪಾದ ಕುಹೂರವ; ತುಂಬಿಗಳ ಝೀಂಕಾರ ಧ್ವನಿ. ಆನಂದ ದಾಯಕವಾದ ವಾತಾವರಣ.

ನರನಾರಾಯಣರು ತಮ್ಮ ಸುತ್ತಲೂ ಒಂದು ಸಾರಿ ನೋಡಿ ಈ ಶಿಶಿರ ಋತುವಿನಲ್ಲಿ ಇಂತಹ ವಸಂತ ಲಕ್ಷಣಗಳು ಹೇಗೆ ಬಂದುವೆಂದು ಆಶ್ಚರ್ಯ ಪಟ್ಟು, ಕೂಡಲೇ ತಲೆ ದೂಗಿ ಸುಮ್ಮನಾಗಿಬಿಟ್ಟರು. ತಮ್ಮ ತಪಸ್ಸನ್ನು ಹಾಳುಮಾಡಲಿಕ್ಕಾಗಿ ಇಂದ್ರನು ಮಾಡಿಸಿದ ಆಟವೇ ಇದೆಂದು ಅವರಿಗೆ ಗೊತ್ತಾಯಿತು. ಅದಾವುದನ್ನೂ ಲಕ್ಷ್ಯಮಾಡದೆ ಅವರು ತಪಸ್ಸಿ



ನಲ್ಲಿರುವಾಗ ರಂಭೆ ತನ್ನೊಂದಿಗೆ, ಮೇನಕೆ ಮೊದ ಲಾದ ಹದಿನಾರು ಸಾವಿರದ ಐವತ್ತುಮಂದಿ ಅಪ್ಸರೆಯರನ್ನು ಕರೆದುಕೊಂಡು ಮುಂದೆ ಬರು ತ್ತಿರಲು, ಜತೆಗೆ ಕೋಗಿಲೆಗಳೂ, ಗಿಳಿಗಳೂ ಅವರ ಮೇಲೆ ಸುಳಿಸುಳಿಯಾಗಿ ಲಂಘಿಸಿಕೊಂಡು ಬರು ತ್ತಿರಲು, ಕಬ್ಬಿನಬಿಲ್ಲು, ಹೂಬಾಣಗಳೊಂದಿಗೆ ಸುಸಜ್ಜಿತನಾದ ಮನ್ಮಥನು ಬಂದು ನರನಾರಾಯಣರ ಇದಿರಿನಲ್ಲಿ ನಿಂತನು. ಅದನ್ನು ತಿಳಿದು ನರನಾರಾ ಯಣರು ತಪಸ್ಸನ್ನು ನಿಲ್ಲಿಸಿ ಕಣ್ಣು ತೆರೆದು ಮನ್ಮಥ ನನ್ನು ಒಂದೇ ಸಮನೆ ನೋಡಿದರು.

ಮನ್ಮಥನು ಹೆದರಿ ಕೈ ಮುಗಿದು ಒದಿಗೆ ಸರಿದನು. ಕೂಡಲೇ ಅಪ್ಸರಸಿಯರು ನರನಾರಾಯಣರಿಗೆ ನಮಸ್ಕಾರಗಳ ಲಾಸ್ಯವನ್ನು ಮಾಡುತ್ತ, ಮೋಹ ಪರವಶಗೊಳಿಸುವ ನಾಟ್ಯಗಳಿಂದ ಮಧುರ ಕಂಠ ದಿಂದ ಹಾಡಲು ತೊಡಗಿದರು. ನರನಾರಾ ಯಣರು ಅವರ ವಿಲಾಸಗಳನ್ನು ತಡೆಯು



ವಂತೆ ಕೈಯಾಡಿಸಿದರು. ಆಗ ನಾರಾಯಣನು ಹೀಗೆಂದನು: "ನಮಗೆಲ್ಲಾ ಗೊತ್ತಾಯಿತು. ನಮ್ಮ ತಪಸ್ಸನ್ನು ಭಗ್ನಗೊಳಿಸಲು ನಿಮ್ಮ ಯಜಮಾನನಾದ ಇಂದ್ರನು ನಿಮ್ಮನ್ನೂ ಮನ್ಮಥನನ್ನೂ ವಸಂತನನ್ನೂ ಕಳುಹಿಸಿದ್ದಾನೆ. ಅವನಿಗೆ ನಮ್ಮ ಮೇಲಿರುವ ಈರ್ಷ್ಯೆ ಇದರಿಂದ ಸ್ಪಷ್ಟವಾಯಿತು. ಆದರೂ ನೀವು ನಮ್ಮ ಮಾತನ್ನು ಸ್ವಲ್ಪ ಕೇಳಿಬಿಡಿರಿ. ಪಾಪದ ಹೆಣ್ಣುಗಳಾದ ನೀವು ಬಹಳ ದೂರದಿಂದ ಬಂದು ತುಂಬಾ ಬಳಲಿಹೋದಿರಿ. ಈ ಆಶ್ರಮದಲ್ಲಿ ನೀವು ನಮ್ಮ ಆತಿಥ್ಯವನ್ನು ಸ್ವೀಕರಿಸಿ ದಣಿವಾರಿಸಿಕೊಳ್ಳಿರಿ. ನೀವು ಆ ಇಂದ್ರನ ಅಪ್ಪಣೆಯಂತೆ ಬಂದಿರೇ ಹೊರತು ಇಲ್ಲದಿದ್ದರೆ ಏಕೆ ಬರುವಿರಿ? ಇಂದ್ರನಿಗೊಂದು ಭ್ರಮೆಯೇ ಹೊರತು, ನಮ್ಮ ತಪಸ್ಸನ್ನು ಹಾಳು ಮಾಡಲು ನಿಮ್ಮಿಂದಾದೀತೇ? ಈಗ ನೀವೇ ನೋಡುವಿರಂತೆ, ನೋಡಿದ ಮೇಲೆ ಇಂದ್ರನಿಗೆ ಹೇಳಿಬಿಡಿರಿ. ಈಗ ನನ್ನ ತಪಃಶಕ್ತಿಯಿಂದ ನಿಮ್ಮೆಲ್ಲರ ಸೌಂದರ್ಯವನ್ನೂ ಮೀರಿಸುವ ಸ್ತ್ರೀಯನ್ನು ನಾನೇ ಸೃಷ್ಟಿಸಿ ತೋರಿಸುತ್ತೇನೆ!"

ನಾರಾಯಣನು ತನ್ನ ಬಲದ ತೊಡೆಯ ಮೇಲೆ ಕೈಯಿಂದ ತಟ್ಟಿದನು. ಕೂಡಲೇ ಸುಂದರಾತಿ ಸುಂದರವಾದ ಸ್ತ್ರೀಮೂರ್ತಿಯೊಂದು ಹುಟ್ಟಿ ಬಂದಿತು. ಅವಳೇ ಊರ್ವಶಿ! ಅವಳ ಹಿಂದೆ ಅವಳ ಅನೇಕ ಗೆಳತಿಯರೂ ಹುಟ್ಟಿ ಬಂದರು. ಊರ್ವಶಿಯ ಸೌಂದರ್ಯವನ್ನು ನೋಡಿ ಅಪ್ಸರೆಯರು ಆಶ್ಚರ್ಯಪಟ್ಟು, ನಾಚಿ ನಾರಾಯಣನೊಂದಿಗೆ ಹೀಗೆಂದರು: "ಮಹಾತ್ಮರೇ! ನಮ್ಮನ್ನು ಕ್ಷಮಿಸಬೇಕು. ನಿಮ್ಮ ತಪಸ್ಸಿನ ಪ್ರಭಾವವನ್ನು ತಿಳಿಯದೆ ತಪೋಭಂಗ ಮಾಡಬೇಕೆಂಬ ದುರುದ್ದೇಶದಿಂದ ನಾವೆಲ್ಲಾ ಬಂದೆವು. ನಾವು ಈ ಮೊದಲು ಎಂತೆಂತಹ ಮುನೀಂದ್ರರ ವ್ರತಗಳನ್ನೂ ಹಾಳುಮಾಡಿದವರೆಂದು ಗರ್ವಗೊಂಡಿದ್ದೆವು. ನಮ್ಮ ಆ ಶಕ್ತಿ ನಿಮ್ಮ ಮುಂದೆ ಕಸಕ್ಕಿಂತ ಕಡೆಯಾಯಿತು. ಆದರೂ ಒಂದು ವಿಧವಾಗಿ ನೋಡುವಾಗ, ನಮ್ಮ ಒಡೆಯನು ನಿಮ್ಮ ತಪಸ್ಸನ್ನು ಹಾಳುಮಾಡಲು ನಮ್ಮನ್ನು ಕಳುಹಿಸಿದ್ದು ನಮ್ಮ ಭಾಗ್ಯವೆಂದೇ ಹೇಳಬೇಕು! ಇಲ್ಲದಿದ್ದರೆ ನಮ್ಮಂಥವರಿಗೆ ನಿಮ್ಮ ದರ್ಶನ ಭಾಗ್ಯ ಲಭಿಸುತ್ತಿತ್ತೇ?"

ಅವಳ ಮಾತು ಕೇಳಿ ನಾರಾಯಣನು ಕಿರುನಗುವನ್ನು ತೋರಿ, "ನೀವು ಈ ಊರ್ವಶಿಯನ್ನು ಕರೆದುಕೊಂಡು ಹೋಗಿ ದೇವೇಂದ್ರನಿಗೆ ಕಾಣಿಕೆಯಾಗಿ ಕೊಡಿರಿ. ನಿಮಗೂ, ದೇವತೆಗಳಿಗೂ, ಇಂದ್ರನಿಗೂ ಶುಭವಾಗಲಿ! ನೀವಿನ್ನು ಹೋಗಿರಿ! ನಮ್ಮ ಗೊಡವೆಗೆ ಬರಬೇಡಿ" ಎಂದನು.

ಅಪ್ಸರೆಯರು ನರನಾರಾಯಣರಿಗೆ ಬಾಗಿ ಕೈ ಮುಗಿಯುತ್ತ – "ಮಹಾತ್ಮರೇ! ನಮ್ಮನ್ನು ಹೋಗುವಂತೆ ಹೇಳಬಾರದು, ನೀವು ನಿಮ್ಮ ತೊಡೆಯಿಂದ ಹುಟ್ಟಿಸಿದ ಊರ್ವಶಿಯೂ, ಇತರ ಸ್ತ್ರೀಯರೂ ಇಂದ್ರನಬಳಿಗೆ ಹೋಗುತ್ತಾರೆ. ನಾವು

ನಿಮ್ಮ ಸೇವೆಮಾಡುತ್ತ ಇಲ್ಲಿಯೇ ಇರಬೇಕೆಂದಿದ್ದೇವೆ. ಇದಕ್ಕೆ ದಯವಿಟ್ಟು ಅನುಮತಿ ಕೊಡಬೇಕು" ಎಂದು ಪ್ರಾರ್ಥಿಸಿಕೊಂಡರು.

ತೊಡೆಯನ್ನು ತಟ್ಟಿ ಅದ್ಭುತ ತೋರಿಸಿದ ನಾರಾಯಣನು ಅಪ್ಸರೆಯರನ್ನು ನೋಡಿ. "ನೀವು ನಮ್ಮಿಂದ ಏನನ್ನು ಅಪೇಕ್ಷಿಸುವಿರಿ?" ಎಂದು ಕೇಳಿದನು.

"ನಿಮ್ಮಂಥವರು ಮಾತು ತಪ್ಪುವವರಲ್ಲ. ನಮ್ಮ ಕೋರಿಕೆಯನ್ನು ನೆರವೇರಿಸುವ ಇಚ್ಛೆ ನಿಮಗಿದ್ದರೆ, ನಮಗೆಲ್ಲರಿಗೂ ನೀವು ಗಂಡನಾಗಬೇಕು. ಇಲ್ಲದೆ ಹೋದರೆ ನಾವು ಕೇವಲ ಅನಾಥರು. ನಮಗೆಲ್ಲಾ ನೀವೇ ಪತಿಯಾಗಿದ್ದರೆ ನಮಗೆ ಸ್ವರ್ಗದ ಅಗತ್ಯವೇ ಇಲ್ಲ." ಎಂದರು ಆ ದೇವಕಾಂತೆಯರು.

"ಚಳಿಗಾಳಿ ಮಳೆ ಬಿಸಿಲುಗಳಿಗೆ ತಡೆದುಕೊಂಡು ಮಾಡಿದ ನನ್ನ ತಪಸ್ಸನ್ನು ನಿಮ್ಮ ಯೌವನಕ್ಕೆ ಸಮರ್ಪಿಸಬೇಕೆಂದು ಕೇಳುವಿರಾ? ಇದು ಸರಿಯೇ? ತಪಸ್ವಿಗಳ ಮುಂದೆ ಇಂಥ ಕೋರಿಕೆ ಕೇಳುವುದು ನ್ಯಾಯವೆ?" ಎಂದು ನಾರಾಯಣನು ಕೇಳಿದನು.

"ಮುನೀಶ್ವರಾ! ದೇವದಾಸಿಯರಾದ ನಮ್ಮ ಸೇವೆಗಳಿಂದ ಅಪಾರವಾದ ಸುಖಗಳನ್ನು ಅನುಭವಿಸುತ್ತ, ಸುಗಂಧಮಯವಾದ ಗಂಧಮಾದನ ಪರ್ವತದ ಮೇಲೆ ವಿಹರಿಸುವ ಸುಖಕ್ಕಿಂತ ಹೆಚ್ಚಿನದು ಸ್ವರ್ಗದಲ್ಲಾದರೂ ಏನಿದೆ? ನೀವು ಮಾಡುವ ತಪಸ್ಸು ಬೇರೆ ಯಾವ ಸುಖಕ್ಕಾಗಿ? ಅದನ್ನಿಷ್ಟು ಹೇಳುವಿರಾ?" ಎಂದರು ಅಪ್ಸರೆಯರು.

ನಾರಾಯಣನಿಗೆ ಚಿವುಕ್ಕೆಂದಿತು, ತಾನು ಅವರನ್ನು ನೋಡಿ ಜಂಬಕ್ಕೆ ಬಿದ್ದು ತಪಃಶಕ್ತಿಯನ್ನು ತೋರಿಸಿ ತಪ್ಪುಮಾಡಿದೆನೆಂದು ತಿಳಿದುಕೊಂಡನು. ಅಪ್ಸರೆಯರು ತಮ್ಮ ತಪಸ್ಸನ್ನು ಕೆಡಿಸಲು ಬಂದವರೆಂದು ತಿಳಿದಾಗ, ಮೌನವಾಗಿದ್ದುಬಿಡಬೇಕಿತ್ತು. ಹಾಗೆ ಮಾಡದೆ ತನ್ನ ತಪೋಧರ್ಮಕ್ಕೆ ವಿರುದ್ಧವಾಗಿ ಅವರಿಗಿಂತ ಸುಂದರಿಯರನ್ನು ಸೃಷ್ಟಿಸಿದುದು ದೊಡ್ಡ



ತಪ್ಪಾಯಿತು. ಅವರನ್ನು ಶೃಂಗಾರಿಕ ಸಂಭಾಷಣೆಗಳಿಗೆ ಆಸ್ಪದ ಗೊಳಿಸಿದ್ದು ಇನ್ನಿಷ್ಟು ತಪ್ಪಾಯಿತು. ತನಗೆ ತಿಳಿಯದಂತೆಯೇ ಪ್ರಪಂಚದ ಮಹಾಮೋಹ ಪಾಶವು ತನ್ನನ್ನು ಸುತ್ತಿಯೇ ಬಿಟ್ಟಿತು.

ಈಗ ಅವರ ಮೇಲೆ ಸಿಟ್ಟನ್ನು ತೋರಿಸಿ ಓಡಿಸಿಬಿಡಬೇಕೆಂದು ನಾರಾಯಣನಿಗೆ ಆಲೋಚನೆ ಬಂದಿತು. ಆದರ ಬೆನ್ನಿಗೇ ಕೋಪವು ಹಿಂಸೆಗೆ ದಾರಿ ತೆಗೆಯುವುದೆಂದು ಹೆದರಿ, ಏನು ಮಾಡಲೂ ತೋರದಂತಹ ಸ್ಥಿತಿಗೆ ಬಿದ್ದನು.

ನಾರಾಯಣನ ಪರಿಸ್ಥಿತಿಯನ್ನು ನೋಡಿ ನರನು, "ತಮ್ಮಾ, ಕೋಪವು ಯಾರಿಗೂ ಒಳ್ಳೆಯದಲ್ಲ. ಅಹಂಕಾರದ ಕಾರಣದಿಂದಲೇ ಅಲ್ಲವೇ ಪೂರ್ವದಲ್ಲಿ ನಮಗೂ ಪ್ರಹ್ಲಾದನಿಗೂ ಘೋರವಾದ ಯುದ್ಧ ಉಂಟಾಯಿತು? ಈ ಅಪ್ಸರೆಯರನ್ನು ಶಾಂತ ರೀತಿಯಿಂದಲೇ ಏನಾದರೂ ಭರವಸೆ ಹೇಳಿ ಕಳುಹಿಸಿಬಿಡು" ಎಂದನು.



ನರನ ಮಾತಿನಿಂದ ನಾರಾಯಣನು ಮನಃಶಾಂತಿ ಗೊಂಡು ಸ್ತಿಮಿತಕ್ಕೆ ಬಂದು, ಅಪ್ಸರೆಯರನ್ನು ನೋಡಿ, "ನಾನು ಈ ಸ್ಥಿತಿಯಲ್ಲಿ ಸ್ತ್ರೀಯರನ್ನು ವಿವಾಹ ಮಾಡಿಕೊಳ್ಳುವುದೆಂದರೆ ಊಹಿಸಲಾಗದ ಸಂಗತಿ. ಆದುದರಿಂದ ಪ್ರಸ್ತುತ ನೀವೆಲ್ಲರೂ ಸ್ವರ್ಗಕ್ಕೇ ಹೊರಟು ಹೋಗಿಬಿಡಿರಿ. ಈಗ ನೀವು ನನ್ನ ವ್ರತಭಂಗವಾಗದಂತೆ ಅನುಗ್ರಹಿಸಬೇಕು. ಮುಂದೆ ದ್ವಾಪರ ಯುಗದಲ್ಲಿ ನಿಮ್ಮೆಲ್ಲರ ಇಷ್ಟವನ್ನೂ ನೆರವೇರಿಸುತ್ತೇನೆ. ಆಗ ನಾನು ದೇವತೆಗಳ ಕೋರಿಕೆಯ ಪ್ರಕಾರ ಭೂಮಿಯಲ್ಲಿ ಹುಟ್ಟಬೇಕಾಗಿ ಬರುತ್ತದೆ. ನೀವು ಆಗ ಬೇರೆ ಬೇರೆ ರಾಜಕುಮಾರಿಯರಾಗಿ ಹುಟ್ಟಿ, ನನ್ನ ಹೆಂಡತಿಯರಾಗುವಿರಿ. ಆದುವರೆಗೆ ಕಾಯಿರಿ. ಈಗ ದಯ ಮಾಡಿ ಹೋಗಿರಿ" ಎಂದನು.

ಈ ಮಾತಿನಿಂದ ಸ್ವಂತೃಪ್ತರಾದ ಅಪ್ಸರೆಯರು ಊರ್ವಶಿ ಮೊದಲಾದವರೊಂದಿಗೆ ಸ್ವರ್ಗಕ್ಕೆ ಹೋಗಿ, ನಡೆದ ಸಂಗತಿಯನ್ನು ಇಂದ್ರನೊಂದಿಗೆ ಹೇಳಿದರು. ಊರ್ವಶಿಯ ಸೌಂದರ್ಯವನ್ನು ನೋಡಿ ಇಂದ್ರನು ದಿಗ್ಭ್ರಮೆಗೊಂಡು, ನರನಾರಾಯಣರ ತಪಸ್ಸನ್ನು ನೋಡಿ ಹೆದರುವುದನ್ನು ಬಿಟ್ಟು ನೆಮ್ಮದಿಗೊಂಡು ಸುಮ್ಮನಾದನು. ಅವರ ತಪಸ್ಸು ನಿರ್ವಿಘ್ನವಾಗಿ ಕೊನೆ ಸಾಗಿತು.

ಹೀಗಿರುವಾಗ ಭೃಗುವಿನ ಶಾಪದಿಂದಾಗಿ ನರನಾರಾಯಣರು ಅರ್ಜುನ ಕೃಷ್ಣರಾಗಿ ಹುಟ್ಟಬೇಕಾಯಿತು. ಕೃಷ್ಣಾವತಾರಕ್ಕೆ ಕಾರಣವಾಗಿ ನಡೆದ ಆ ಪೂರ್ವ ಕಥೆ ಏನೆಂದರೆ:

ಒಂದು ಸಾರಿ ಭೂದೇವಿ ಭೂಭಾರದ ಕಷ್ಟವನ್ನು ತಾಳಲಾರದೆ ಇಂದ್ರನ ಬಳಿಗೆ ಹೋಗಿ. ಮೊರೆಯಿಟ್ಟುಕೊಂಡಳು. ಇಂದ್ರನು ಅವಳನ್ನು ನೋಡಿ ಕನಿಕರಗೊಂಡು "ನಿನಗಿಷ್ಟು ದುಃಖ ಉಂಟಾಗಲು ಕಾರಣವೇನು?" ಎಂದು ಕೇಳಿದನು. ಆಗ ಭೂದೇವಿ ಹೀಗೆಂದಳು:

"ಭೂಮಿಯಲ್ಲಿ ಅಧಿಕಾರ ಮದಗಳಿಂದ ಅಂಧರಾಗಿ ನಡೆಯುವ ಗರ್ವಿಷ್ಟ ದುಷ್ಟರು ತುಂಬಿಹೋಗಿರುವರು. ಜರಾಸಂಧ, ಶಿಶುಪಾಲ, ಕಂಸ, ರುಕ್ಮಿ, ನರಕ, ಸಾಲ್ವ, ಕೇಶಿ, ಧೇನುಕ, ವತ್ಸಕ ಇವರಿಷ್ಟು ಮಂದಿ ಒಬ್ಬರನ್ನೊಬ್ಬರು ದ್ವೇಷಿಸುತ್ತ ಅಧರ್ಮ ಮಾರ್ಗದಲ್ಲಿ ನಡೆಯುತ್ತಾರೆ. ಇವರ ಭಾರವು ತಾಳಲಸಾಧ್ಯವಾಗಿದೆ. ಹಿಂದೆ ಹಿರಣ್ಯಾಕ್ಷನ ಭಾರದಿಂದ ನನ್ನನ್ನು ಕಾಪಾಡಲು ಮಹಾವಿಷ್ಣು ವರಾಹಾವತಾರವನ್ನೆತ್ತಿದ ಹಾಗೆ, ಈಗಲೂ ಈ ನನ್ನ ಭಾರವನ್ನು ಕಡಿಮೆ ಮಾಡುವ ಹಾಗೆ ಏನಾದರೊಂದು ಆಗಲೇಬೇಕಾಗಿದೆ. ನೀನೇ ಏನಾದರೂ ಮಾಡಬೇಕು."

ಭೂದೇವಿಯ ಪ್ರಾರ್ಥನೆ ಕೇಳಿ ಇಂದ್ರನು, "ನಿನ್ನ ಭಾರವನ್ನು ತೀರಿಸಲು ನಾನೆಷ್ಟರವನು? ನಡೆ, ಬ್ರಹ್ಮನ ಬಳಿಗೆ ಹೋಗಿ ಆಲೋಚನೆ ಕೇಳೋಣ.

ಅವನೇನಾದರೂ ಉಪಾಯ ಹೇಳಬಹುದು. ನಾನೂ ಬರುತ್ತೇನೆ. ಈಗಲೇ ಹೋಗೋಣ" ಎಂದನು.

ಇಬ್ಬರೂ ಕೂಡಿ ಬ್ರಹ್ಮನ ಬಳಿಗೆ ಹೋಗಿ ಹೇಳಿ ಕೊಂಡರು. ಭೂದೇವಿ ಬ್ರಹ್ಮನೊಂದಿಗೆ, "ಸೃಷ್ಟಿ ಕರ್ತಾ, ಕೃತತ್ರೇತ ಯುಗಗಳು ಹೋಗಿ ದ್ವಾಪರ ಯುಗವು ಪ್ರವೇಶ ಮಾಡಿತು. ಮುಂದಿನ ಕಲಿಯ ಪ್ರಭಾವವು ಈಗಲೇ ಮೂಡಿದೆ. ಅಧರ್ಮವು ಹೆಚ್ಚಾಗಿದೆ. ರಾಜರು ಔದಾರ್ಯ ಬಿಟ್ಟು ಕಳ್ಳರಾಗಿ ದ್ದಾರೆ. ಇದೆಲ್ಲಾ ಕೆಟ್ಟ ಭಾರವಲ್ಲವೇ? ದುಷ್ಟರನ್ನು ನಿಗ್ರಹಿಸಿ ನನ್ನ ಭಾರ ತಗ್ಗಿಸಲಾರಿರಾ?" ಎಂದು ರೋದಿಸಿದಳು.

"ಅಮ್ಮಾ, ಅಂತಹ ಶಕ್ತಿ ನನಗೆಲ್ಲಿದೆ? ಅದಕ್ಕೆಲ್ಲಾ ವಿಷ್ಣುವೇ ತಕ್ಕವನು. ಅವನ ಬಳಿಗೆ ಹೋಗೋಣ" ಎಂದು ಬ್ರಹ್ಮನು ತನ್ನ ಹಂಸವಾಹನದ ಮೇಲೆ ಕುಳಿತು ಇಂದ್ರಾದಿದೇವತೆಗಳನ್ನೂ, ಭೂದೇವಿಯನ್ನೂ ಕರೆದುಕೊಂಡು ವೈಕುಂಠಕ್ಕೆ ಹೋದನು.

ವಿಷ್ಣು ಅವರನ್ನೆಲ್ಲಾ ಬೇರೆ ಬೇರೆಯಾಗಿ ಕುಶಲ ಪ್ರಶ್ನೆ ಮಾಡಿ, ಅವರು ಬಂದ ಕೆಲಸವೇನೆಂದು ಕೇಳಿದನು.

"ಭೂದೇವಿ ದುಷ್ಟರ ಹೆಚ್ಚಳದ ಭಾರ ಹೊರ ಲಾರೆನೆಂದು ಮೊರೆಯಿಡುತ್ತಿದ್ದಾಳೆ. ಆದುದರಿಂದ ನೀನು ಈ ದ್ವಾಪರ ಯುಗಾಂತದಲ್ಲಿ ಅವತಾರವೆತ್ತು ವುದು ಈ ಯುಗದ ಹಾಗೂ ಮುಂದಿನ ಕಲಿಯುಗದ ದುಷ್ಟನಿಗ್ರಹ ಶಿಷ್ಟ ರಕ್ಷಣೆಗಳಿಗೂ ಒಳ್ಳೆಯದು. ಇದಕ್ಕೆ ನಿನಗಿಂತ ತಕ್ಕವರು ಯಾರೂ ಇಲ್ಲ. ದೇವರ ದೇವನಾದ ನೀನೇ ದಯಮಾಡಿ ಕಾರ್ಯರಂಗಕ್ಕಿಳಿಯ ಬೇಕು. ಭೂದೇವಿಯನ್ನು ರಕ್ಷಿಸಬೇಕು." ಎಂದು ಬ್ರಹ್ಮನು ಹೇಳಿದನು.

"ಬ್ರಹ್ಮಾ! ಎಲ್ಲಕ್ಕಿಂತ ಮೇಲಾಗಿ ಯೋಗಮಾಯೆ ಇರುವಳು ಗೊತ್ತಾ? ಅವಳ ಮುಂದೆ ನೀನೂ ನಾನೂ ಶಿವನೂ ದೇವತೆಗಳೂ ಸ್ವತಂತ್ರ ಶಕ್ತಿ ಇಲ್ಲ ದವರೇ, ಆದುದರಿಂದ ಅವಳನ್ನು ಕೇಳಿ ಅವಳು ಹೇಳಿದಂತೆ ನಾವು ಕೇಳೋಣ. ಆಕೆಯ ಪ್ರೇರಣೆ ಯಿಂದ ತಾನೇ ನಾನು ಮೊದಲು ಕೆಲವು ಅವತಾರ ಗಳನ್ನೆತ್ತಿದೆ? ಹಾಗಿಲ್ಲದೆ ಮೀನಾಗಿ, ಆಮೆಯಾಗಿ, ಹಂದಿಯಾಗಿ ಇತರ ಕ್ಷುದ್ರ ಜಂತುಗಳಾಗಿ ಅವತರಿ ಸುವುದರಿಂದ ಸುಖವೋ ಪುಣ್ಯವೋ ಸ್ವಾರಸ್ಯವೋ ಏನಿದೆ? ರಾಮಾವತಾರವನ್ನೆತ್ತಿ ಕಾಡಿನ ಪಾಲಾಗಿ, ಹೆಂಡತಿಯನ್ನು ಕಳೆದುಕೊಂಡು ಎಷ್ಟು ದುರವಸ್ಥೆ ಗಳಿಗೆ ಗುರಿಯಾಗಿಲ್ಲ? ಎಲ್ಲಾ ಜಗದಂಬೆಯ ಇಚ್ಛೆ ಯಂತೆಯೇ ಅಲ್ಲವೇ? ಆದುದರಿಂದ ನೀವೆಲ್ಲಾ ಆ ಜಗದಂಬೆಯನ್ನು ಬೇಡಿಕೊಳ್ಳಿ. ನಿಮ್ಮ ಕೆಲಸ ತೀರು ತ್ತದೆ. ಆಕೆಯ ಅನುಗ್ರಹವಿದ್ದರೆ ಎಲ್ಲ ಸುಗಮವಾಗು ತ್ತದೆ." ಎಂದು ವಿಷ್ಣು ಬ್ರಹ್ಮಾದಿಗಳಿಗೆ ಹೇಳಿದನು.





# ದೇವೀಭಾಗವತ

ವಿಷ್ಣುವಿನ ಆಲೋಚನೆಯನ್ನು ಕೇಳಿ ಬ್ರಹ್ಮನೇ ಮೊದಲಾದ ದೇವತೆಗಳೆಲ್ಲರೂ ಮಹಾದೇವಿಯನ್ನು ಪ್ರಾರ್ಥಿಸುತ್ತ ಕರೆಯತೊಡಗಿದರು. ಅದನ್ನು ಕೇಳಿ ದೇವಿ ಆ ದೇವತೆಗಳೆಲ್ಲರ ಇದಿರಿನಲ್ಲಿ ಪ್ರತ್ಯಕ್ಷಳಾಗಿ ಅಭಯ ಹಸ್ತ ತೋರಿ ನಿಂತಳು.

ದೇವತೆ ಅವಳನ್ನು ತುಂಬಾಸ್ತುತಿಸಿ ಪ್ರಸನ್ನ ಮಾಡಿ, "ಮಹಾದೇವಿಯೇ, ಲೋಕ ರಕ್ಷಕಿಯೇ! ಭೂಮಿಯಲ್ಲಿ ಕಂಸನೇ ಮೊದಲಾದ ದುಷ್ಟ ಶಕ್ತರಿಂದ ವಿಪರೀತ ಭಾರವಾಗಿ ಭೂದೇವಿ ತಾಳಲಾರದೆ ನಮ್ಮ ಮೂಲಕವಾಗಿ ನಿನಗೆ ಶರಣಾಗತಳಾಗಿದ್ದಾಳೆ. ಹರಿ ಹರಾದಿಗಳಿಂದಲೂ ಕೊಲ್ಲಲಾಗದ ರಾಕ್ಷಸರನ್ನು ನೀನು ಕೊಂದಿರುವೆ. ಆದುದರಿಂದ ಈಗಲಾದರೂ ಭೂಭಾರವನ್ನು ತಗ್ಗಿಸಲು ಶಕ್ತಳಾದವಳು ನೀನೇ ತಾಯೇ!" ಎಂದು ಬೇಡಿಕೊಂಡರು.

"ತಾಯೇ! ನಿನ್ನ ಶಕ್ತಿಯ ಸಹಾಯವಿಲ್ಲದೆ ಯಾರಿಂದಲೂ ಏನು ಮಾಡಲಿಕ್ಕೂ ಸಾಧ್ಯವಾಗದು. ಎಲ್ಲರಲ್ಲಿಯೂ ಶಕ್ತಿ ಯಾಗಿರುವವಳು ನೀನೇ. ಬ್ರಹ್ಮನಿಗೆ ಸರಸ್ವತಿಯೂ, ವಿಷ್ಣುವಿಗೆ ಲಕ್ಷ್ಮಿಯೂ, ಶಿವನಿಗೆ ಪಾರ್ವತಿಯೂ ಜತೆ ಯಾಗಿರುವುದರಿಂದಲೇ ಅವರು ತಮ್ಮ ತಮ್ಮ ವಿಧಿಗಳನ್ನು ಸಮರ್ಥತೆಯಿಂದ ಮಾಡಿ ಮುಗಿಸಲು ಶಕ್ತರಾಗುತ್ತಾರೆ. ಇಲ್ಲದಿದ್ದರೆ ತ್ರಿಮೂರ್ತಿಗಳಿಂದ ಕೂಡಾ ಏನುಮಾಡಲೂ ಸಾಧ್ಯವಾಗದು." ಎಂದನು ದೇವೇಂದ್ರ.

"ದೇವೇಂದನ ಮಾತು ನಿಜವೇ. ನಿನ್ನ ಸಹಕಾರವು ಇಲ್ಲದೇ ಹೋದರೆ ನಾವು ತ್ರಿಮೂರ್ತಿಗಳೂ ಸಹ ಶಕ್ತಿ ಹೀನರೇ, ಯಾರ ಸಹಾಯವೂ ಇಲ್ಲದೆ ಎಲ್ಲದಕ್ಕೂ ಸಮರ್ಥಳಾಗಿರುವವಳು ನೀನೊಬ್ಬಳೇ. ಆದರೆ ನೀನೊಬ್ಬಳೇ ಹೆಸರುಪಡೆಯಲು ಇಷ್ಟವಿಲ್ಲದವಳಾಗಿ, ನಮಗೆಲ್ಲಾ ಅಂತಃ ಸಹಾಯಕಳಾಗಿ ನಮಗೂ ಹೆಸರು ಬರುವಂತೆ ಮಾಡುವಿ. ಇದೇ ನಿನ್ನಲ್ಲಿರುವ ವಿಶೇಷ. ನೀನು ಎಷ್ಟು ಶಕ್ತಳೋ ಅಷ್ಟೇ ಶಾಂತಳೂ ಆಗಿರುವಿಯಮ್ಮಾ!" ಎಂದನು ವಿಷ್ಣು. ಈ ಯಥಾರ್ಥ ಪ್ರಶಂಸೆಗಳಿಂದ ತೃಪ್ತಳಾದ ಜಗದಂಬೆ ಮುಗುಳು ನಗುತ್ತ, "ಈಗ ನನ್ನಿಂದ ನಿಮಗೆ ಯಾವ



ಬಗೆಯ ಸಹಾಯ ಬೇಕಾಗಿದೆ? ಅದನ್ನು ಸ್ವಲ್ಪ ವಿವರವಾಗಿ ಹೇಳಿರಿ ನೋಡುವಾ" ಎಂದಳು.

"ನೋಡು ತಾಯೇ! ಭೂಮಿಯಲ್ಲಿರುವ ರಾಜರೆಲ್ಲಾ ಪಾಪಾತ್ಮರಾಗಿ ಪ್ರಜೆಗಳನ್ನು ಗೋಳಾಡಿಸುತ್ತಿರುವುದರಿಂದ ಭೂದೇವಿ ತಾಳಲಾರದೆ ಅಳುತ್ತಿದ್ದಾಳೆ. ಅವಳ ಹೊರೆ ಹಗುರಾಗಬೇಕೆಂದು ನಾವೆಲ್ಲಾ ಹಾರೈಸುತಿದ್ದೇವೆ. ನೀನು ಪೂರ್ವದಲ್ಲಿ ವರಬಲದಿಂದ ವಿಜೃಂಭಿಸಿದ, ಮಹಿಷಾಸುರನ ಮದವನ್ನು ಅಡಗಿಸಿದವಳು. ಶುಂಭನಿಶುಂಭರನ್ನು ನಿರ್ಮೂಲಿಸಿದವಳು. ರಕ್ತಬೀಜನನ್ನು ನಿರ್ನಾಮ ಮಾಡಿದವಳು. ಚಂಡ ಮುಂಡಾದಿ ರಾಕ್ಷಸರೂ, ಧೂಮ್ರಲೋಚನನೂ, ದುರ್ಮುಖಿ, ದುಃಸಹ, ಕರಾಳ ಮೊದಲಾದ ರಾಕ್ಷಸರೂ ನೀನು ಕೊಡುವ ಸಹಜ ಶಕ್ತಿಗಳಲ್ಲಿ ತೃಪ್ತಿ ಪಡದೆ, ವರಬಲಗಳಿಂದ ಮದೋನ್ಮತ್ತರಾಗಿ ಅಟ್ಟಹಾಸ ಮಾಡಿದಾಗ, ನಿನ್ನಿಂದಲೇ ಕಡೆಗೆ ಸತ್ತರು. ಈಗ ಕೂಡಾ ಭೂಭಾರವನ್ನು ತೀರಿಸಿ ಭೂದೇವಿಯ ದುಃಖವನ್ನೂ ಆ ಮೂಲಕ ನಮ್ಮೆಲ್ಲರನ್ನೂ ಅನುಗ್ರಹಿಸು." ಎಂದು ಪ್ರಾರ್ಥಿಸಿಕೊಂಡರು ದೇವತೆಗಳು.

ಆ ಮಾತುಗಳನ್ನು ಕೇಳಿ ಮಹಾದೇವಿ ನಕ್ಕು, "ಹೌದು. ನಾನುಕೂಡಾ ಅದನ್ನು ಕುರಿತು ಆಲೋಚಿಸಿದ್ದೇನೆ. ಜರಾಸಂಧನೇ ಮೊದಲಾದ ದುರ್ವಿದಗ್ಧರನ್ನು ನಿರ್ಮೂಲಿಸಬೇಕೆಂದು ಮೊದಲೇ ನಿರ್ಣಯಿಸಿದ್ದೇನೆ. ಅದೆಲ್ಲಾ ತುಂಬಿ ಬರುವ ಹಾಗೆ ಕಾಲ ಕೂಡಿಬರಬೇಕಿತ್ತು. ಅದೀಗ ಬರುತ್ತಿದೆ. ನೀವು ದೇವತೆಗಳೆಲ್ಲಾ ನಿಮ್ಮ ನಿಮ್ಮ ಅಂಶಗಳಿಂದ ಭೂಮಿಯಲ್ಲಿ ಹುಟ್ಟಿರಿ. ಕಶ್ಯಪನು ಯಾದವಕುಲದಲ್ಲಿ ವಸುದೇವನಾಗಿ ಹುಟ್ಟಿದ್ದಾನೆ. ಭೃಗುವಿನಶಾಪ ಪಡೆದಿರುವ ವಿಷ್ಣು ಆ ವಸುದೇವನಿಗೆ ಮಗನಾಗಿ ಹುಟ್ಟುತ್ತಾನೆ. ನಾನು ನಂದಗೋಪನ ಮಗಳಾಗಿ ಹುಟ್ಟುತ್ತೇನೆ. ನಂದನಿಗೂ ಯಶೋದೆಗೂ ನಾನು ಮಗಳಾಗಿ ಹುಟ್ಟಿ ಮಾಡಬೇಕಾದ ಕೆಲಸಗಳನ್ನು ಸಂತೋಷದಿಂದ ಮಾಡುತ್ತೇನೆ. ನಿರ್ಬಂಧದಲ್ಲಿ ಹುಟ್ಟಿದ ವಿಷ್ಣುವನ್ನು ಗೋಕುಲಕ್ಕೆ ಕಳುಹಿಸುತ್ತೇನೆ. ದೇವಕಿಯ ಗರ್ಭದಲ್ಲಿದ್ದ ಶೇಷನನ್ನು ರೋಹಿಣೀ ದೇವಿಯ ಗರ್ಭಕ್ಕೆ ಬದಲಾಯಿಸುತ್ತೇನೆ. ನನ್ನ ಶಕ್ತಿಯುಕ್ತಿಗಳ ಸಹಾಯದಿಂದ ಬಲರಾಮಕೃಷ್ಣರಿಬ್ಬರೂ ದುಷ್ಟರಾದ ರಾಕ್ಷಸರನ್ನೆಲ್ಲಾ ದ್ವಾಪರಯುಗಾಂತದಲ್ಲಿ ಕೊಂದು ತೀರಿಸುತ್ತಾರೆ. ಇಂದ್ರನ ಅಂಶದಲ್ಲಿ ಹುಟ್ಟಿದ ಅರ್ಜುನನು ರಾಜರನ್ನೆಲ್ಲಾ ಕೊಲ್ಲುತ್ತಾನೆ. ಯಮನ ಅಂಶದವನಾದ ಧರ್ಮರಾಜನೂ, ವಾಯುವಿನ ಅಂಶದ ಭೀಮನೂ, ಅಶ್ವಿನೀ ದೇವತೆಗಳ ಅಂಶದ ನಕುಲ ಸಹದೇವರೂ, ವಸುವಿನ ಅಂಶದಲ್ಲಿ ಹುಟ್ಟಿದ ಭೀಷ್ಮನೂ ಬೇಕಾದಷ್ಟು ದುಷ್ಟರನ್ನು ಸಂಹಾರ ಮಾಡುತ್ತಾರೆ. ನಿಮ್ಮನ್ನೆಲ್ಲಾ ಸಾಧನಗಳನ್ನಾಗಿಟ್ಟುಕೊಂಡು ಮಾಡಬೇಕಾದುದನ್ನೆಲ್ಲಾ ನಾನು ಮಾಡಿ ಮುಗಿಸುತ್ತೇನೆ. ಇನ್ನು ನೀವೆಲ್ಲ ನಿಮ್ಮ ನಿಮ್ಮ ಸ್ಥಾನ

ಗಳಿಗೆ ಹೋಗಿ, ನಾನು ಹೇಳಿದಂತೆ ಕಾರ್ಯೋನ್ಮುಖ ರಾಗಿರಿ. ಚಿಂತಿಸ ಬೇಡಿರಿ " ಎಂದು ಹೇಳಿ ಅಂತರ್ಧಾನ ಳಾದಳು. ಎಲ್ಲರೂ ನೆಮ್ಮದಿಯಿಂದ ಹಿಂದಿರುಗಿದರು.

ಕಾಳಿಂದೀ ನದಿಯ ತೀರದಲ್ಲಿ ಎತ್ತರವಾದ ಮರ ಗಳಿಂದ ಕೂಡಿದ ಸುಂದರವಾದ ಮಧುವನವು ಭೂಮಿಯಲ್ಲಿದ್ದಿತು. ಅಲ್ಲಿ ಲವಣಾಸುರನೆಂಬ ರಾಕ್ಷ ಸನು ಪರಮ ದುರ್ಮಾರ್ಗಿಯಾಗಿದ್ದನು. ಅವನ ತಂದೆಯ ಹೆಸರು ಮಧು. ಬ್ರಾಹ್ಮಣರನ್ನೂ, ಸಾಧು ಗಳನ್ನೂ ಋಷಿಗಳನ್ನೂ ಕಾಡುತ್ತಿದ್ದ ಲವಣಾಸುರ ನನ್ನು ಶತ್ರುಘ್ನನೆಂಬವನು ಕೊಂದು, ಆ ವನದಲ್ಲಿ ಒಂದು ನಗರವನ್ನೇ ನಿರ್ಮಿಸಿದನು. ಅದುವೇ ಮಧುರಾ ನಗರ.

ಆದರೆ ಶತ್ರುಘ್ನನ ವಂಶದವರು ಅದನ್ನು ಬಹಳಕಾಲ ಪಾಲಿಸಲಿಲ್ಲ. ಮಧುರಾ ನಗರವು ಯದುವಂಶದ ರಾಜರ ವಶವಾಯಿತು. ಅದನ್ನು ಯಯಾತಿಯ ಮಗನಾದ ಶೂರಸೇನನು ಪಾಲಿಸಿ ಕೊಂಡಿದ್ದನು. ವರುಣದೇವನ ಶಾಪವನ್ನು ಪಡೆದ ಕಶ್ಯಪನು ಅವನಿಗೆ ಹುಟ್ಟಿ ವಸುದೇವನೆಂಬ ಹೆಸರಿನಿಂದ ಬೆಳೆದನು. ಅದಿತಿ ದೇವಕಿ ಎಂಬ ಹೆಸರಿನಲ್ಲಿ ವಸುದೇವನಿಗೆ ಹೆಂಡತಿಯಾಗಿ ಹೊಂದಿ ಕೊಂಡಳು. ಆದರೆ ವಸುದೇವನು ವೈಶ್ಯ ವೃತ್ತಿ ಯನ್ನು ಅವಲಂಬಿಸಿದುದರಿಂದ, ಮಧುವಂಶದಲ್ಲಿ ಹುಟ್ಟಿದ ಉಗ್ರಸೇನನು ಮಧುರಾಪುರವನ್ನು ಪಾಲಿಸಿ ಕೊಂಡು ಬಂದನು. ಅವನ ಮಗನೇ ಕಂಸ. ದೇವಕ ನೆಂಬವನಿಗೆ ಮಗಳಾಗಿ ಹುಟ್ಟಿದವಳು ದೇವಕಿ.

ದೇವಕನು ದೇವಕಿಯನ್ನು ವಸುದೇವನಿಗೆ ಕೊಟ್ಟು ಮದುವೆ ಮಾಡುವಾಗ ಒಂದು ಅದ್ಭುತ ಸಂಭವ ವಾಯಿತು, ಮದುವೆಯ ಮೆರವಣಿಗೆಯ ಗದ್ದಲದ ನಡುವೆ, ಆಕಾಶವಾಣಿಯೊಂದು ಈ ರೀತಿಯಾಗಿ ಮೊಳಗಿತು: "ಎಲೋ ಕಂಸಾ! ಈ ದೇವಕಿಯ ಮಗಂದಿರಲ್ಲಿ ಎಂಟನೇಯವನು ನಿನ್ನನ್ನು ಕೊಲ್ಲು



ತ್ತಾನೆ!" ಈ ಶಬ್ದವನ್ನು ಕೇಳಿ ಕಂಸನಿಗೆ ದಿಗಿಲು ಬಡೆಯಿತು. ಅದನ್ನು ತಪ್ಪಿಸಿಕೊಳ್ಳಲು ದೇವಕಿಯನ್ನು ಕೊಂದುಬಿಡುವುದೇ ಸರಿಯಾದ ದಾರಿಯೆಂದು ಮೊದಲು ತೋರಿತು.

ಆದರೆ ತಂಗಿಯಂತೆ ಸನ್ಮಾನಿಸಲ್ಪಡ ಬೇಕಾದವ ಳನ್ನು, ಉತ್ತಮ ಗುಣಸಂಪನ್ನೆ ಯಾದವ ಳನ್ನು ಹೇಗೆ ತಾನೇ ಕೊಲ್ಲಲಿ, ಎಂದು ಅವನ ಮನಸ್ಸು ಸಂಕಟದಿಂದ ಹೊರಳ ತೊಡಗಿತು. ಏನಾದರೂ ದೇವಕಿಯನ್ನು ಕೊಲ್ಲದೆ ಉಪಾಯವಿಲ್ಲ ವೆಂದೇ ಎಣಿಸಿದನು. ತಾನು ಬದುಕಿದ್ದರೆ ಎಂತಹ ಪಾಪಕ್ಕಾದರೂ ಪ್ರಾಯಶ್ಚಿತ್ತಮಾಡಿಕೊಳ್ಳಬಹುದು. ಸತ್ತರೆ ಏನಿದೆ? ಆದುದರಿಂದ ಪ್ರಾಣ ಉಳಿಸಿ ಕೊಳ್ಳಲು ಎಂತಹ ಪಾಪವನ್ನಾದರೂ ಮಾಡ ಬಹುದು.

ಹೀಗೆ ನಿಶ್ಚಯಿಸಿಕೊಂಡು ಕಂಸನು ಎಲ್ಲರೂ ನೋಡುತ್ತಿದ್ದಂತೆ ಕತ್ತಿಯನ್ನೆತ್ತಿ ಮದುಮಗಳಾಗಿದ್ದ



ದೇವಕಿಯ ತಲೆ ಮುಡಿಯನ್ನು ಇನ್ನೊಂದು ಕೈಯಲ್ಲಿ ಹಿಡಿದನು. ಆ ಕ್ಷಣಗಳಲ್ಲಿ ಅವಳು ತನ್ನ ತಂಗಿಯೆಂದೂ, ಯಾವ ಪಾಪವನ್ನೂ ಅರಿಯದವಳೆಂದೂ ಆ ಕಠಿಣಾತ್ಮನಿಗೆ ತೋರಲೇ ಇಲ್ಲ.

ಆಗ ಥಕ್ಕನೆ ವಸುದೇವನು ಅಡ್ಡಬಾರದೆ ಹೋಗಿರುತ್ತಿದ್ದರೆ ದೇವಕಿಯ ತಲೆ ಕೆಳಗೆ ಬೀಳುತ್ತಿತ್ತು. ವಸುದೇವನ ಬೆನ್ನಿಗೆ ಯಾದವ ವೀರರೆಲ್ಲರೂ ಒಂದಾಗಿ ನಿಂತು, "ಎಲೋ ದುರಾತ್ಮಾ! ಕಂಸಾ! ಎಂಥಾ ಹೀನ ಕಾರ್ಯಕ್ಕೆ ಸಿದ್ಧನಾದೆಯೋ!" ಎಂದು ಕಂಸನನ್ನು ನಿಂದಿಸಿ ಹೋರಾಡಲು ತಯಾರಾದರು. ಕಂಸನು ದೇವಕಿಯನ್ನು ಬಿಟ್ಟು ಅವರನ್ನು ಇದಿರಿಸ ಬೇಕಾಗಿ ಬಂದಿತು.

ಆಗ ವೃದ್ಧರು ಮಧ್ಯೆ ನಿಂತು ಅಶುಭಕರವಾದ ಹೊಡೆದಾಟವಾಗದಂತೆ ತಡೆದು ಕಂಸನೊಂದಿಗೆ, "ನೋಡಪ್ಪ! ಇವಳನ್ನು ನೋಡು! ಮುದ್ದಿನ ಮದುವೇ ಮಗಳು! ಉತ್ತ ಗುಣದವಳು! ನಿನ್ನ ಪ್ರೀತಿಯ ತಂಗಿ! ಇವಳನ್ನು ಕೊಲ್ಲಲು ಕೈಯಾದರೂ ನಿನಗೆ ಹೇಗೆ ಬಂತಪ್ಪಾ! ಯಾವನೋ ಒಬ್ಬ ಅಸತ್ಯ ವಾದಿ ವಸುದೇವನ ಮನೆ ಮುಳುಗಿಸಬೇಕೆಂಬ ದುರ್ಬುದ್ಧಿಯಿಂದ ನಿನಗೆ ಅಪಖ್ಯಾತಿ ತರಲು ಏನೋ ಗಾರುಡಿ ಮಾಡಿದನೇ ಹೊರತು, ಅದನ್ನು ನಿಜವಾದ ದೈವವಾಣಿ ಎಂದು ನಂಬುವಿಯಾ? ಬುದ್ಧಿವಂತರು ಇಂತಹ ಇಂದ್ರಜಾಲವನ್ನು ಲೆಕ್ಕಿಸುವರೇನು? ಹೋಗಲಿ, ಅದು ನಿಜವಾದ ಅಶರೀರವಾಣಿಯೆಂದೇ ಅಂದುಕೊಳ್ಳುವ. ನಡೆಯಲೇ ಬೇಕಾಗಿ ಬರುವ ವಿಧಿಯನ್ನು ನೀನು ತಪ್ಪಿಸಿಬಿಡಬಲ್ಲೆಯಾ?" ಎಂದರು.

ಆಗ ವಸುದೇವನು ಹೀಗೆಂದನು: "ಕಂಸಬಾವಾ, ನಿನಗೆ ಯಾವ ಭಯವೂ ಬೇಡ. ಇಷ್ಟುಮಂದಿಗಳ ಇದಿರಿನಲ್ಲಿ ಪ್ರಮಾಣಮಾಡಿ ಹೇಳುತ್ತೇನೆ. ದೇವಕಿಗೆ ಹುಟ್ಟಿದ ಮಕ್ಕಳನ್ನೆಲ್ಲಾ ನಿನಗೆ ಕೊಟ್ಟುಬಿಡುತ್ತೇನೆ. ಅವುಗಳನ್ನು ಬೇಕಾದರೆ ಕೊಲ್ಲು. ಈ ಮಾತನ್ನು ನಾನು ತಪ್ಪಿದ ಪಕ್ಷದಲ್ಲಿ ನನ್ನ ಪೂರ್ವಿಕರು ನರಕಕ್ಕೆ ಹೋಗುತ್ತಾರೆ."

ವಸುದೇವನು ಸೂರ್ಯಚಂದ್ರರು ತಲೆ ಕೆಳಗಾದರೂ ಆಡಿದ ಮಾತು ತಪ್ಪುವವನಲ್ಲವೆಂದು ಎಲ್ಲರೂ ಕಂಸನಿಗೆ ಒತ್ತಿ ಹೇಳಿದರು. ಕಂಸನು ವಸುದೇವನ ಮಾತನ್ನು ನಂಬಿ ತನ್ನ ಹಟವನ್ನು ಬಿಟ್ಟುಕೊಟ್ಟನು. ಎಲ್ಲರಿಗೂ ದೊಡ್ಡ ಗಂಡ ತಪ್ಪಿದಂತಾಯಿತು. ಅನಂತರ ವಸುದೇವನು ದೇವಕಿಯೊಂದಿಗೆ ತನ್ನ ಮನೆಯಲ್ಲಿ ಸುಖವಾಗಿದ್ದನು.

ಸ್ವಲ್ಪಕಾಲದ ಮೇಲೆ ದೇವಕಿ ಗರ್ಭಿಣಿಯಾಗಿ ಸುಂದರವಾದ ಮಗನನ್ನು ಹಡೆದಳು. ಆಗ ವಸುದೇವನು ದೇವಕಿಯೊಂದಿಗೆ, "ಈ ಹುಡುಗನ ಆಶೆ ಬಿಡು. ಇವನನ್ನು ಒಯ್ದು ಕಂಸನಿಗೆ ಕೊಟ್ಟುಬಿಡುತ್ತೇನೆ. ನೀನು ದುಃಖಿಸಬಾರದು. ಪ್ರಾರಬ್ಧವನ್ನು ಮೀರಲು ಯಾರಿಗೂ ಸಾಧ್ಯವಿಲ್ಲ" ಎಂದನು. ಆದಕ್ಕೆ ದೇವಕಿ, "ಪ್ರಾರಬ್ಧಕ್ಕೆ ಪರಿಹಾರವಿಲ್ಲ

ದಿದ್ದೀತೆ? ಮಾಡಿದ ಪಾಪಗಳು ಹೋಗಿ ಸ್ವರ್ಗ ಸಿಗಬೇಕಾದರೆ ತೀರ್ಥಯಾತ್ರೆ ಮಾಡಬೇಕೆಂದು ಹಿರಿಯರು ಹೇಳುವುದಿಲ್ಲವೆ? ಬ್ರಹ್ಮಹತ್ಯದಂಥಾ ಪಾಪಕ್ಕೂ ಪ್ರಾಯಶ್ಚಿತ್ತ ಹೇಳಿದ್ದಾರೆ. ಮನು ಮೊದಲಾದ ಶಾಸ್ತ್ರಕಾರರು ಹೇಳಿದ್ದೆಲ್ಲಾ ಸುಳ್ಳೆಂದು ಹೇಳುವಿರೇನು? ನಡೆಯುವಂಥಾದ್ದು ನಡೆದೇ ತೀರುತ್ತದೆನ್ನುವುದರಲ್ಲಿ ವಿವೇಕವೇನೂ ಇಲ್ಲ. ಮಾಡಿದ ಕೆಲಸಗಳಿಗೆ ಫಲ ಸಿಗುವುದನ್ನು ಸ್ಪಷ್ಟವಾಗಿಯೇ ಕಾಣುತ್ತೇವೆ. ಹಾಗಿಲ್ಲದ ಪಕ್ಷದಲ್ಲಿ ವೇದಗಳೇಕೆ? ಯಜ್ಞಗಳೇಕೆ? ಮಹಾಮುನಿಗಳೇಕೆ? ಅಮೂಲ್ಯವಾದ ಔಷಧಗಳೇಕೆ? ಎಲ್ಲವೂ ಸುಳ್ಳೇ ಅಲ್ಲವೆ? ಆದ್ದರಿಂದ ಈಗ ಏನಾದರೂ ಉಪಾಯವನ್ನು ಆಲೋಚಿಸಿರಿ. ಸ್ವಲ್ಪ ವಿವೇಕಕ್ಕೆ ಎಡೆ ಕೊಡಿರಿ." ಎಂದಳು.

ಅವಳ ಮಾತನ್ನು ವಸುದೇವನು ಒಪ್ಪಲಿಲ್ಲ. "ಪ್ರಯತ್ನ ಮಾಡಬೇಕೆಂಬುದೇನೋ ನಿಜವೇ. ಆದರೆ ಕೇವಲ ಪ್ರಯತ್ನದಿಂದಲೇ ಫಲ ಬಂದು ಬಿಡುವುದಿಲ್ಲ. ದೈವ ಬಲವಿರುವ ಪ್ರಯತ್ನಗಳಷ್ಟೇ ಫಲ ಕೊಡುತ್ತವೆ. ವರ್ತಮಾನ ಕಾಲದಲ್ಲಿ ಮಾಡಿದುವುಗಳಿಗೆ ಮಾತ್ರ ಪ್ರಾಯಶ್ಚಿತ್ತವಿದೆಯೇ ಹೊರತು ಪೂರ್ವಜನ್ಮ ಪ್ರಾರಬ್ಧಗಳಿಗೆ ಪ್ರಾಯಶ್ಚಿತ್ತವಿಲ್ಲ. ಸಾರವಿಲ್ಲದ ಈ ಜೀವಿತಕಾಲದಲ್ಲಿ ಸತ್ಯವೊಂದೇ ಸಾರವಾದುದು. ವಿವೇಕಿಗಳಾದವರು ಸತ್ಯವನ್ನು ಬಿಡುವುದುಂಟೆ? ಸತ್ಯಕ್ಕಾಗಿ ಸುಖ ದುಃಖಗಳನ್ನು ಲಕ್ಷ್ಯ ಮಾಡದಿದ್ದವರಿಗೇ ಶುಭವುಂಟಾಗುತ್ತದೆ. ಆದುದರಿಂದ ಈ ಮಗುವನ್ನು ಕಂಸನಿಗೆ ಕೊಡಲು ಒಪ್ಪಿಕೋ. ನಾನು ವಚನಭ್ರಷ್ಟನಾಗುವುದು ನಿನಗೂ ಒಳಿತಲ್ಲ" ಎಂದನು ವಸುದೇವ.

ದೇವಕಿ ಮರು ಮಾತಾಡದೆ ಅಳುತ್ತಾ ತನ್ನ ಮಗುವನ್ನು ತಾನೇ ಎತ್ತಿ ಗಂಡನ ಕೈಗೆ ಕೊಟ್ಟಳು. ತನ್ನ ಮಾತನ್ನು ಉಳಿಸಿಕೊಳ್ಳುವವನಾಗಿ ಮಗುವನ್ನೆತ್ತಿಕೊಂಡು ಕಂಸನ ಬಳಿಗೆ ಹೋಗುವ ವಸುದೇವನನ್ನು ನೋಡಿ ಎಲ್ಲರೂ ಮೆಚ್ಚಿಕೊಂಡರು. ಇನ್ನೂ ಹಸಿಯಾರದ ತನ್ನ ಎಳೆ ಕಂದನನ್ನು ತಂದು ತನಗೆ ಸಮರ್ಪಿ





ಸಿದ ವಸುದೇವನನ್ನು ನೋಡಿ ಕಂಸನೂ ಮೆಚ್ಚಿದನು. "ಹೌದು, ನನ್ನನ್ನು ಕೊಲ್ಲುವುದು ದೇವಕಿಯ ಎಂಟನೇ ಗರ್ಭದಲ್ಲಿ ಹುಟ್ಟುವವನು ತಾನೆ? ಸುಮ್ಮನೆ ಇವನನ್ನೇಕೆ ಕೊಲ್ಲಲಿ? ತೆಗೆದುಕೊಂಡು ಹೋಗಿ ನೀವೇ ಬೆಳೆಸಿಕೊಳ್ಳಿ" ಎಂದನು ಕಂಸ. ವಸುದೇವನು ಮಗುವಿನೊಂದಿಗೆ ಹಿಂದಿರುಗಿದನು.

ಕಂಸನು ತಾನು ಮಾಡಿದ ಕೆಲಸವನ್ನು ಕುರಿತು ತನ್ನ ಮಂತ್ರಿಗಳೊಂದಿಗೆ ಹೇಳಲು, ಅವರು ಕೂಡಾ ಕಂಸನನ್ನು ಮೆಚ್ಚಿಕೊಂಡರು. ಆದರೆ ಕಂಸನ ಕಾರ್ಯವನ್ನು ಹೀಯಾಳಿಸುವವನಾಗಿ ನಾರದನು ಅಕಸ್ಮಾತ್ತಾಗಿ ಕಂಸನ ಬಳಿಗೆ ಬಂದನು. ಅರ್ಘ್ಯ ಪಾದ್ಯಾದಿ ಉಪಚಾರಗಳೆಲ್ಲ ಆದ ಮೇಲೆ ನಾರದನು ಕಂಸನನ್ನು ನೋಡಿ, "ಎಲೋ ಹುಚ್ಚನೇ! ದೇವಕಿ ಹೆತ್ತ ಮಗುವನ್ನು ಕೊಲ್ಲದೆ ಬಿಟ್ಟು ಬಿಟ್ಟೆಯಲ್ಲಾ! ಎಂತಹ ಬುದ್ಧಿ ಹೀನನು ನೀನು? ನಿನ್ನನ್ನು ಕೊಲ್ಲಿಸಲಿಕ್ಕಾಗಿ ವಿಷ್ಣುವೇ ದೇವಕಿಯ ಗರ್ಭದಲ್ಲಿ ಹುಟ್ಟುವ ಹಾಗೆ ದೇವತೆಗಳು ಪಥಕ ಹಾಕುವುದನ್ನು ನಾನು ಸ್ವಯಂ ಕೇಳಿದೆನು ಗೊತ್ತಾ?" ಎಂದನು.

"ನನಗೆ ಮರಣವು ಅವಳ ಅಷ್ಟಮ ಗರ್ಭದಿಂದ ಎಂದು ಆಕಾಶವಾಣಿ ಹೇಳಿದೆ. ಹಾಗಿರುವಾಗ ಮೊದಲನೇ ಮಗುವನ್ನೇ ಕೊಲ್ಲಲೇಕೆ?" ಎಂದು ಕಂಸನು ಕೇಳಿದನು.

"ನಿನಗೆ ದೇವತೆಗಳ ಮಾಯವು ಗೊತ್ತಾಗುವುದಿಲ್ಲ. ನಿನಗೆ ಮೃತ್ಯುವಾಗುವುದು ದೇವಕಿಯ ಎಂಟನೇ ಸಂತಾನವಾದರೂ ಆ ಅಷ್ಟಮದವನಿಗೆ ಉಳಿಯುವ ಏಳು ಮಂದಿ ಅಣ್ಣಂದಿರ ಸಹಾಯ ವಿದ್ದರೆ ನಿನಗೆ ಮತ್ತಿಷ್ಟು ಕಷ್ಟವಲ್ಲವೆ? ಅವರೆಲ್ಲಾ ಕೂಡಿ ಎಂಟನೇಯವನನ್ನು ಕೊಲ್ಲಲಾಗದಂತೆ ನಿನ್ನನ್ನು ತಡೆಯಬಹುದಲ್ಲವೆ? ಆಗ ನಿನ್ನ ಗತಿ ಏನಾದೀತೋ ಹೇಳಲು ಸಾಧ್ಯವೇ?" ಎಂದ ನಾರದ.

ಕಂಸನಿಗೆ ನಾರದನ ಮಾತು ನಾಟಿತು. ನಾರದನು ಹೊರಟು ಹೋದ ಕೂಡಲೇ ಕಂಸನು ದೇವಕಿ ಹಡೆದ ಮಗುವನ್ನು ತರಿಸಿ ಕಲ್ಲಿಗೆ ಹೊಡೆದು ಕೊಂದು ಹಾಕಿಬಿಟ್ಟನು.

ಹೀಗೆ ನಾರದನು ತಾನಾಗಿಬಂದು ದೇವಕಿ ಹೆತ್ತ ಮಕ್ಕಳನ್ನು ಕಂಸನಿಂದ ಕೊಲ್ಲಿಸಲಿಕ್ಕೆ ಮುಖ್ಯವಾದ ಕಾರಣವಿದ್ದಿತು. ಅದೇನೆಂದರೆ, ಸ್ವಾಯಂಭು ಮನ್ವಂತರದಲ್ಲಿ ಮರೀಚಿಗೆ ಊರ್ಣಾದೇವಿ ಹೆಂಡತಿಯಾಗಿದ್ದಳು. ಅವಳು ಆರು ಮಂದಿ ಮಕ್ಕಳನ್ನು ಹಡೆದಳು. ಆ ಮಕ್ಕಳು ಒಂದುಸಾರಿ ಬ್ರಹ್ಮನನ್ನು ನೋಡಿ, ಮಗಳಿಗೇ ಗಂಡನಾದವನೆಂದು ಹೇಳಿ ನಗುತ್ತ ಹಾಸ್ಯಮಾಡಿದರು.

ಬ್ರಹ್ಮನಿಗೆ ಕೋಪಬಂದು ಅವರನ್ನು ರಾಕ್ಷಸ ಜನ್ಮ ಎತ್ತುವಂತೆ ಶಪಿಸಿದನು. ಆ ಶಾಪದಿಂದ ಅವರು ಒಂದು ಜನ್ಮದಲ್ಲಿ ಕಾಲನೇಮಿಗೆ ಪುತ್ರರಾಗಿ ಹುಟ್ಟಿ, ಎರಡನೇ ಜನ್ಮದಲ್ಲಿ ಹಿರಣ್ಯಕಶಿಪುವಿಗೆ ಪುತ್ರರಾಗಿ ಹುಟ್ಟಿದರು.

ಪದೇ ಪದೇ ರಾಕ್ಷಸ ಜನ್ಮ ಬರುವುದನ್ನು ನೋಡಿ ಅವರು ಶಾಪವಿಮೋಚನೆಗಾಗಿ ಬ್ರಹ್ಮನನ್ನು ಕುರಿತು ತಪಸ್ಸಿಗೆ ಕುಳಿತರು. ಬ್ರಹ್ಮನು ಪ್ರತ್ಯಕ್ಷನಾಗಿ, " ಆಗ ನಿಮ್ಮ ಹುಡುಗಾಟದ ತಪ್ಪಿಗೆ ಕೋಪಬಂದು ಶಪಿಸಿದೆ. ಈಗ ನಿಮಗೆ ವರ ಕೊಡುತ್ತೇನೆ. ಏನು ಬೇಕೋ ಕೇಳಿರಿ " ಎಂದನು.

ಆರು ಮಂದಿಗಳೂ ತಪಸ್ಸಿಗೆ ಕುಳಿತ ಉದ್ದೇಶವನ್ನು ಮರೆತು, ಬ್ರಹ್ಮನೊಂದಿಗೆ, " ದೇವಾ ! ನಿನಗೆ ವರ ಕೊಡುವ ಮನಸ್ಸಿದ್ದರೆ, ನಮಗೆ ದೇವತೆಗಳಿಂದಾಗಲಿ, ರಾಕ್ಷಸರಿಂದಾಗಲಿ, ಮಾನವರಿಂದಾಗಲಿ ಸಾವು ಬಾರದಂತೆ ವರಕೊಡು. ನಾವು ಸ್ಥಿರವಾಗಿ ಬದುಕಿರುತ್ತೇವೆ " ಎಂದು ಕೇಳಿದರು. ಬ್ರಹ್ಮನು "ತಥಾಸ್ತು" ಎಂದು ಹೇಳಿ ಅಂತರ್ಧಾನನಾದನು.

ಇದನ್ನು ತಿಳಿದು ಅವರ ತಂದೆಯಾದ ಹಿರಣ್ಯಕಶಿಪುವಿಗೆ ಕೋಪಬಂದಿತು. ತನ್ನನ್ನು ಸ್ವಲ್ಪವೂ ಲಕ್ಷ್ಯಮಾಡದೆ ಬ್ರಹ್ಮದೇವನಿಂದ ವರ ಪಡೆದ ಪುತ್ರರ ಮೇಲೆ ರುಷ್ಟನಾದ ಹಿರಣ್ಯಕಶಿಪು, ಅವರನ್ನು ತನ್ನ ಬಳಿಯಿಂದ ಹೊರಡಿಸುತ್ತ, " ನೀವು ಪಾತಾಳಕ್ಕೆ ಹೋಗಿ ರಾತ್ರೀ ಹಗಲೂ ನಿದ್ರೆಯಿಲ್ಲೇ ಇದ್ದು ಅನ್ನ ನೀರುಬಿಟ್ಟು ಸತ್ತು, ಆ ಮೇಲೆ ದೇವಕಿಯ ಗರ್ಭದಲ್ಲಿ ಹುಟ್ಟಿರಿ. ಹಿಂದಿನ ಜನ್ಮದ ನಿಮ್ಮ ತಂದೆ ಕಾಲನೇಮಿಯೇ ಕಂಸನಾಗಿ ಹುಟ್ಟಿ, ನಿಮ್ಮನ್ನು ಹುಟ್ಟಿದ ಕೂಡಲೇ ಕೊಲ್ಲುತ್ತಾನೆ. ನನ್ನನ್ನು ಅಲಕ್ಷ್ಯ ಮಾಡಿದ್ದಕ್ಕೆ ಬ್ರಹ್ಮ ವರ ಪಡೆದ ನಾನು ಕೊಡುವ ಶಾಪ ನಿಮಗಿದು !" ಎಂದನು.

ಹೀಗೇ ಹಿರಣ್ಯಕಶಿಪುವಿನ ಶಾಪದಿಂದ ಆ ಆರು ಮಂದಿಗಳೂ ಆ ಜನ್ಮದಿಂದ ಮುಕ್ತರಾಗಿ, ದೇವಕಿಯ ಗರ್ಭದಲ್ಲಿ ಹುಟ್ಟಿ, ಆ ಕೂಡಲೇ ಕಂಸನ ಕೈಯಿಂದ ಸತ್ತು ಮುಕ್ತರಾದರು. ಕಡೆಗೆ ದೇವಕಿ ಏಳನೇ ಸಾರಿ ಗರ್ಭಿಣಿಯಾದಳು. ಆದರೆ ಐದನೇ ತಿಂಗಳಿನಲ್ಲಿ ಅವಳ ಗರ್ಭವು ಹೋಯಿತೆಂದು ಸುದ್ದಿ ಹುಟ್ಟಿತು. ಅದನ್ನು ಕೇಳಿ ಕಂಸನು ಬಹಳ ಸಂತೋಷ ಪಟ್ಟನು.

ಆದರೆ ನಿಜಕ್ಕೂ ನಡೆದುದೇನಂದರೆ, ಮಹಾದೇವಿಯಾದ ಯೋಗಮಾಯೆ ದೇವಕಿಯ ಗರ್ಭವನ್ನು ರೋಹಿಣಿಯ ಗರ್ಭದೊಳಗೆ ಬದಲಾಯಿಸಿದ್ದಳು. ಅಂತೆಯೇ ಸ್ವಲ್ಪ ಕಾಲದಲ್ಲೇ ಗೋಕುಲದಲ್ಲಿದ್ದ ರೋಹಿಣಿ ಗಂಡು ಶಿಶುವನ್ನು ಹೆತ್ತಳು. ಅವನೇ ಬಲರಾಮ.

ಎಂಟನೇ ಸಾರಿ ದೇವಕಿ ಗರ್ಭಿಣಿಯಾದಳು. ಈ ಸಾರಿ ಅವಳ ಗರ್ಭದಲ್ಲಿರುವವನು ಮಹಾ ವಿಷ್ಣುವೇ. ಯೋಗಮಾಯೆ ತಾನು ಕೂಡಾ ಆ ಗರ್ಭದೊಳಗೆ ಸೇರಿ ಕೊಂಡಳು. ಈ ಸಾರಿ ಕಂಸನು ಜಾಗರೂಕತೆಯನ್ನು ವಹಿಸಿ ದೇವಕೀ ವಸುದೇವರನ್ನು ಬಲವಾದ ನಿರ್ಬಂಧದಲ್ಲಿ ಇಡಿಸಿದನು.





# ದೇವೀಭಾಗವತ

ಕಂಸನು ವಸುದೇವನನ್ನೂ ದೇವಕಿಯನ್ನೂ ಕಾರಾಗೃಹದಲ್ಲಿ ಇರಿಸಿ, ಎಚ್ಚರಿಕೆಯಿಂದ ನೋಡಿಕೊಳ್ಳಬೇಕೆಂದು ಕಾವಲು ಭಟರಿಗೆ ಅಪ್ಪಣೆ ಮಾಡಿದನು. ಎಂಟನೆಯ ಸಾರಿ ಗರ್ಭಿಣಿಯಾದ ದೇವಕಿಗೆ ಹತ್ತು ತಿಂಗಳು ತುಂಬಿದುವು.

ಶ್ರಾವಣ ಮಾಸ ಬಹುಳ ಅಷ್ಟಮಿಯ ದಿನ ಬಂದಿತು. ಆ ದಿನ ರೋಹಿಣೀ ನಕ್ಷತ್ರ. ಅವಳ ಪ್ರಸವದ ದಿನವನ್ನೇ ನಿರೀಕ್ಷಿಸಿಕೊಂಡಿದ್ದ ಕಂಸನಿಗೆ ತುಂಬಾ ಭಯವಾಗುತಿತ್ತು. ಅವನು ಭಟರೊಂದಿಗೆ, "ಇದು ಎಂಟನೇ ಗರ್ಭ. ನನಗೆ ಮಾರಕವಾದದ್ದು. ಈ ಗರ್ಭದಲ್ಲಿ ಹುಟ್ಟುವವನೇ ನನ್ನನ್ನು ಕೊಲ್ಲುತ್ತಾನಂತೆ. ಅವನನ್ನು ಕೊಂದ ಹೊರತು ನನಗೆ ನಿದ್ದೆ ಬಾರದು. ಮಗುವನ್ನು ಭೂಮಿಯ ಮೇಲೆ ಬೆಳೆಯಲಿಕ್ಕೇ ಬಿಡಬಾರದು. ನೀವು ಎಚ್ಚರ ತಪ್ಪಿದರೆ ಸರ್ವನಾಶವೇ ಆದೀತು! ರಪ್ಪೆಗೆ ರೆಪ್ಪೆ ಹಚ್ಚದೆ ಜಾಗರೂಕತೆಯಿಂದ ನೋಡುತ್ತಿದ್ದು ಹಡೆದ ಕೂಡಲೇ ನನಗೆ ಬಂದು ಹೇಳಬೇಕು" ಎಂದು ಕಟ್ಟಪ್ಪಣೆ ಮಾಡಿ, ಸ್ವಲ್ಪವೂ ಮನಃಶಾಂತಿ ಇಲ್ಲದವನಾಗಿದ್ದನು. ಭಟರು ಆಯುಧಗಳನ್ನು ಧರಿಸಿಕೊಂಡು ತುಂಬಾ ಶ್ರದ್ಧೆಯಿಂದ ಸೆರೆಮನೆಯ ಕಾವಲು ಕಾಯುತ್ತಿದ್ದರು.

ರಾತ್ರಿಯಲ್ಲಿ ದೇವಕಿಗೆ ಪ್ರಸವ ವೇದನೆ ಪ್ರಾರಂಭವಾಯಿತು. ಅವಳು ವಸುದೇವನೊಂದಿಗೆ ಹೀಗೆಂದಳು: "ನನಗೆ ಇನ್ನು ಸ್ವಲ್ಪ ಹೊತ್ತಿನಲ್ಲಿ ಪ್ರಸವವಾಗುತ್ತದೆ. ಇಲ್ಲಿ ಸುತ್ತಲೂ ರಾಕ್ಷಸರು ಕಾವಲು ಕಾಯುತ್ತಿದ್ದಾರೆ. ಈ ಮೊದಲು ನಾನೂ ನಂದನ ಹೆಂಡತಿ ಯಶೋದೆಯೂ ನಮಗೆ ಹುಟ್ಟುವ ಮಕ್ಕಳನ್ನು ಅದಲು ಬದಲು ಮಾಡಿಕೊಳ್ಳಬೇಕೆಂದು ಮಾತಾಡಿಕೊಂಡೆವು. ಆ ಕೆಲಸ ಈಗ ಸಾಧ್ಯವಾಗುವ ಹಾಗೆ ಕಾಣುವುದಿಲ್ಲವಲ್ಲಾ? ಏನು ಮಾಡುವುದು?"

ಈ ಮಾತು ಹೇಳುತ್ತಿರುವಾಗಲೇ ದೇವಕಿಗೆ ನೋವು ಜೋರಾಯಿತು. ಮಗುವೂ ಹುಟ್ಟಿತು. ಮೌನವಾಗಿ ಕೈಕಾಲಾಡಿಸುವ ಆ ಮಗು ದಿವ್ಯ ಸುಂದರ ಮೂರ್ತಿಯಾಗಿದ್ದಿತು. ದೇವಕಿ ತನ್ನ ಗಂಡನನ್ನು ಹತ್ತಿರಕ್ಕೆ ಕರೆದು ಮಗುವನ್ನು ತೋರಿಸಿ,

೧೩. ಕೃಷ್ಣನ ಜನನ-ಬೆಳೆವಣಿಗೆ



"ಇವನ ಮುಖದ ಕಾಂತಿಯನ್ನು ನೋಡಿರಿ. ಕಣ್ಣುಗಳ ಹೊಳಪನ್ನೂ, ಮೃದುವಾದ ಶರೀರವನ್ನೂ ನೋಡಿರಿ! ಯಾರಿಗಾದರೂ ಇಂತಹ ಸುಂದರ ಶಿಶು ಹುಟ್ಟಿದೆಯೆ ? ಸಾಯುವ ಮಗುವಿಗೆ ಇಷ್ಟೊಂದು ರೂಪ ಯಾಕೆ ದೇವರೇ ! ಇವನನ್ನು ಕೈಯಾರೆ ಎತ್ತಿಕೊಂಡು ಹೋಗಿ ಕೊಲ್ಲಲಿಕ್ಕೆ ಹೇಗೆ ಕೊಡುವಿರಿ ? ಕೊಟ್ಟು, ನಾನಾದರೂ ಹೇಗೆ ಬದುಕಿರಲಿ?" ಎಂದಳು.

ವಸುದೇವನು ಆ ಮಗುವನ್ನು ನೋಡುತ್ತಾ, ಏನು ಹೇಳಲೂ ತೋರದೆ, ಸ್ತಬ್ಧನಾಗಿದ್ದುಬಿಟ್ಟನು. ಆಗ ಒಂದು ಆಕಾಶವಾಣಿ ಕೇಳಿಸಿತು: "ವಸುದೇವಾ! ಕಾವಲಿನವರೆಲ್ಲಾ ನನ್ನ ಮಾಯೆಯಿಂದ ಗಾಢ ನಿದ್ರೆಯಲ್ಲಿದ್ದಾರೆ. ಕಾರಾಗೃಹದ ದ್ವಾರಗಳೆಲ್ಲ ತೆರೆದೇ ಇವೆ. ನಿನಗೆ ಯಾವ ತಡೆಯೂ ಇಲ್ಲ. ಈ ಮಗುವನ್ನು ಗೋಕುಲಕ್ಕೆ ತೆಗೆದುಕೊಂಡು ಹೋಗಿ ಯಶೋದೆಗೆ ಕೊಡು." ಹೀಗೆ ಹೊರಟ ದೇವಿಯ ದಿವ್ಯವಾಣಿಯ ಶ್ರವಣದಿಂದ ವಸುದೇವನ ಸಮಸ್ಯೆ ಬಗೆ ಹರಿಯಿತು. ದೇವಕಿಗೂ ಸಮಾಧಾನವಾಯಿತು. ವಸುದೇವನು ಕೂಡಲೇ ಆ ಮಗುವನ್ನು ಎತ್ತಿಕೊಂಡು, ತೆರೆದೇ ಇದ್ದ ಸೆರೆ ಮನೆಯ ಎಂಟು ದ್ವಾರಗಳನ್ನೂ ದಾಟಿ, ಯೋಗ ಮಾಯೆಯ ಪ್ರಭಾವದಿಂದ ಯಾರ ಕಣ್ಣಿಗೂ ಬೀಳದೆ ವೇಗವಾಗಿ ಸಾಗಿದನು. ಕಾಳಿಂದೀ ನದಿಯ ತೀರವನ್ನು ಸೇರಿ, "ಈ ನದಿಯನ್ನು ಹೇಗೆ ದಾಟಲಿ ?" ಎಂದು ಅವನು ಆಲೋಚಿಸುವಷ್ಟರಲ್ಲಿ, ನದಿಯ ನೀರು ಪಾದದಷ್ಟೇ ಆಳಕ್ಕೆ ತಗ್ಗಿಹೋಯಿತು. ವಸುದೇವನು ಶೀಘ್ರಗತಿಯಲ್ಲಿ ನಡೆದು ಗೋಕುಲವನ್ನು ತಲಪಿ, ನಂದನ ಮನೆಯನ್ನು ಪ್ರವೇಶಿಸಿದನು. ಮನೆಯ ಮುಂದೆ ಗೋವುಗಳ ಮಂದೆ ಇದ್ದಿತು.

ಆಗಲೇ ನಂದನ ಹೆಂಡತಿಯಾದ ಯಶೋದೆಗೆ ಯೋಗಮಾಯಾದೇವಿ ಹೆಣ್ಣು ಮಗುವಾಗಿ ಹುಟ್ಟಿದ್ದಳು. ಯಶೋದೆ ವಸುದೇವನನ್ನು ಬರಮಾಡಿ, ತನ್ನ ಮಗುವನ್ನು ವಸುದೇವನಿಗೆ ಒಪ್ಪಿಸಿದಳು. ಅವನ ಮಗುವನ್ನು ತಾನು ಬೆಳೆಯಿಸಲು ತೆಗೆದುಕೊಂಡಳು. ವಸುದೇವನು ಆ ಹೆಣ್ಣು ಮಗುವನ್ನು ಎತ್ತಿಕೊಂಡು ವೇಗವಾಗಿ ಹಿಂದಿರುಗಿ ಕಾರಾಗೃಹಕ್ಕೆ ಬಂದು ದೇವಕಿಯ ಬದಿಯಲ್ಲಿರಿಸಿ, ಇನ್ನೇನಾಗುವುದೋ ಎಂಬ ಚಿಂತೆಯಿಂದ ಒಂದು ಮೂಲೆಯಲ್ಲಿ ಕುಳಿತನು. ಆಗ ಆ ಹೆಣ್ಣು ಮಗು ಆಗಲೇ ಹುಟ್ಟಿದಂತೆ ಮೆಲ್ಲಮೆಲ್ಲನೆ ಅಳಲು ಪ್ರಾರಂಭಮಾಡಿತು.

ಅದನ್ನು ಕೇಳಿ ಕಾವಲುಭಟರು; ಗಾಬರಿಯಿಂದ ಕಣ್ಣುಜ್ಜಿ ಕೊಂಡೆದ್ದು, ಓಟದ ನಡಿಗೆಯಿಂದ ಕಂಸನ ಬಳಿಗೆಹೋಗಿ, ದೇವಕಿ ಪ್ರಸವಿಸಿದ ಸಮಾಚಾರವನ್ನು ಹೇಳಿದರು. ಆ ಮಾತು ಕೇಳಿದ ಕೂಡಲೇ ಕಂಸನು ವೇಗವಾಗಿ ಕಾರಾಗೃಹಕ್ಕೆ ಬಂದು ವಸುದೇವನೊಂದಿಗೆ, "ಇದು ದೇವಕಿಯ ಎಂಟನೇ ಮಗು. ಸಾಕ್ಷಾತ್ ವಿಷ್ಣುಮೂರ್ತಿಯೇ ನನ್ನನ್ನು ಕೊಲ್ಲಲಿಕ್ಕಾಗಿ ಇವಳ ಎಂಟನೇ ಮಗುವಾಗಿ ಹುಟ್ಟಿದ್ದಾನಂತೆ! ಇವನನ್ನು

ಕೊಲ್ಲಲೇ ಬೇಕು! ಎಲ್ಲಿ ಮಗು ? ಇತ್ತ ತಾ!" ಎಂದನು ಆತುರದಿಂದ ಕೈಗಳನ್ನು ಚಾಚುತ್ತ.

ವಸುದೇವನು ಹೆದರುವವನಂತೆ ಹೋಗಿ ಆ ಹೆಣ್ಣು ಮಗುವನ್ನೆತ್ತಿ ತಂದು ಕಂಸನ ಕೈಗೆ ಕೊಟ್ಟನು. ಕಂಸನು ಆ ಮಗುವನ್ನು ನೋಡಿ, ಅನುಮಾನ ಪಡುತ್ತ ತನ್ನಲ್ಲಿ, "ಇದೇನಿದೇನು ? ವಿಚಿತ್ರವಾಗಿದೆ! ಆಕಾಶವಾಣಿಯ ಮಾತು ಸುಳ್ಳಾಗುವುದುಂಟೆ ? ಈ ವಸುದೇವನೇನಾದರೂ ಮಾಯೆ ಮಾಡಿದ್ದಾನೆಯೆ? ಸುತ್ತಲೂ ಬಲವಾದ ಕಾವಲಿನವರಿರುವಾಗ ಈ ಹೆಣ್ಣು ಮಗು ಹೇಗೆ ಬಂತು ? ಎಲ್ಲಿಂದ ಬಂತು ? ಗಂಡು ಮಗು ಎಲ್ಲಿಗೆ ಹೋಯಿತು ? ಆಶ್ಚರ್ಯವಾಗಿದೆ!" ಎಂದು ಕಳವಳಿಸುತ್ತ ನಾಲ್ಕು ಮೂಲೆಗಳನ್ನೂ ನೋಡಿದನು. ಆ ಮೇಲೆ ಆ ಮಗುವಿನ ಕಾಲುಗಳನ್ನು ಹಿಡಿದು ಬೀಸುತ್ತ, ಹೊರಗೆ ಒಯ್ದು ಕೊಲೆಗಲ್ಲಿನ ಮೇಲೆ ಅಪ್ಪಳಿಸಲು ಮೇಲೆತ್ತಿದನು.

ಆಗ ಆ ಮಗು ಕಂಸನ ಕೈಯಿಂದ ಜಾರಿ ಮೇಲೆ ಹಾರಿ, ದೇವತೆಯ ಆಕಾರ ಧರಿಸಿ ಮೃದು ಮಧುರವೂ, ಗಂಭೀರವೂ ಆದ ಸ್ವರದಿಂದ, "ಎಲೋ ದುಷ್ಟಾತ್ಮನೇ! ನನ್ನನ್ನು ಕೊಂದ ಮಾತ್ರಕ್ಕೆ ನಿನಗೇನೂ ಆಗದು. ನಿನ್ನನ್ನು ಕೊಲ್ಲುವ ವೀರನು ಹುಟ್ಟಿ ಬೆಳೆಯುತ್ತಾ ಇದ್ದಾನೆಂದು ತಿಳಿ. ಅವನಿಂದಲೇ ನಿನಗೆ ಮರಣ" ಎಂದು ಹೇಳಿ ಅದೃಶ್ಯವಾದಳು.

ಅದನ್ನು ಕೇಳಿ ಕಂಸನ ಬುದ್ಧಿ ನುಚ್ಚು ನೂರಾಗಿ ದಿಕ್ಕು ದಿಕ್ಕುಗಳಿಗೆ ಚೆದರಿದಂತಾಯಿತು. ಅವನು ಕೈ ಮೈಸುಟ್ಟುಕೊಂಡವನ ಹಾಗೆ ಒದರಾಡುತ್ತ ಮನೆಗೆ ಹೋಗಿ, ತನ್ನ ಹಿತರಾದ ಬಕ, ಧೇನುಕ, ವತ್ಸಕ, ಪ್ರಲಂಬ ಮೊದಲಾದವರೊಂದಿಗೆ ಹೀಗೆಂದನು :

"ಗೋಕುಲದಲ್ಲಿಯಾಗಲೀ ಮತ್ತೆಲ್ಲಿಯೇ ಆಗಲಿ, ಇತ್ತೀಚೆಗೆ ಹುಟ್ಟಿದ ಗಂಡು ಶಿಶುಗಳನ್ನು, ಕೊಂದು ಬಿಡಿರಿ. ಯಾವ ಅನುಮಾನಕ್ಕೂ ಆಸ್ಪದ ಕೊಡ ಬೇಡಿರಿ. ನೀವೆಲ್ಲರೂ ನನಗಾಗಿ ತುಂಬ ಎಚ್ಚರಿಕೆ



ಯಿಂದ ಈ ಕೆಲಸಮಾಡಬೇಕು. ವಿಷವನ್ನು ಸ್ರವಿಸುವ ಪೂತನಿಯನ್ನೂ ಕರೆದುಕೊಂಡು ಹೋಗಿರಿ."

ಅಲ್ಲಿ ಗೋಕುಲದಲ್ಲಿ ಬೆಳಗಾದ ಮೇಲೆ ನಂದನು ತನಗೆ ಪುತ್ರೋದಯವಾಯಿತೆಂದು ಸಂತೋಷಪಟ್ಟು ಉತ್ಸವಮಾಡಿಕೊಂಡಿದ್ದನು. ಈ ಸಮಾಚಾರ ನಾಲ್ಕು ದಿಕ್ಕುಗಳಿಗೂ ಹರಡಿತು. ಕಂಸನ ದೂತರು ಈ ವಾರ್ತೆಯನ್ನು ಕಂಸನಿಗೆ ತಿಳಿಸಿದರು. ಮೊದಲು ನಾರದನು ಕೂಡಾ ದೇವತೆಗಳು ಮಾಡಿದ ಪಥಕವನ್ನು ಕುರಿತು ಎಚ್ಚರಿಕೆ ಕೊಟ್ಟಿದ್ದನಷ್ಟೆ ? ಅದು ನೆನಪಿಗೆ ಬಂದು ಕಂಸನು ದೇವತೆಗಳು ಏನೋ ತಂತ್ರಮಾಡಿ ಅದಲು ಬದಲು ಮಾಡಿರಬೇಕೆಂದುಕೊಂಡು, ಗೋಕುಲದ ಮೇಲೆಯೇ ಗುರಿಯಿಟ್ಟನು.

ಮೊದಲು ಕೃಷ್ಣನಿಂದ ಪೂತನಿ ಸತ್ತಳು. ಅನಂತರ ಬೆಳೆಯುತ್ತಾ ಬರುವ ಕೃಷ್ಣನು ಮಹಾ ಬಲಶಾಲಿಗಳಾದ ಧೇನುಕ, ವತ್ಸಕ, ಬಕ, ಪ್ರಲಂಬರೆಂಬ ಮಾಯಾವಿಗಳನ್ನು ಕೊಂದನು. ಎಷ್ಟೋ ಕೃಷ್ಣನ



ಲೀಲೆಗಳು ಪ್ರಕಟವಾದುವು. ಗೋವುಗಳನ್ನು ರಕ್ಷಿಸಲಿಕ್ಕಾಗಿ ಗೋವರ್ಧನ ಬೆಟ್ಟವನ್ನೇ ಎತ್ತಿ ಹಿಡಿದನು. ಕೃಷ್ಣನ ಅದ್ಭುತ ಸಮಾಚಾರಗಳನ್ನೆಲ್ಲಾ ಕೇಳುತ್ತಾ ಬಂದ ಕಂಸನಿಗೆ ತನ್ನ ಮರಣವು ಅವನ ಕೈಯಲ್ಲೇ ಎಂಬ ಮಾತು ನಿಜವೆನಿಸಿತು. ಕೇಶಿ ಎಂಬ ಕಂಸನ ಬಂಟನಾದ ಮಹಾಬಲಿಷ್ಠನು ಕೃಷ್ಣನ ಕೈಯಲ್ಲಿ ಸತ್ತ ಮೇಲೆ, ಇನ್ನು ತಡಮಾಡಿದರೆ ಕೃಷ್ಣನ ಬಲವು ಇನ್ನಷ್ಟು ಹೆಚ್ಚುವುದೆಂದು ಅಂಜಿ ಕಂಸನು, ಕೃಷ್ಣನನ್ನು ಬೇಗನೇ ಕೊಲ್ಲಬೇಕೆಂದು ನಿಶ್ಚಯಿಸಿದನು. ಅವನು ಮರಣದ ಬಳಿಗೆ ಹೋಗುವುದಕ್ಕೆ ಬದಲಾಗಿ, ಅವನೇ ಮರಣವನ್ನು ತನ್ನ ಬಳಿಗೆ ಆಹ್ವಾನಿಸುವಂತೆ, ಕೃಷ್ಣನನ್ನು ಆಹ್ವಾನಿಸಲು ಒಂದು ಯೋಜನೆಯನ್ನು ಹಾಕಿದನು.

ತಾನು ಧನುರ್ಯಾಗ ಮಾಡುವೆನೆಂದು ಪ್ರಕಟಿಸಿ, ಅದಕ್ಕೆ ಬಲರಾಮನನ್ನೂ ಕೃಷ್ಣನನ್ನೂ ಕರೆದು ಕೊಂಡು ಬರಬೇಕೆಂದು, ರಥದ ಮೇಲೆ ಅಕ್ರೂರನನ್ನು ಗೋಕುಲಕ್ಕೆ ಕಳುಹಿಸಿದನು ಕಂಸ. ಅದರಂತೆ ಬಲರಾಮಕೃಷ್ಣರು ಅಕ್ರೂರನೊಂದಿಗೆ ಬಂದರು. ಧನುರ್ಯಾಗದಲ್ಲಿ ಸ್ಪರ್ಧಿಸಿ ಎಲ್ಲಾ ರಾಜರನ್ನೂ ಸೋಲಿಸಿದರು. ಮದ್ದಾನೆಯನ್ನು ಕೊಂದರು. ಚಾಣೂರ, ಮುಷ್ಟಿಕರೆಂಬ ಮಹಾ ಜಟ್ಟಿಗಳನ್ನು ಮಣ್ಣುಗೂಡಿಸಿದರು. ಶಲನನ್ನೂ, ಕೋಶಲನನ್ನೂ ಸಂಹರಿಸಿದರು. ಕಡೆಗೆ ಕಂಸನ ಜುಟ್ಟು ಹಿಡಿದು ಎಳೆದು ಕೆಡವಿ ಕೊಂದು ತೀರಿಸಿ, ಸೆರೆಮನೆಯ ಬಂಧನದಲ್ಲಿರುವ ದೇವಕೀ ವಸುದೇವರನ್ನು ಬಂಧಮುಕ್ತರನ್ನಾಗಿ ಮಾಡಿದರು. ಅನಂತರ ಕಂಸನಿಂದ ಸೆರೆಗೂಡಲ್ಪಟ್ಟ ಉಗ್ರಸೇನನನ್ನು ಕರೆದು ತಂದು ಸಿಂಹಾಸನದಲ್ಲಿ ಕೂಡಿಸಿದರು.

ಇಷ್ಟಾದ ಮೇಲೆ ವಸುದೇವನು ಬಲರಾಮಕೃಷ್ಣರಿಗೆ ಉಪನಯನಮಾಡಿ, ಸಾಂದೀಪನಿ ಎಂಬ ಗುರುವಿನ ಬಳಿಗೆ ವಿದ್ಯಾಭ್ಯಾಸಕ್ಕಾಗಿ ಕಳುಹಿಸಿದನು. ಹನ್ನೆರಡು ವರ್ಷ ತುಂಬುವಾಗ ಬಲರಾಮ ಕೃಷ್ಣರು ಎಲ್ಲಾ ವಿದ್ಯೆಗಳನ್ನೂ ಕಲಿತು ಮುಗಿಸಿದರು.

ಇಷ್ಟರಲ್ಲಿ ಜರಾಸಂಧನು ತನ್ನ ಅಳಿಯನಾದ ಕಂಸನು ಕೃಷ್ಣನ ಕೈಯಲ್ಲಿ ಸತ್ತನೆಂದು ತಿಳಿದು ಮಥುರಾ ನಗರದ ಮೇಲೆ ದಂಡೆತ್ತಿ ಬಂದನು. ಭಯಂಕರವಾದ ಯುದ್ಧದಲ್ಲಿ ಜರಾಸಂಧನು ಆಗ ಸೋತನು. ಆ ಮೇಲೆ ಜರಾಸಂಧನು ಬಿಡದೆ ಏಳುಸಾರಿ ಹೆಚ್ಚೆಚ್ಚು ಬಲದೊಂದಿಗೆ ಯುದ್ಧಕ್ಕೆ ಬಂದುದು ಸಾಲದೆ, ಮ್ಲೇಚ್ಛರಾಜನಾದ ಕಾಲಯವನನನ್ನೂ ಕೆರಳಿಸಿ ಮಥುರೆಯ ಮೇಲೆ ಅವನಿಂದಲೂ ದಂಡೆತ್ತಿಸಿದನು. ಆಗ ಕೃಷ್ಣನು ಯಾದವರನ್ನೆಲ್ಲಾ ಸಮಾವೇಶಗೊಳಿಸಿ, "ದುಷ್ಟನಾದ ಜರಾಸಂಧನು ಸಾಧಾರಣದಲ್ಲಿ ಬಿಡುವವನಲ್ಲ. ಈಗ ಕಾಲಯವನನನ್ನು ಕಳುಹಿಸಿದ್ದಾನೆ. ಇವನು ಕೂಡಾ ತುಂಬಾ ಬಲವಂತನು. ಇವನ ಸೇನೆಯೂ ಬಹಳ ದೊಡ್ಡದು. ಆದುದರಿಂದ ಈ ದುಷ್ಟನೊಂದಿಗೆ ಯುದ್ಧಮಾಡುವುದು ಬಹಳ ಕಷ್ಟ.

ಪ್ರಾಣವನ್ನು ಕಾಪಾಡಿಕೊಳ್ಳಲಿಕ್ಕಾಗಿ ಸಂಪತ್ತನ್ನೂ ಮನೆಯನ್ನೂ ಬಿಟ್ಟುಕೊಡುವುದು ತಪ್ಪೆನಿಸುವುದಿಲ್ಲ. ಯಾವ ಸ್ಥಳದಲ್ಲಿ ವಾಸವಾಗಿರಲು ಸಾಧ್ಯವೋ ಅದೇ ತಮ್ಮ ಪಿತ್ರಾರ್ಜಿತವೆಂದುಕೊಳ್ಳಬೇಕು. ಸ್ವಸ್ಥಳವೆನಿಸುವಂತಹುದು ಎಂದೆಂದಿಗೂ ಅಪಾಯಕರವಾದಾಗ, ಗುಡ್ಡಗಾಡುಗಳ ಕಡೆಗಾದರೂ ಹೋಗಿ ನೆಮ್ಮದಿಯಾಗಿರುವುದು ಒಳ್ಳೆಯದೆಂದು ಹಿರಿಯರು ಹೇಳುತ್ತಾರೆ. ಇಂತಹ ಭಯದಿಂದ ತಾನೇ ವಿಷ್ಣು ಸಮುದ್ರದ ಮಧ್ಯಕ್ಕೆ ಹೋಗಿ ಹಾವಿನ ಮೇಲೆ ಮಲಗಿಕೊಳ್ಳುತ್ತಾನೆ! ಶಿವನು ರಜತಾದ್ರಿಯ ಗುಹೆಯೊಳಗೆ ವಾಸಮಾಡುತ್ತಾನೆ! ಇನ್ನು ನಮ್ಮಂಥವರ ಸಂಗತಿ ಹೇಳುವುದೇನಿದೆ? ಅಂತಲೇ ನಾವೆಲ್ಲಾ ಬೇಗನೇ ಈ ಮಧುರಾ ನಗರವನ್ನು ಬಿಟ್ಟು ಹೊರಟು ಹೋಗಿ, ದ್ವಾರಕಾಪುರಿಯಲ್ಲಿ ಸುಖವಾಗಿರುವುದು ಒಳ್ಳೆಯದು. ದ್ವಾರಕಾಪುರವು ರೈವತಾದ್ರಿಗೆ ಸಮೀಪವಾಗಿ ಸಮುದ್ರ ತೀರದಲ್ಲಿದೆಯೆಂದೂ, ಬಹಳ ಸುಂದರವಾದ ಪ್ರದೇಶವೆಂದೂ ನಮ್ಮ ಗರುತ್ಮಂತನು ಹೇಳುತ್ತಾನೆ" ಎಂದನು.

ಕೃಷ್ಣನ ಮಾತಿಗೆ ಯಾದವರೆಲ್ಲರೂ ಒಪ್ಪಿ, ತಮ್ಮ ತಮ್ಮ ಕುಟುಂಬಗಳೊಂದಿಗೆ ಬಲರಾಮಕೃಷ್ಣರ ಜತೆಯಲ್ಲಿ ಹೊರಟು, ಕೆಲವು ದಿನಗಳ ಮೇಲೆ ದ್ವಾರಕೆಯನ್ನು ಸೇರಿದರು. ಅಲ್ಲಿ ಶಿಥಿಲವಾಗಿದ್ದ ಮನೆಗಳನ್ನೂ ಮಂದಿರಗಳನ್ನೂ ಸರಿಮಾಡಿಕೊಂಡು, ವಾಸಮಾಡಲು ತೊಡಗಿದರು. ಮಧುರಾಪುರವು ಕೇವಲ ನಿರ್ಜನ ಪ್ರಾಂತವಾಯಿತು.

ಬಲರಾಮನೂ ಕೃಷ್ಣನೂ ಕಾಲಯವನನನ್ನು ಗುರಿಯಲ್ಲಿಟ್ಟುಕೊಂಡು, ನಿರ್ಜನವಾದ ಮಧುರೆಗೆ ಹಿಂದಿರುಗಿ ಬಂದು ಹೊಂಚು ಹಾಕಿಕೊಂಡಿದ್ದರು. ಹಾಗಿರುವಾಗ ಕಾಲಯವನನು ತಿರುಗಿ ಮಧುಗೆ ಬಂದು ಮುತ್ತಿಗೆ ಹಾಕಿದನು. ಆಗ ಕೃಷ್ಣನು ನಗರವನ್ನು ಬಿಟ್ಟು ಅತ್ಯಂತ ವೇಗದಿಂದ ಎಲ್ಲಿಗೋ



ಓಡಿಹೋಗಲು ತೊಡಗಿದನು. ಅದನ್ನು ನೋಡಿ ಕೃಷ್ಣನು ತಪ್ಪಿಸಿಕೊಂಡು ಓಡುತ್ತಾನೆಂದುಕೊಂಡು ಕಾಲಯವನನು ಕೃಷ್ಣನನ್ನು ಓಡಿಸಿಕೊಂಡು ಹೋದನು. ಹೀಗೆ ಅವರಿಬ್ಬರೂ ಓಡುತ್ತಾ ಮುಚುಕುಂದನೆಂಬ ಮುನಿಯ ಆಶ್ರಮದ ಹತ್ತಿರ ಹೋದರು. ಕೃಷ್ಣನು ಆಶ್ರಮದೊಳಗೆ ಹೊಕ್ಕು ಎಲ್ಲಿಯೋ ಅಡಗಿಕೊಂಡನು. ಕಾಲಯವನನೂ ಆಶ್ರಮದೊಳಗೆ ಹೊಕ್ಕು ಕೃಷ್ಣನನ್ನು ಹುಡುಕುತ್ತ, ಮುಚುಕುಂದ ಮುನಿ ಧ್ಯಾನ ಮುದ್ರೆಯಲ್ಲಿರುವುದನ್ನರಿಯದೆ, ಕಾಲಿನಿಂದ ಒದೆದನು. ಕೂಡಲೇ ಎಚ್ಚರಕ್ಕೆ ಬಂದ ಮುನಿ ತನ್ನನ್ನು ತುಳಿದ ಕಾಲಯವನನನ್ನು ದುರುಗುಟ್ಟಿ ನೋಡಲು, ಅವನ ದೃಷ್ಟಿಯಲ್ಲಿ ಹೊರಟ ಕೋಪಾಗ್ನಿಯಿಂದ ಕಾಲಯವನನು ಸುಟ್ಟು ಬೂದಿಯಾದನು.

ಆ ಮೇಲೆ ಕೃಷ್ಣನು ಬಲರಾಮನೊಂದಿಗೆ ಮಧುರೆಯನ್ನು ಬಿಟ್ಟು ದ್ವಾರಕೆಗೆ ಹೋಗಿ ತಮ್ಮವ



ರನ್ನು ಸೇರಿಕೊಂಡನು. ಅಲ್ಲಿ ಉಗ್ರಸೇನನ ಪರಿಪಾಲನೆಯಲ್ಲಿರುವಾಗ, ಕೃಷ್ಣನಿಗೆ ರುಕ್ಮಿಣಿಯನ್ನು ಮದುವೆಯಾಗುವ ಯೋಗ ಉಂಟಾಯಿತು.

ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಟ್ಟು ಮದುವೆ ಮಾಡಲು ಅವಳ ಅಣ್ಣ ರುಕ್ಮಿ ಎಲ್ಲಾ ಏರ್ಪಾಡುಗಳನ್ನೂ ಮಾಡಿದ್ದನು. ಅದು ರುಕ್ಮಿಣಿಗೆ ಇಷ್ಟವಿಲ್ಲದೆ, ಅವಳು ಕೃಷ್ಣನೇ ಪತಿಯಾಗಬೇಕೆಂದು ನೆನೆದುಕೊಂಡಿದ್ದಳು. ಇದನ್ನು ತಿಳಿದು ಕೃಷ್ಣನು ರಾಕ್ಷಸ ವಿವಾಹ ಪದ್ಧತಿಯಲ್ಲಿ ಅವಳನ್ನು ತಾನೇ ಮದುವೆಯಾದನು. ಇನ್ನೂ ಅನೇಕರನ್ನು ಕೃಷ್ಣನು ಮದುವೆಯಾದನು. ಜಾಂಬವತಿ, ಮಿತ್ರವಿಂದಾ, ಸತ್ಯಭಾಮೆ, ನಾಗ್ನಜಿತಿ, ಭದ್ರಾ, ಲಕ್ಷಣಾ, ಕಾಳಿಂದೀ ಇವರೆಲ್ಲ ಕೃಷ್ಣನ ಮುಖ್ಯ ಪತ್ನಿಯರು.

ಮುಂದೆ ರುಕ್ಮಿಣಿ ಪ್ರದ್ಯುಮ್ನನೆಂಬ ಒಬ್ಬ ಕುಮಾರನನ್ನು ಹಡೆದಳು. ಆ ಹುಡುಗನಿಗೆ ನಾಮಕರಣೋತ್ಸವವು ನಡೆದ ಅನಂತರ, ಶಂಬರನೆಂಬ ರಾಕ್ಷಸನು ಆ ಹಸುಕಂದನನ್ನು ಅಪಹರಿಸಿಕೊಂಡು ಹೋಗಿ ತನ್ನ ಮಗಳಾದ ಮಾಯಾವತಿಯ ಕೈಗೆ ಕೊಟ್ಟನು.

ಈ ಘಟನೆಯಿಂದ ಕೃಷ್ಣನಿಗೆ ದಿಕ್ಕು ತೋಚದಂತಾಯಿತು. ಅವನು ಜಗದಂಬೆಯನ್ನು ಧ್ಯಾನಿಸುತ್ತ ಹೀಗೆ ಪ್ರಾರ್ಥಿಸಿಕೊಂಡನು. "ತಾಯೀ! ಯಾವನೋ ದುಷ್ಟನು ಮಾಯಾ ರೂಪದಲ್ಲಿ ಅಂತಃಪುರದೊಳಗೆ ಪ್ರವೇಶಿಸಿ ತೊಟ್ಟಿಲು ಮಗುವನ್ನು ಕದ್ದುಕೊಂಡು ಹೋದನು. ಇದರಿಂದ ನನಗಿರುವ ಮರ್ಯಾದೆಯೇ ಹೋಯಿತು. ಅಮ್ಮಾ, ನಿನ್ನ ದಾಸನಾದ ನಾನು ಈ ದೀನಸ್ಥಿತಿಯಲ್ಲಿರುವುದನ್ನು ನೋಡಿದರೆ ನಿನಗೂ ನಾಚಿಕೆಯಲ್ಲವೆ? ನನ್ನ ಮನೆ ನಗರದ ಮಧ್ಯದಲ್ಲೇ ಇರುವಾಗ, ಸುತ್ತಲೂ ಬಲವಾದ ಕಾವಲಿರುವಾಗ ಮಗು ಮಾಯವಾಗಿ ಹೋಗುವುದೆಂದರೇನು? ಯಾರನ್ನೂ ದೂರಲಾರೆ! ಇದು ನನ್ನದೇ ಏನೋ ಪ್ರಾರಬ್ಧ! ನಾನು ಬೇರೆ ಊರಿಗೆ ಹೋದರೂ ಯಾದವರೆಲ್ಲಾ ಎಚ್ಚರದಲ್ಲಿ ನೋಡಿಕೊಳ್ಳುತ್ತಲೇ ಇರುತ್ತಾರೆ. ನಿನ್ನ ಮಾಯೆಯ ಬಲವಿಲ್ಲದಿದ್ದರೆ ಯಾವನಿಂದಲೂ ನನ್ನ ಮಗನನ್ನು ಕದ್ದೊಯ್ಯಲು ಸಾಧ್ಯವಿಲ್ಲ! ಅಮ್ಮಾ, ನನಗೆ ಮಗನನ್ನು ಕೊಟ್ಟು ಆನಂದಗೊಳಿಸಿದ ನೀನೇ ಈ ಮನೋವೇದನೆಯನ್ನು ಉಂಟುಮಾಡಬಹುದೆ? ನನ್ನ ಮಗನು ಮತ್ತೆ ಬರುವ ಹಾಗೆ ಮಾಡು."

ಹೀಗೆ ಪರಿತಪಿಸುವ ಕೃಷ್ಣನ ಮುಂದೆ ಮಹಾದೇವಿ ಸಾಕ್ಷಾತ್ಕರಿಸಿ, "ಕೃಷ್ಣಾ, ಎಲ್ಲದಕ್ಕೂ ಕಾರಣವಿದೆ. ಶಾಪದ ಕಾರಣದಿಂದ ನಿನ್ನ ಮಗನು ಶಂಬರನಿಂದ ಅಪಹರಿಸಲ್ಪಟ್ಟು ಅವನ ಮನೆಯಲ್ಲಿದ್ದಾನೆ. ಅವನು ಹದಿನಾರನೇ ವಯಸ್ಸಿನಲ್ಲಿ ಶಂಬರನನ್ನು ಕೊಂದು ನಿನ್ನ ಬಳಿಗೆ ತಿರುಗಿ ಬರುತ್ತಾನೆ. ಚಿಂತಿಸಬೇಡ" ಎಂದು ಹೇಳಿದಳು. ಇದರಿಂದ ರುಕ್ಮಿಣೀ ಕೃಷ್ಣರ ಚಿಂತೆ ಪರಿಹಾರವಾಯಿತು.

ನಾರಾಯಣಾಂಶದಿಂದ ಹುಟ್ಟಿದ ಕೃಷ್ಣನಿಗೆ ಗೊತ್ತಾಗದ ಹಾಗೆ ಅಂತಃಪುರದೊಳಗಿದ್ದ ಮಗುವನ್ನು ಹೇಗೆ ಅಪಹರಿಸಲು ಸಾಧ್ಯ? ಆದರೆ ಮಹಾದೇವಿಯ ಮಹಿಮೆ ತಿಳಿದವರಿಗೆ ಆಶ್ಚರ್ಯವೇನೂ ಆಗದು. ಮನುಷ್ಯರು ಮಾತ್ರವಲ್ಲ, ದೇವತೆಗಳೂ ದಾನವರೂ ಸಹ ಆವಳ ಮಾಯೆಯನ್ನು ಅಧಿಗಮಿಸುವವರಲ್ಲ. ಅರಣ್ಯದಲ್ಲಿ ತನಗೆ ಕಾಂಚನ ಮೃಗವೊಂದು ಗಂಟುಬಿದ್ದು, ತನ್ನ ಹೆಂಡತಿ ಅಪಹರಿಸಲ್ಪಡುವಳೆಂದು ತಿಳಿದುಕೊಳ್ಳಲು ರಾಮನಿಗೆ ಸಾಧ್ಯವಾಯಿತೆ? ಅವನಿಗೆ ತನ್ನ ತಂದೆಯ ಮರಣವನ್ನು ಯಾರೋ ಹೇಳಿದ ಹೊರತು ಗೊತ್ತಾಗಲಿಲ್ಲ. ಕಡೆಗೆ ಸೀತೆ ಇಂಥಲ್ಲಿ ಇರುವಳೆಂದು ಕೂಡಾ ರಾಮನಿಂದ ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ. ಯಾರಾರ ಸಹಾಯದಿಂದಲೋ ತಿಳಿಯಬೇಕಾಯಿತು. ತನ್ನ ಸ್ವಂತ ಮಕ್ಕಳಾದ ಕುಶಲವರನ್ನು ಕೂಡಾ ವಾಲ್ಮೀಕಿಯಿಂದಲೇ ರಾಮನು ತಿಳಿದನು.

ಮಾನವ ಶರೀರವನ್ನು ಧರಿಸಿದ ಮೇಲೆ ಮಾನವ ಧರ್ಮಗಳೂ ಅಂಟಿಕೊಂಡುಬಿಡುತ್ತವೆ. ಆದುದರಿಂದಲೇ ಕೃಷ್ಣನು ಹುಟ್ಟಿದ ಮರುಕ್ಷಣದಲ್ಲೇ ಕಂಸನ ಭಯದಿಂದ ಗೋಕುಲದಲ್ಲಿ ಅಡಗಿಕೊಂಡನು. ದೊಡ್ಡವನಾದ ಮೇಲೆ ಜರಾಸಂಧನ ಭಯದಿಂದ ದ್ವಾರಕೆಗೆ ಹೋಗಿ ತಲೆ ಮರೆಸಿಕೊಂಡನು. ಶಿಶುಪಾಲನ ಹೆಂಡತಿಯಾಗಬೇಕಾಗಿದ್ದವಳನ್ನು ಅಪಹರಿಸಿಕೊಂಡು ಹೋಗಿ ಮದುವೆ ಮಾಡಿಕೊಂಡದ್ದು ಕೂಡಾ ಕೃಷ್ಣನದು ತಪ್ಪೇ ಅಲ್ಲವೇ? ಇದೆಲ್ಲಾ ಮಾನವ ಧರ್ಮಕ್ಕೆ ಸಹಜವಾದ ಕೃತಿಗಳೇ. ಇಂತಹ ಎಷ್ಟೋ ಕೆಲಸಗಳನ್ನು ಕೃಷ್ಣನು ಮಾಡಿರುವನು.

ಹೆಂಡತಿಗೆ ವಿಧೇಯನಾಗಿ ಸತ್ಯಭಾಮೆ ಕೇಳಿದಳೆಂದು ಕೃಷ್ಣನು ಅಮರಾವತಿಯಿಂದ ಪಾರಿಜಾತ ವೃಕ್ಷವನ್ನು ಎತ್ತಿಕೊಂಡು ಬರಲು ಇಂದ್ರನೊಡನೆ ಯುದ್ಧಮಾಡಿದನು. ಜಾಂಬವತಿ ಮಕ್ಕಳು ಬೇಕೆಂದು ಬಯಸಿದುದಕ್ಕಾಗಿ ಕೃಷ್ಣನು ಉಪಮನ್ಯುವಿನ ಆಶ್ರಮದಲ್ಲಿ ತಪಸ್ಸು ಮಾಡಿದನು. ಅದಕ್ಕಾಗಿ ಪಾಶುಪತವೆಂಬ ವ್ರತ ಹಿಡಿದು ಶಿವನನ್ನು ಕುರಿತು ಕೃಷ್ಣನು ತಪಸ್ಸು ಮಾಡಿದರೆ, ಶಿವನು ಪಾರ್ವತೀ ಸಮೇತ ಪ್ರತ್ಯಕ್ಷನಾಗಿ, ಕೃಷ್ಣನ ಕೋರಿಕೆಯನ್ನು ತಿಳಿದುಕೊಂಡು, "ನಿನಗೆ ಹದಿನಾರು ಸಾವಿರದ ಐವತ್ತು ಮಂದಿ ಪತ್ನಿಯರಿದ್ದಾರೆ. ಒಬ್ಬೊಬ್ಬರಿಗೂ ಹತ್ತು ಹತ್ತು ಮಂದಿ ಮಕ್ಕಳು ಹುಟ್ಟುತ್ತಾರೆ. ನೀನು ನೂರು ವರ್ಷ ಬದುಕುವಿ" ಎಂದು ಆಶೀರ್ವಾದ ಮಾಡಿದನು. ತರುವಾಯ ಕೃಷ್ಣನು ಉಪಮನ್ಯುವಿಗೆ ನಮಸ್ಕರಿಸಿ ದ್ವಾರಕೆಗೆ ಹಿಂದಿರುಗಿ ಸುಖವಾಗಿದ್ದನು. ಆದುದರಿಂದ ಮಹಾದೇವಿಯ ಹೊರತು ಮಾಯೆಗೆ ಒಳಪಡದವರಾರೂ ಪ್ರಪಂಚದಲ್ಲಿಲ್ಲ.





# ದೇವೀಭಾಗವತ

ರಂಭ ಮತ್ತು ಕರಂಭ ಎಂಬವರು ದನುವಿನ ಮಗಂದಿರು. ಇವರಿಗೆ ಬಹಳ ಕಾಲದವರೆಗೆ ಮಕ್ಕಳಿಲ್ಲದೆ, ಮಕ್ಕಳ ಆಸೆಯಿಂದ ಅನೇಕ ವರ್ಷಗಳ ವರೆಗೆ ತೀವ್ರ ತಪಸ್ಸು ಮಾಡಿದರು. ಅವರಲ್ಲಿ ಕರಂಭನು ಪಂಚನದ ತೀರ್ಥದಲ್ಲಿ ಮುಳುಗಿಕೊಂಡಿದ್ದು ತಪಸ್ಸು ಮಾಡಿದನು. ರಂಭನು ಒಂದು ಎತ್ತರವಾದ ಮರವನ್ನೇರಿ ತಪಸ್ಸುಮಾಡಿದನು.

ಈ ಸಮಾಚಾರ ಇಂದ್ರನಿಗೆ ಗೊತ್ತಾಯಿತು. ಯಾರು ತಪಸ್ಸಿಗೆ ಕುಳಿತರೂ ಇಂದ್ರನಿಗೆ ಹೆದರಿಕೆಯಾಗಿ ಬೆವರ ತೊಡಗುತ್ತದೆ. ಅವನು ಮೊಸಳೆಯ ರೂಪದಲ್ಲಿ ಪಂಚನದದೊಳಗೆ ಪ್ರವೇಶಿಸಿ ಕರಂಭನನ್ನು ಕೊಂದುಬಿಟ್ಟನು. ತನ್ನ ತಮ್ಮನು ಸತ್ತುಹೋದುದನ್ನು ನೋಡಿ ರಂಭನು ಶೋಕಾವೇಶದಿಂದ ತನ್ನ ತಲೆಯನ್ನೇ ಕಡಿದು ಅಗ್ನಿಗೆ ಹಾಕಲು ಕೈಯಲ್ಲಿ ಕತ್ತಿಯನ್ನೆತ್ತಿದನು.

ಆಗ ಅಗ್ನಿದೇವನು ಪ್ರತ್ಯಕ್ಷನಾಗಿ, "ಏಕೆ ಆತ್ಮಹತ್ಯ ಮಾಡಿಕೊಳ್ಳುವಿ ? ಅದರಿಂದ ಇಹವೂ ಇಲ್ಲ ಪರವೂ ಇಲ್ಲ. ನಿನ್ನ ತಪಸ್ಸಿಗೆ ಮೆಚ್ಚಿದ್ದೇನೆ. ವರ ಕೇಳು. ಕೊಡುತ್ತೇನೆ " ಎಂದನು.

"ದೇವಾ ! ನಿನಗೆ ನನ್ನ ಮೇಲೆ ಅನುಗ್ರಹ ವಿದ್ದರೆ ನನಗೆ ಒಬ್ಬ ಮಗನನ್ನು ಕೊಡು. ಅವನು ಕಾಮರೂಪಿಯಾಗಿ. ದೇವದಾನವ ಮಾನವರುಗಳನ್ನು ಜಯಿಸುವವನಾಗಿ. ಅವರಾರಿಂದಲೂ ಸೋಲಿಸಲಾಗದವನಾಗಿ ಇರಬೇಕು " ಎಂದನು.

"ಹಾಗೆಯೇ ಆಗಲಿ. ನಿನಗೆ ಯಾವಳ ಮೇಲೆ ಪ್ರೀತಿಯಾಗುವುದೋ ಅವಳಿಂದ ಅಂತಹ ಮಗನೇ ಹುಟ್ಟುತ್ತಾನೆ" ಎಂದು ವರಕೊಟ್ಟು ಅಗ್ನಿಹೋತ್ರನು ಅದೃಶ್ಯನಾದನು.

ರಂಭನು ತಪಸ್ಸು ಮುಗಿಸಿ ಹಿಂದಿರುಗಿ ಬರುತ್ತ, ಯಕ್ಷರ ಅಧೀನದಲ್ಲಿದ್ದ ಒಂದು ಪ್ರದೇಶವನ್ನು ತಲಪಿದನು. ಅತ್ಯಂತ ರಮಣೀಯವಾದ ಆ ವನ ಪ್ರದೇಶದಲ್ಲಿ ಸುಂದರವಾದ ಒಂದು ಎಮ್ಮೆಯನ್ನು ನೋಡಿದನು. ಅವನಿಗೆ ಅದರ ಮೇಲೆ ಪ್ರೀತಿಯೂ ಮೋಹವೂ ಉಂಟಾಯಿತು. ಆ ಮಹಿಷಿಯನ್ನೇ

## ೧೪. ಮಹಿಷಾಸುರ ವಧೆ



ಪತ್ನಿಯನ್ನಾಗಿ ವರಿಸಿಕೊಂಡು, ಪಾತಾಳಕ್ಕೆ ಕರೆದೊಯ್ದನು. ಆ ಮಹಿಷಿ ಗರ್ಭ ಧರಿಸಿತು.

ಪಾತಾಳದಲ್ಲಿ ಆ ಮಹಿಷಿಯನ್ನು ನೋಡಿ ಮತ್ತೊಂದು ಮಹಿಷವು ಮೋಹಗೊಂಡು ಅದನ್ನು ಆಕ್ರಮಿಸಿತು. ಅದನ್ನು ನೋಡಿ ರಂಭನು ಆಗ್ರಹಾವೇಶದಿಂದ ಆ ಮಹಿಷವನ್ನು ಬಲವಾಗಿ ಹೊಡೆದನು. ಅದರಿಂದ ರೋಷಗೊಂಡ ಆ ಮಹಿಷವು ರಂಭನನ್ನು ತನ್ನ ಕೊಂಬುಗಳಿಂದಕಿವಿದು ಮೇಲೆತ್ತಿ ನೆಲಕ್ಕೆ ಅಪ್ಪಳಿಸಿ ಕೊಂದುಬಿಟ್ಟಿತು. ಅದನ್ನು ನೋಡಿ ಮಹಿಷಿ ರಂಭನಿಗಾಗಿ ಚಿತಿಯನ್ನು ಪೇರಿಸಿ ಆ ಬೆಂಕಿಯಲ್ಲಿ ತಾನೂ ಬಿದ್ದು ರಂಭನೊಂದಿಗೇ ಸುಟ್ಟುಹೋಯಿತು. ಆ ಚಿತಿಯಿಂದ ಇಬ್ಬರು ರಾಕ್ಷಸರು ಹೊರಟು ಬಂದರು. ಒಬ್ಬನ ಹೆಸರು ಮಹಿಷಾಸುರ, ಇನ್ನೊಬ್ಬನು ರಕ್ತಬೀಜಾಸುರ.

ಪಾತಾಳಲೋಕದಲ್ಲಿದ್ದ ರಾಕ್ಷಸರೆಲ್ಲಾ ಮಹಿಷಾಸುರನನ್ನು ತಮ್ಮ ರಾಜನನ್ನಾಗಿ ಆರಿಸಿಕೊಂಡರು. ಅವನ ಕೈಕೆಳಗೆ ಚಿಕ್ಷರ, ತಾಮ್ರ, ಅಸಿಲೋಮ, ಸುದರ್ಕ, ಬಿಡಾಲ, ಬಾಷ್ಕಲ, ತ್ರಿಣೇತ್ರ, ಕಾಲಬಂಧಕ ಎಂಬ ವೀರಾಧಿವೀರರು ಸೇನಾಪತಿಗಳಾಗಿದ್ದರು. ಅವರ ಸಹಾಯದಿಂದ ಮಹಿಷಾಸುರನು ಭೂಲೋಕವನ್ನೆಲ್ಲಾ ಗೆದ್ದು ತನ್ನಿಚ್ಛೆಯಂತೆ ಆಳತೊಡಗಿದನು. ಯಜ್ಞ ಕರ್ಮಗಳೆಲ್ಲಾ ರಾಕ್ಷಸರಿಂದ ಧ್ವಂಸವಾಗ ತೊಡಗಿದುವು. ಆಮೇಲೆ ಮಹಿಷಾಸುರನು ಕಾಂಚನ ಪರ್ವತದ ಮೇಲೆ ಹೋಗಿ ದೊಡ್ಡ ತಪಸ್ಸುಮಾಡಿ ಬ್ರಹ್ಮದೇವನನ್ನು ಪ್ರತ್ಯಕ್ಷ ಮಾಡಿಕೊಂಡು, "ಮಹಾತ್ಮಾ, ನನಗೆ ಸಾವೇ ಇಲ್ಲದಂತೆ ವರ ಕೊಡು" ಎಂದು ಕೇಳಿದನು.

ಅದಕ್ಕೆ ಬ್ರಹ್ಮನು, "ಹಾಗೆ ವರ ಕೊಡುವುದು ನನ್ನ ಕಾರ್ಯಕ್ಕೆ ವಿರುದ್ಧ. ಹುಟ್ಟಿದವರೆಲ್ಲಾ ಒಂದು ದಿನ ಸಾಯಲೇಬೇಕೆಂಬುದು ನನ್ನ ಮೂಲ ವಿಧಿ. ಸತ್ತವರು ಮತ್ತೆ ಹುಟ್ಟುವುದೂ ಆ ವಿಧಿಯ ಪದ್ಧತಿ. ಹೀಗಿರುವಾಗ ಅಂತಹ ವರ ಕೊಡಲು ಹೇಗೆ ಸಾಧ್ಯ? ಭೂಮಿಗೂ, ಸಮುದ್ರಕ್ಕೂ, ಬೆಟ್ಟಗಳಿಗೂ ಸಹ ನಾಶವೆಂಬುದು ಇರುವಾಗ, ಜೀವಿಗಳಿಗೆ ಅಂಥ ವರ ಹೇಗೆ ದಕ್ಕೀತು?" ಎಂದನು.

ಆಗ ಮಹಿಷನು, "ಹಾಗಾದರೆ ದೇವದಾನವ ಮಾನವರೊಳಗೆ ಯಾವ ಪುರುಷರಿಂದಲೂ ನನಗೆ ಮರಣ ಬಾರದಂತೆ ವರ ಕೊಡು" ಎಂದು ಕೇಳಿದನು.

"ಹಾಗೆಯೇ ಕೊಟ್ಟಿದ್ದೇನೆ. ನಿನ್ನ ತಂದೆಯೂ ನಿನಗಾಗಿ ಈ ವರವನ್ನೇ ಪಡೆದಿದ್ದಾನೆ" ಎಂದು ನುಡಿದು ಬ್ರಹ್ಮನು ಅಂತರ್ಧಾನನಾದನು. ಅಬಲೆಯಾದ ಸ್ತ್ರೀಯ ಮೂಲಕ ತನಗೆ ಸಾವು ಬರಬಾರದೆಂಬ ಯೋಚನೆ ಮಹಿಷನಿಗೆ ಬರಲಿಲ್ಲ. ಹೀಗೆ ವರವನ್ನು ಪಡೆದು ಮದೋನ್ಮತ್ತನಾಗಿ ಬಂದ ಮಹಿಷಾಸುರನು, ಒಬ್ಬ ಸೇವಕನನ್ನು ಕರೆದು, "ನೀನು ಸ್ವರ್ಗಕ್ಕೆಹೋಗಿ ಸುಮ್ಮನೆ ಯುದ್ಧಮಾಡಿ ಸೋಲುವುದು ಬೇಡವೆಂದು ಇಂದ್ರನಿಗೆ ಹೇಳು.

ಸ್ವರ್ಗಲೋಕವನ್ನು ನನ್ನ ಕೈಗೆ ಒಪ್ಪಿಸಲು ಹೇಳು. ಬಲವಿದೆ ಎಂಬ ನಂಬುಗೆಯಿದ್ದರೆ ಯುದ್ಧಕ್ಕೇ ಬರಲಿ : ಸಂಧಾನ ಮಾಡಲಿಲ್ಲವೆಂಬ ಅಪವಾದ ನನಗೆ ಬೇಡ" ಎಂದು ಹೇಳಿ ಕಳುಹಿಸಿದನು.

ಮಹಿಷಾಸುರನ ದೂತನು ಸ್ವರ್ಗಲೋಕಕ್ಕೆ ಹೋಗಿ ಇಂದ್ರನನ್ನು ನೋಡಿ. "ಎಲೈ ದೇವೇಂದ್ರನೇ ! ನಾನು ಮಹಿಷಾಸುರನ ದೂತನು. ಆತನು ನನ್ನ ಮೂಲಕ ನಿನಗೆ ಹೀಗೆ ಹೇಳಿ ಕಳುಹಿಸಿದ್ದಾನೆ. ನೀನು ಇಲ್ಲದ ಸಲ್ಲದ ಅತಿಶಯುಗಳಿಗೆ ಹೋಗದೆ. ಅಭಿಮಾನಕ್ಕೆ ಬೀಳದೆ ನಿನ್ನ ನಗರವನ್ನು ಮಹಿಷಾಸುರನ ವಶಕ್ಕೆ ಕೊಟ್ಟು, ಆತನ ಸೇವಕನಾಗಿ ಸುಖವಾಗಿ ಬದುಕು. ಅದಕ್ಕೆ ಇಷ್ಟವಿಲ್ಲದೆ ಯುದ್ಧ ಮಾಡುವಿಯಾದರೆ, ಅಷ್ಟು ಶಕ್ತಿ ನಿನಗಿದೆಯೇ ನೋಡಿಕೊಂಡು ನಿರ್ಣಯಿಸಿ ಹೇಳಿಬಿಡು. ಅದಕ್ಕಾಗಿ ಅವಕಾಶ ಕೇಳಿ ಕಾಲಹರಣ ಮಾಡಲು ಸಾಧ್ಯವಿಲ್ಲ. ಈಗಲೇ ಹೇಳಿಬಿಡು" ಎಂದನು.

"ಎಲೋ ಮದಾಂಧನಾದ ರಾಕ್ಷಸಾಧಮ ! ನಿನ್ನ ಯಜಮಾನನ ಕಣ್ಣುಗಳು ನೆತ್ತಿಗೇರಿದುವೇನು ? ನನ್ನ ಇದಿರಿಗೇ ಬಂದು ನನ್ನ ಮುಂದೆ ಹೀಗೆ ಹೇಳುವೆಯಾ ? ಅವನ ಸಂಗತಿಯನ್ನು ನಾನು ನೋಡಿಕೊಳ್ಳುತ್ತೇನೆ. ನೀನು ದೂತನಾದುದರಿಂದ ಬದುಕಿ ಉಳಿದಿರುವಿ ! ತಿರುಗಿ ಹೋಗಿ ನಾನು ಹೇಳಿದೆನೆಂದು ಹೀಗೆ ಹೇಳು. ಎಲೋ ಹರಾಮಿ ಕೋಣನೇ ! ಯುದ್ಧದಲ್ಲಿ ನನ್ನನ್ನು ಜಯಿಸಬೇಕೆಂಬ ಕೋರಿಕೆ ಹುಟ್ಟಿತೇನು ನಿನಗೆ ? ಕಂಡಕಂಡ ಹಾಗೆ ಹುಲ್ಲುಮೇದು ವಿಪರೀತ ಕೊಬ್ಬು ಬೆಳೆಯಿತೇನು ? ನಿನ್ನ ಮೊದ್ದು ಮೊರಟು ಸ್ವರೂಪ ಎಲ್ಲಾ ನನಗೆ ಗೊತ್ತು. ನಿನ್ನ ಕೊಂಬುಗಳನ್ನು ಕಿತ್ತು ಧನುಸ್ಸು ಮಾಡಿಕೊಳ್ಳುತ್ತೇನೆ. ಬಾ ನನ್ನ ಮುಂದೆ" ಎಂದು ಹೇಳಿ ದೂತನನ್ನು ಕಳುಹಿಸಿದನು ದೇವೇಂದ್ರ.



ದೂತನು ಮಹಿಷಾಸುರನ ಬಳಿಗೆ ಹಿಂದಿರುಗಿ, ದೇವೇಂದ್ರನ ಸಂದೇಶವನ್ನು ತನ್ನ ಒಡೆಯನೊಂದಿಗೆ ಹೇಳಿದನು.

ಅದನ್ನು ಕೇಳಿ ಮಹಿಷಾಸುರನಿಗೆ ತಾಳಲಾಗದಷ್ಟು ಕೋಪ ಬಂತು. ಆತನು ಬಾಲವನ್ನು ಜಾಡಿಸಿ. ಕೆಂಪಾದ ಕಣ್ಣುಗಳನ್ನು ತಿರುಗಿಸುತ್ತ, "ಈ ಇಂದ್ರನ ಗರ್ವವಾದರೂ ಎಷ್ಟದು ? ಅವನು ನನಗೊಂದು ಹುಲ್ಲಿಗೆ ಸಮ. ಅವನ ಪ್ರತಾಪವೆಲ್ಲಾ ಮತ್ತಗೆ ತಪಸ್ಸು ಮಾಡುವವರ ಮೇಲೆಯೂ, ಇನ್ನೊಬ್ಬರ ಹೆಂಡಿರ ಮೇಲೆಯೂ ತೋರಿಸಲಿಕ್ಕಾದೀತು ! ನಿಜವಾದ ಯುದ್ಧವೆಂದರೆ, ಅಪ್ಸರೆಯರನ್ನು ಕಳುಹಿಸಿ ಮುನಿಗಳ ತಪೋಭಂಗ ಮಾಡುವುದು ಅಂದುಕೊಂಡಿದ್ದಾನೆ. ನನ್ನ ವಿಷಯ ಗೊತ್ತಿದೆಯಂತೆ ! ಕೋಟಿಮಂದಿ ಇಂದ್ರರು ಬಂದರೂ ಸೀಳಿ ಚೆಂಡಾಡುತ್ತೇನೆ. ನಮುಚಿಯನ್ನು ಕೊಂದ ವಿಶ್ವಾಸಘಾತುಕ ! ಅವನನ್ನು ಕ್ಷಮಿಸಿದರೆ ಬುದ್ಧಿ



ವಂತರು ಸಂತೋಷಿಸಲಾರರು. ಇವನೇ ಹೀಗೆಂದು ಕೊಂಡರೆ, ಇವನಿಗೆ ಸಹಾಯಮಾಡುವ ಆ ವಿಷ್ಣು ಕೂಡಾ ಇವನಂಥವನೇ ! ಮೋಸದಿಂದ ಹಂದಿ ರೂಪದಲ್ಲಿ ಹಿರಣ್ಯಾಕ್ಷನನ್ನು ಕೊಂದನು. ಸಿಂಹ ರೂಪದ ಮನುಷ್ಯನಾಗಿ ಹಿರಣ್ಯಕಶಿಪುವನ್ನು ಕೊಂದನು ! ಅವನನ್ನು ಆಮೇಲೆ ನೋಡುತ್ತೇನೆ. ಈ ಇಂದ್ರನ ಕಥೆ ಮುಗಿಸುತ್ತೇನೆ ಮೊದಲು !" ಎಂದು ಗುಡುಗುಡಿಸಿದನು.

ಮೊದಲು ಅಷ್ಟದಿಕ್ಪಾಲಕರನ್ನೂ ದೇವತೆಗಳನ್ನೂ ಜಯಿಸಿ, ಅವರು ಅನುಭವಿಸುವ ಸುಖಗಳನ್ನೆಲ್ಲ ರಾಕ್ಷಸರಿಗೆ ಹಂಚಿಕೊಡಲು ನಿಶ್ಚಯಿಸಿ ಮಹಿಷಾಸುರನು ತನ್ನ ಸೇವಕರೊಂದಿಗೆ, "ನನ್ನನ್ನು ಯಾವ ಗಂಡುಗಲಿಯೂ ಜಯಿಸಲಾರನು. ನೀವು ಎಲ್ಲೆಲ್ಲಿರುವ ಎಲ್ಲಾ ರಾಕ್ಷಸರನ್ನೂ ಕರೆದು ಯುದ್ಧಕ್ಕೆ ಸಿದ್ಧಗೊಳಿಸಿರಿ. ಎಷ್ಟು ಮಂದಿ ಶತ್ರುಗಳಿದ್ದರೂ ನನಗೆ ಇದಿರಲ್ಲ. ಕೇವಲ ನನ್ನ ಗೊರಸುಗಳಿಂದಲೂ-ಕೊಂಬುಗಳಿಂದಲೂ ಕೊಂದು ಹಾಕಬಲ್ಲೆ. ನಿಮ್ಮೆಲ್ಲರಿಗೂ ಸ್ವರ್ಗ ಸುಖಗಳು ಸಿಗುತ್ತವೆ" ಎಂದು ಹೇಳಿ ಉಬ್ಬಿಸಿ ಕಳುಹಿಸಿದನು.

ಇಷ್ಟರಲ್ಲಿ ದೇವೇಂದ್ರನು ದಿಕ್ಪಾಲಕರನ್ನೆಲ್ಲಾ ಸಮಾವೇಶಗೊಳಿಸಿ ಅವರೊಂದಿಗೆ ಹೀಗೆಂದನು : "ರಂಭಾಸುರನ ಮಗನಾದ ಮಹಿಷಾಸುರನು ಬ್ರಹ್ಮದೇವನಿಂದ ವರವನ್ನು ಪಡೆದು, ಮದೋನ್ಮತ್ತನಾಗಿ ಯುದ್ಧಕ್ಕೆ ಸೇನೆಗಳನ್ನು ತಯಾರಿಸುತ್ತ ಜಂಬ ಕೊಚ್ಚಿಕೊಳ್ಳುತ್ತಿದ್ದಾನೆ. ಅವನು ಸ್ವರ್ಗಲೋಕವನ್ನು ಜಯಿಸುತ್ತಾನಂತೆ. ಮಹಿಷನಿಗೆ ಸೇವಕನಾಗಿರುವೆಯೋ ಯುದ್ಧಮಾಡಿ ಸೋಲುವಿಯೋ ಎಂದು ನನಗೆ ಸವಾಲು ಕೊಡಿಸಿದ್ದಾನೆ. ನಾನೂ ಕಠಿಣವಾದ ಪ್ರತ್ಯುತ್ತರ ಹೇಳಿ ಕಳುಹಿಸಿದ್ದೇನೆ. ಇದನ್ನೆಲ್ಲ ಆಲೋಚನೆ ಮಾಡಿ ನಾವೇನು ಮಾಡಬೇಕೆಂಬುದನ್ನು ಹೇಳಿರಿ. ಶತ್ರುವಾದವನು ಎಷ್ಟೇ ಬಲವಂತನಾದರೂ ಕ್ಷಮಿಸಿ ಬಿಡಬಾರದು. ಜಯಾಪಜಯಗಳು ದೈವಾಧೀನವೇ ಆದರೂ ಪ್ರಯತ್ನವನ್ನು ಬಿಡಕೂಡದು. ಸಂಧಿ ಮಾಡಿಕೊಳ್ಳುವುದು ಒಳ್ಳೆಯದಾದರೂ ಇಂತಹ ಮದಾಂಧರೊಂದಿಗೆ ಸಂಧಿ ಕೂಡಾ ವಿಷಮಿಸುತ್ತದೆ. ಯುದ್ಧ ಮಾಡಬೇಕಾದರೂ ಶತ್ರುವಿನ ಬಲವನ್ನೂ ನಮ್ಮ ಬಲವನ್ನೂ ಗಣಿಸಿ ತೂಗಿ ನೋಡಬೇಕಾಗಿದೆ. ಅದಕ್ಕಾಗಿ ಒಬ್ಬ ಮನುಷ್ಯನನ್ನು ಕಳುಹಿಸೋಣವೆಂದು ನನ್ನ ಅಭಿಪ್ರಾಯ."

ಎಲ್ಲರೂ ಒಪ್ಪಿದ ಮೇಲೆ, ಇಂದ್ರನು ಒಬ್ಬ ಮನುಷ್ಯನನ್ನು ಗೂಢಚಾರನಾಗಿ, ಶತ್ರುವಿನ ಕಡೆಗೆ ಕಳುಹಿಸಿದನು. ಆತನು ಹಿಂದಿರುಗಿ ಬಂದು ಮಹಿಷಾಸುರನ ಬಲಗಳ ವಿವರಣೆಗಳನ್ನು ಹೇಳಿದುದನ್ನು ಕೇಳಿ, ಇಂದ್ರನು ವಿಸ್ಮಯಗೊಂಡು, ತನ್ನ ಪುರೋಹಿತನನ್ನು ನೋಡಿ, "ಮಹಿಷಾಸುರನು ಅಂತ್ಯವಿಲ್ಲದಷ್ಟು ಸೇನೆಯನ್ನು ಸಾಗಿಸಿಕೊಂಡು

ನಮ್ಮ ಮೇಲೆ ಯುದ್ಧಕ್ಕೆ ಬರುತ್ತಾನಂತೆ. ಏನು ಉಪಾಯ ? " ಎಂದು ಕೇಳಿದನು.

ಇಂದ್ರನ ಗಾಬರಿಯನ್ನು ನೋಡಿ ದೇವ ಪುರೋಹಿತನಾದ ಬೃಹಸ್ಪತಿ, " ಅಪಾಯವು ಇದಿರಾದಾಗ ಧೈರ್ಯವನ್ನು ಬಿಟ್ಟು ಬಿಡಬಾರದು. ಯಾವುದಕ್ಕೂ ಎದೆಗೆಡದೆ ಧೈರ್ಯವಾಗಿರು. ಆಗುವುದು ಆಗದೇ ಇರುವುದಿಲ್ಲ. ಆದರೂ ಸಾಧ್ಯವಾದಷ್ಟು ಪ್ರಯತ್ನ ಮಾಡಲೇಬೇಕು. ನಾವು ಪ್ರಯತ್ನ ಮಾಡಿದರೂ ಫಲಿತವು ಸಿಗದಿದ್ದರೆ ಅದು ದೈವಿಕವೆನಿಸುತ್ತದೆ " ಎಂದನು.

" ಅದು ನಿಜವೇ ಅನ್ನಿ ಗುರುಗಳೇ. ಪ್ರಯತ್ನಿಸದಿದ್ದರೆ ಯಾವ ಕೆಲಸವೂ ಆಗುವುದಿಲ್ಲ. ಯತಿಗಳಿಗೆ ವಿಜ್ಞಾನವೂ, ಬ್ರಾಹ್ಮಣರಿಗೆ ತೃಪ್ತಿಯೂ ಹೇಗೆ ಮುಖ್ಯವೋ ರಾಜರಿಗೆ ಶತ್ರು ಸಂಹಾರವೂ ಹಾಗೆಯೇ ಮುಖ್ಯ. ನೀವು ಅನುಕೂಲವಾಗಿ ಆಲೋಚನೆ ಹೇಳಿದರೆ, ನಾನು ಯುದ್ಧದ ಪ್ರಯತ್ನ ಮಾಡುತ್ತೇನೆ. ನನಗೆ ನೀವೂ, ವಜ್ರಾಯುಧವೂ, ಹರಿಹರರೂ ಸಹಾಯಕರಾಗಿರುವವರಲ್ಲವೆ ? " ಎಂದನು ದೇವೇಂದ್ರ

ಬೃಹಸ್ಪತಿ ಇಂದ್ರನನ್ನು ನೋಡಿ. " ನಾನು ನಿನಗೆ ಯುದ್ಧಮಾಡುವಂತೆಯೂ ಹೇಳಲಾರೆ, ಬೇಡವೆಂತಲೂ ಹೇಳಲಾರೆ. ನನ್ನನ್ನು ನೀವೆಲ್ಲಾ ಮಹಾ ಮೇಧಾವಿ ಎನ್ನುವಿರಿ. ಆದರೆ ಚಂದ್ರನು ನನ್ನ ಹೆಂಡತಿಯನ್ನು ಎತ್ತಿಕೊಂಡು ಹೋದಾಗ, ನನ್ನ ಮೇಧಾವಿತನ ಯಾವ ಕೆಲಸಕ್ಕೆ ಬಂತು ? ಆದುದರಿಂದ ಈ ಸಂದರ್ಭದಲ್ಲಿ ನಿಮ್ಮ ನಿಮ್ಮ ಬುದ್ಧಿಗೆ ತೋರಿದ ಉಪಾಯಗಳನ್ನು ನೀವೇ ಆಲೋಚಿಸಿಕೊಳ್ಳಿ " ಎಂದನು. ಆಮೇಲೆ ಇಂದ್ರನು ಬ್ರಹ್ಮನ ಬಳಿಗೆ ಹೋಗಿ ಶರಣಾಗತನಾಗಿ, " ದೇವ ದೇವಾ ! ಮಹಿಷಾಸುರನೆಂಬವನು ಮದೋನ್ಮತ್ತನಾಗಿ ಸ್ವರ್ಗಲೋಕದ ಮೇಲೆ ಸೈನ್ಯ ಸಾಗಿಸಿಕೊಂಡು



ಬರುತ್ತಿದ್ದಾನೆ. ಅವನಿಂದ ನನಗೆ ಬಹಳ ಭಯ ಉಂಟಾಗಿದೆ. ನನ್ನ ದುರವಸ್ಥೆಗೆ ಒಂದು ದಾರಿ ನೀನೇ ತೋರಿಸಬೇಕು ! " ಎಂದು ಪ್ರಾರ್ಥಿಸಿಕೊಂಡನು.

ಇಂದ್ರನ ಮಾತು ಕೇಳಿ ಬ್ರಹ್ಮನು ತಲೆದೂಗುತ್ತ " ಹೌದು, ಆ ಮಹಿಷನ ಸಂಗತಿ ನನಗೆ ಗೊತ್ತಿದೆ. ನಾವು ಶಿವನನ್ನೂ ವಿಷ್ಣುವನ್ನೂ ಬೆಂಬಲಕ್ಕಿಟ್ಟುಕೊಂಡು ಯುದ್ಧ ಮಾಡುವುದು ಒಳ್ಳೆಯದು. ಮೊದಲು ಕೈಲಾಸಕ್ಕೆ ಹೋಗೋಣ " ಎಂದನು.

ಇಂದ್ರನೂ ಬ್ರಹ್ಮನೂ ಕೈಲಾಸಕ್ಕೆ ಹೋಗಿ ಶಿವನನ್ನು ನೋಡಿ ಎಲ್ಲಾ ಸಂಗತಿಯನ್ನೂ ಹೇಳಿದರು. ತರುವಾಯ ಮೂವರೂ ಕೂಡಿ ವಿಷ್ಣುವಿನ ಬಳಿಗೆ ಹೋದರು. ಮೂವರೂ ಕೂಡಿಯೇ ಮಹಿಷಾಸುರನೊಂದಿಗೆ ಯುದ್ಧಮಾಡಬೇಕೆಂದು ನಿರ್ಣಯವಾಯಿತು. ಹಂಸದ ಮೇಲೆ ಬ್ರಹ್ಮನೂ, ಗರುತ್ಮಂತನ ಮೇಲೆ ವಿಷ್ಣುವೂ, ಎತ್ತಿನ ಮೇಲೆ ಶಿವನೂ, ನವಿಲಿನ ಮೇಲೆ



ಕುಮಾರಸ್ವಾಮಿಯೂ, ಆನೆಯ ಮೇಲೆ ಇಂದ್ರನೂ ಏರಿಕೊಂಡು ಯುದ್ಧಕ್ಕೆ ಹೊರಟರು. ಮಹಿಷಾಸುರನ ಸೇನೆಯೂ ಇದಿರಿಸಿಕೊಂಡು ಬಂತು.

ಯುದ್ಧವು ಭಯಂಕರವಾಗಿ ಸಾಗಿತು. ಎಷ್ಟೇ ಶೌರ್ಯ ಪರಾಕ್ರಮಗಳನ್ನು ಪ್ರದರ್ಶಿಸಿದರೂ ದಿಕ್ಪಾಲಕರೂ, ಇಂದ್ರನೂ, ತ್ರಿಮೂರ್ತಿಗಳೂ ಮಹಿಷಾಸುರನ ಧಾವತಿಗೆ ತಡೆದುಕೊಳ್ಳಲಾರದೆ ಹಿಂಜರಿದು ಓಡಲೇ ಬೇಕಾಯಿತು. ಸ್ವರ್ಗವು ಮಹಿಷಾಸುರನ ಕೈ ಸೇರಿತು. ಮಹಿಷನು ಇಂದ್ರನ ಆಸನದ ಮೇಲೆ ಕುಳಿತುಕೊಂಡು, ಎಲ್ಲಾ ಪದವಿಗಳಲ್ಲಿಯೂ ತನ್ನ ರಾಕ್ಷಸರನ್ನು ನಿಯಮಿಸಿ, ದೇವತೆಗಳ ಧನಾಗಾರವನ್ನೆಲ್ಲಾ ಸ್ವಾಧೀನಪಡಿಸಿಕೊಂಡು ಸ್ವರ್ಗ ಸುಖಗಳನ್ನು ಅನುಭವಿಸುತ್ತ ಪಾಲಿಸತೊಡಗಿದನು. ದೇವತೆಗಳು ಗುಡ್ಡಗಳನ್ನೂ, ಗುಹೆಗಳನ್ನೂ ಸೇರಿಕೊಂಡು ಬವಣೆಪಡತೊಡಗಿದರು. ಇಂತಹ ಕಷ್ಟಗಳನ್ನು ಅನುಭವಿಸಿ ಅರಿಯದ, ಅಮರತ್ವ ಪಡೆದ ದೇವತೆಗಳು, ಒಂದುದಿನ ಇಂದ್ರನನ್ನು ಮುಂದಿಟ್ಟುಕೊಂಡು ಬ್ರಹ್ಮನ ಬಳಿಗೆ ಹೋಗಿ, "ಕೇವಲ ಒಬ್ಬ ಕೋಣದಂಥ ರಾಕ್ಷಸನು ನಮ್ಮೆಲ್ಲರನ್ನೂ ಜಯಿಸಿ ನಮಗೆ ಇಂತಹ ದುಸ್ಥಿತಿಯುಂಟುಮಾಡಿದುದನ್ನು ನೋಡುತ್ತಾ, ನಮ್ಮ ತಂದೆಯಾದ ನೀನು ಸುಮ್ಮನಿರುವೆಯಾ? ನಿನ್ನಿಂದಲೇ ಹೀಗಾಯಿತು! ಎಲ್ಲಾ ತಿಳಿದವನಿಗೆ ನಾವೇನು ಹೇಳಬಹುದು? ಇನ್ನು ಮುಂದೆ ನಮ್ಮ ಗತಿ ಏನು?" ಎಂದು ಮೊರೆಯಿಟ್ಟರು.

"ನನ್ನನ್ನು ಏನು ಮಾಡಲು ಹೇಳುವಿರಿ? ಅವನು ಯಾವ ಪುರುಷನಿಂದಲೂ ಮರಣವಿಲ್ಲದಂತೆ ವರ ಕೇಳಿದ, ನಾನು ಕೊಡಲೇ ಬೇಕಾಯಿತು. ಅದು ಅವನ ತಾತನಿಂದ ಅವನು ಪಡೆದ ವರವೇ! ಇನ್ನು ಅವನನ್ನು ಕೊಲ್ಲುವುದಾದರೆ ಯಾವಳಾದರೂ ಸ್ತ್ರೀಯೇ ಕೊಲ್ಲಬೇಕು. ಅಂಥವಳು ಯಾರೆಂದು ಮೊದಲು ಶಿವನನ್ನು ಕೇಳೋಣ. ಆತನ ಪತ್ನಿ ಪಾರ್ವತಿ ಮಹಾದೇವಿಯ ಅಂಶದವಳು ತಾನೇ?" ಎಂದನು ಬ್ರಹ್ಮ.

ದೇವತೆಗಳೆಲ್ಲಾ ಬ್ರಹ್ಮನೊಂದಿಗೆ ಶಿವನ ಬಳಿಗೆ ಹೋದರು. "ಏನು ಕೆಲಸದ ಮೇಲೆ ಬಂದಿರಿ?" ಎಂದು ಶಿವನು ಅವರನ್ನು ಕೇಳಿದನು.

"ನಿನಗೆ ತಿಳಿಯದುದೇನಿದೆ? ಮಹಿಷಾಸುರನು ಸ್ವರ್ಗವನ್ನು ಆಕ್ರಮಿಸಿ ಇಂದ್ರನನ್ನೂ, ಇತರ ದೇವತೆಗಳನ್ನೂ ಗುಡ್ಡಗಾಡುಗಳ ಗತಿಗೆ ಅಟ್ಟಿದ್ದಾನೆ. ದೇವತೆಗಳಿಲ್ಲದೆ, ಯಜ್ಞಯಾಗಗಳು ನಿಂತು ಲೋಕಕಾರ್ಯವೆಲ್ಲ ಅಸ್ತವ್ಯಸ್ತವಾಗಿವೆ. ಹೀಗೆಯೇ ಮುಂದುವರಿದರೆ ನಮ್ಮ ಪ್ರಪಂಚದ ಗತಿ ಏನಾದೀತು?" ಎಂದನು ಬ್ರಹ್ಮ.

ಶಿವನು ಮುಗುಳು ನಗೆ ನಕ್ಕು, "ಅದು ತಾನೇ ನಾವೆಲ್ಲಾ ಸೇರಿ ಒಮ್ಮೆ ಮಂಗಳಾರತಿ ಮಾಡಿಸಿಕೊಂಡೆವಲ್ಲಾ! ಈ ಅನರ್ಥಗಳಿಗೆಲ್ಲಾ ಮೂಲಕಾರಣ

ನೀನು ತಾನೇ ಬ್ರಹ್ಮಾ? ನಿನ್ನ ವರದಿಂದ ಅವನನ್ನು ಯಾವ ಗಂಡೂ ಕೊಲ್ಲಲಾರನು. ನಿನ್ನ ಹೆಂಡತಿಯನ್ನು ಕಳುಹಿಸುವಿಯಾ? ನನ್ನ ಹೆಂಡತಿಯನ್ನು ಕಳುಹಿಸಲೇ? ಅಥವಾ ಇಂದ್ರನ ಹೆಂಡತಿ ಯುದ್ಧಕ್ಕೆ ಹೋಗುವಳೇ? ನಮ್ಮ ಹೆಂಡತಿಯರಲ್ಲಿ ಯಾರಿಗೂ ಯುದ್ಧಮಾಡುವ ಸಾಮರ್ಥ್ಯವಿಲ್ಲವಲ್ಲಾ? ಆದುದರಿಂದ ಆ ರಾಕ್ಷಸನೊಂದಿಗೆ ಹೋರಾಡಲು ಯಾವ ಸ್ತ್ರೀಶಕ್ತಿಯನ್ನು ಕಳುಹಿಸುವುದೆಂದು ವಿಷ್ಣುವನ್ನೂ ಒಂದು ಮಾತು ಕೇಳಿ ನೋಡವಾ." ಎಂದನು.

ಎಲ್ಲರೂ ಕೂಡಿ ವಿಷ್ಣುವಿನ ಬಳಿಗೆ ಹೋದರು. ಅವರು ಬಂದ ವಿಷಯವನ್ನು ಕೇಳಿ ವಿಷ್ಣು. "ನಾವೆಲ್ಲಾ ಮಹಿಷನೊಂದಿಗೆ ಯುದ್ಧಮಾಡಿ ಸೋತುಹೋದವರೇ. ಹೆಣ್ಣಿನಿಂದಲೇ ಅವನ ಸಾವೆಂಬುದು ಗೊತ್ತಿದ್ದೂ ನಮ್ಮ ಮರ್ಯಾದೆ ಉಳಿಸಿಕೊಳ್ಳಲಿಕ್ಕಾಗಿ ಹೋರಾಡಿದ್ದೂ ಆಯಿತು. ನಮ್ಮ ಹೆಂಡತಿಯರನ್ನು ಮುಂದಿಟ್ಟು ಯುದ್ಧ ಮಾಡಿದರೂ ಲೋಕಮರ್ಯಾದೆಗೆ ಕೇಡು. ನಮಗಿಂತ ಮೇಲಾದವರೆನಿಸಲು ನಮ್ಮ ಹೆಂಡತಿಯರೂ ಒಪ್ಪುವುದಿಲ್ಲ. ಆದುದರಿಂದ ನಾವು ಮಹಾದೇವಿಯನ್ನು ಧ್ಯಾನಿಸಿ. ನಮ್ಮ ತೇಜಸ್ಸುಗಳನ್ನು ಹೊರಡಿಸಿ. ಹೊಸ ಸ್ತ್ರೀಯನ್ನೇ ಸೃಷ್ಟಿಸೋಣ. ಅವಳಿಗೇ ನಮ್ಮ ಆಯುಧಗಳನ್ನೆಲ್ಲ ಕೊಡೋಣ. ಮಹಿಷಾಸುರನೊಂದಿಗೆ ಯುದ್ಧ ಮಾಡುವಂತೆ ಅವಳನ್ನೇ ಪ್ರಾರ್ಥಿಸೋಣ" ಎಂದನು.

ದೇವತೆಗಳೆಲ್ಲರೂ ಮಹಾದೇವಿಯನ್ನು ಧ್ಯಾನಿಸುತ್ತ. ತಮ್ಮ ತೇಜಸ್ಸುಗಳನ್ನು ಹೊರಡಿಸಿದರು. ಅದು ಕ್ರಮವಾಗಿ ಒಂದಾಗಿ ಹದಿನೆಂಟು ಕೈಗಳಿರುವ ಸ್ತ್ರೀ ಮೂರ್ತಿಯಾಗಿ, ಅವಳು ಅದ್ಭುತ ತೇಜಸ್ಸಿನಿಂದ ಕಂಗೊಳಿಸಿದಳು. ದೇವತೆಗಳು ಅವಳ ಕೈಗಳಲ್ಲಿ ತಮ್ಮ ತಮ್ಮ ಆಯುಧಗಳನ್ನು ಕೊಟ್ಟರು.

ಅವಳು ದೇವತೆಗಳ ಪ್ರಾರ್ಥನೆಯನ್ನು ಲಾಲಿಸಿ. "ಹೆದರಬೇಡಿ! ಆ ರಾಕ್ಷಸನನ್ನು ನಾನು ಕೊಲ್ಲುತ್ತೇನೆ" ಎಂದು ಹೇಳಿ. "ಎಲೋ ಮಹಿಷಾಸುರಾ!" ಎಂದು ದಿಕ್ಕುಗಳು ಒಡೆದುಹೋಗುವ ಹಾಗೆ



ಸಿಂಹನಾದ ಮಾಡಿದಳು. ಆ ಶಬ್ದವು ಮಹಿಷಾಸುರನ ಕಿವಿಗೆ ಹೊಕ್ಕಿತು. "ಯಾರಿದು ಹೀಗೆ ಕೂಗಿದ್ದು? ಹೋಗಿ ಆ ಮದಾಂಧನನ್ನು ಇಲ್ಲಿಗೆ ಎಳೆದು ತನ್ನಿರಿ! ನನ್ನ ಕೈಯಿಂದ ಸಾಯುವ ಹಾಗೆ ಪೆಟ್ಟುತಿಂದ ದೇವತೆಗಳಿಗೆ ಹೀಗೆ ಕೂಗುವ ಧೈರ್ಯ ಬಾರದು! ನೋಡಿ ಬನ್ನಿ" ಎಂದನು ತನ್ನ ಸೇವಕರೊಂದಿಗೆ.

ಆ ರಾಕ್ಷಸ ಸೇವಕರು ಓಡೋಡಿ ಹೋಗಿ, ಮಹಾದೇವಿಯ ವೀರವೂ, ಘೋರವೂ, ಭವ್ಯವೂ ಆದ ಅವತಾರವನ್ನು ನೋಡಿ ಹೆದರಿ ಓಡುತ್ತಾ, ಹಿಂದಿರುಗಿ, "ಯಾವಳೋ ಸಿಂಹದ ಮೇಲೇರಿಕೊಂಡು ಇಲ್ಲಿಗೇ ಬಂದಿದ್ದಾಳೆ. ಶರೀರ ತುಂಬಾ ಆಭರಣಗಳಿದ್ದರೂ ಹದಿನೆಂಟು ಕೈಗಳಲ್ಲಿಯೂ ಮಾರಣಾಯುಧಗಳನ್ನೂ ಹಿಡಿದಿದ್ದಾಳೆ. ಬಹಳ ಭಯವಾಗಿದೆ ಪ್ರಭುವೇ!" ಎಂದರು.

ಮಹಿಷನು ತನ್ನ ಮಂತ್ರಿಯೊಂದಿಗೆ, "ನೀನು ಹೋಗಿ ನೋಡು. ಅವಳನ್ನು ಒಳ್ಳೆಯ ಮಾತಿನಲ್ಲಿ ಮಂಕುಮಾಡಿ ಕರೆದುಕೊಂಡು ಬಾ. ನನಗೆ ತಕ್ಕ ಪಟ್ಟಮಹಿಷಿ ಅವಳಾಗಬಹುದೇನೋ?" ಎಂದನು.

ಮಂತ್ರಿ ಬಂದು ದೂರದಲ್ಲಿ ನಿಂತು ಆ ದೇವಿಯೊಂದಿಗೆ, "ಯಾರಮ್ಮಾ ನೀನು? ಮಹಿಷಾಸುರನನ್ನು ನೋಡಬೇಕೆ? ಆ ಸರ್ವ ಲೋಕಪಾಲಕ ಮಹಿಷಾಸುರ ರಾಜನು ನಿನ್ನ ಪಾಣಿಗ್ರಹಣಕ್ಕೆ ತಕ್ಕವನು. ಬಾ!" ಎಂದನು.

ದೇವಿ ಕಿರುನಗೆ ನಕ್ಕು, "ಅವನನ್ನು, ಇದ್ದುದರಲ್ಲಿ ತೃಪ್ತಿ ಕಾಣದೆ ದುರಾಕ್ರಮಣ ಮಾಡಿದವನನ್ನು ಕೊಲ್ಲಲಿಕ್ಕೇ ಬಂದವಳು ನಾನು. ಅವನಿಗೆ ತಕ್ಕ ಪತ್ನಿ ಮೃತ್ಯು. ಅಲ್ಪನಾದ ನಿನ್ನನ್ನು ಕೊಲ್ಲಲಾರೆ. ನಿನ್ನ ಯಜಮಾನ ಸಾಯಲು ಬರಲಿ" ಎಂದಳು.

ಮಹಿಷಾಸುರನು ತನ್ನ ಮಂತ್ರಿಯ ಮಾತುಗಳನ್ನು ನಂಬದೆ. ತನ್ನ ರಾಯಭಾರಿಯಾಗಿ ಸೇನಾಪತಿಯಾದ ತಾಮ್ರನನ್ನು ಮಹಾದೇವಿಯ ಬಳಿಗೆ ಕಳುಹಿಸಿದನು. ಅವನು ಅವಳಿಗೆ ಮರ್ಯಾದೆ ಕಲಿಸಲು ಮಾತೆತ್ತಿದ ಕೂಡಲೇ ದೇವಿ ಅವನನ್ನು ಕೊಂದಳು. ಮಹಿಷನ ಪ್ರೇಮಘಟ್ಟವು ಅಲ್ಲಿಗೆ ಮುಗಿದು. ರೋಷಘಟ್ಟವು ಪ್ರಾರಂಭವಾಗಿ ತನ್ನ ಸೇನಾಪತಿಗಳನ್ನು ದೇವಿಯ ಮೇಲೆ ಯುದ್ಧಕ್ಕೆ ಕಳುಹಿಸಿದನು. ಎಲ್ಲರೂ ದೇವಿಯ ಕೈಯಲ್ಲಿ ಸತ್ತರು. ತರುವಾಯ ಮಹಿಷಾಸುರನೇ ಯುದ್ಧಕ್ಕೆ ಬಂದನು. ಕಾಮರೂಪಿಯಾದ ಮಹಿಷನು ಅನೇಕ ರೂಪಗಳನ್ನು ಧರಿಸಿ ದಾರುಣವಾಗಿ ಯುದ್ಧಮಾಡಿದನು. ಕಡೆಗೆ ದೇವಿ ಚಕ್ರಾಯುಧದಿಂದ ಅವನ ತಲೆಯನ್ನು ಕಡಿದಳು. ದೇವತೆಗಳು ಪರಮ ಸಂತೋಷದಿಂದ ಸಿಂಹವಾಹಿನಿಯಾದ ಆ ದೇವಿಯನ್ನು ಸ್ತೋತ್ರಮಾಡಿದರು.





# ದೇವೀ ಭಾಗವತ

ಮಹಿಷಾಸುರನನ್ನು ಕೊಂದು ಮಹಾದೇವಿ ಅಂತರ್ಧಾನಳಾಗಿ ಹೋದ ಮೇಲೆ, ದೇವತೆಗಳ ಭಯನಿವಾರಣೆಯಾಗಿ ನೆಮ್ಮದಿಯಾಯಿತು. ಮಹಿಷಾಸುರನ ಮರಣದಿಂದ ಅರಾಜಕವಾದ ಅವನ ರಾಜ್ಯಕ್ಕೆ ದೇವತೆಗಳೆಲ್ಲಾ ಆಲೋಚಿಸಿ, ಸೂರ್ಯವಂಶದ ರಾಜನೊಬ್ಬನನ್ನು ಪಟ್ಟಾಭಿಷೇಕಮಾಡಿದರು.

ಪ್ರಪಂಚವು ಸುಖವಾಗಿರುವ ಕಾಲದಲ್ಲಿ ಇನ್ನೊಂದು ಪೀಡೆ ತಲೆ ಎತ್ತಿತು. ಅದೇನೆಂದರೆ ರಸಾತಲದಲ್ಲಿ ಶುಂಭ, ನಿಶುಂಭರೆಂಬ ದಾನವರಿಬ್ಬರು, ಆಹಾರವನ್ನೂ ನೀರನ್ನೂ ಬಿಟ್ಟು ಘೋರ ತಪಸ್ಸನ್ನು ಮಾಡಿದರು. ಅವರ ತಪಸ್ಸಿಗೆ ಮೆಚ್ಚಿ ಬ್ರಹ್ಮನು ಪ್ರತ್ಯಕ್ಷನಾಗಿ ಏನು ವರ ಬೇಕೆಂದು ಕೇಳಿದನು.

ಶುಂಭ, ನಿಶುಂಭರು ಬ್ರಹ್ಮನನ್ನು ನೋಡಿ, "ದೇವ ದೇವಾ, ನಿನ್ನಿಂದಾಗಲೀ, ಇತರರಿಂದಾಗಲೀ, ಬೇರೆಯಾವುದರಿಂದಾಗಲೀ ನಮಗೆ ಮರಣ ಬಾರದ ಹಾಗೆ ವರವನ್ನು ಕೊಡು" ಎಂದು ಕೇಳಿದರು. "ಅದು ಸಾಧ್ಯವಿಲ್ಲ" ಎಂದನು ಬ್ರಹ್ಮ.

"ಹಾಗಾದರೆ ಹೆಣ್ಣಿನಿಂದ ಹೊರತು ಮತ್ತಾರಿಂದಲೂ ನಮಗೆ ಸಾವು ಬಾರದಂತೆ ವರವನ್ನು ಅನುಗ್ರಹಿಸು. ಅಬಲೆಯೊಬ್ಬಳು ನಮ್ಮನ್ನು ಕೊಲ್ಲಲು ಬರಲಿ, ಆಗ ನೋಡಿಕೊಳ್ಳುತ್ತೇವೆ" ಎಂದರು ಶುಂಭ, ನಿಶುಂಭರು. ಹಾಗೆಯೇ ಆಗಲೆಂದು ವರವನ್ನು ಕೊಟ್ಟನು ಬ್ರಹ್ಮ.

ಹೀಗೆ ಆ ಅಣ್ಣತಮ್ಮಂದಿರು ಬ್ರಹ್ಮನಿಂದ ವರವನ್ನು ಪಡೆದು ಭೃಗು ಮಹಾಮುನಿಯನ್ನು ತಮ್ಮ ಪುರೋಹಿತನನ್ನಾಗಿಟ್ಟುಕೊಂಡರು. ಆ ಮೇಲೆ ಒಳ್ಳೆಯ ಮುಹೂರ್ತವನ್ನು ನೋಡಿ ಶುಂಭನು ರಾಜ್ಯಾಭಿಷೇಕಮಾಡಿಕೊಂಡು, ತಮ್ಮನಾದ ನಿಶುಂಭನನ್ನು ಮಂತ್ರಿಯನ್ನಾಗಿಟ್ಟುಕೊಂಡು ರಾಜ್ಯಪಾಲನೆ ಮಾಡ ತೊಡಗಿದನು. ಚಂಡ, ಮುಂಡರೆಂಬ ಮಹಾವೀರರು ಅವನಿಗೆ ಸೇನಾಧಿಪತಿಗಳಾಗಿದ್ದರು. ಹೀಗೆ ಶುಂಭ, ನಿಶುಂಭರ ವಿಜೃಂಭಣೆಯನ್ನು ನೋಡಿ, ಪಾತಾಳದಲ್ಲಿದ್ದ ಧೂಮ್ರಲೋಚನ ಮತ್ತು ರಕ್ತಬೀಜ ಎಂಬ ರಾಕ್ಷಸರು ಎರಡು ಅಕ್ಷೌಹಿಣಿ ಸೇನೆಯೊಂದಿಗೆ



ಬಂದು ಶುಂಭ, ನಿಶುಂಭರ ಆಸ್ಥಾನದಲ್ಲಿ ಸೇರಿದರು. ಇವರೆಲ್ಲ ಮಹಾಬಲಿಷ್ಠರು.

ರಕ್ತಬೀಜನೆಂಬವನು ಯುದ್ಧರಂಗದಲ್ಲಿ ಅಜೇಯನಾಗುವಂಥ ಘೋರ ಮಹಿಮೆಯುಳ್ಳವನು. ಯುದ್ಧದಲ್ಲಿ ಅವನಿಗೆ ಗಾಯವಾಗಿ ರಕ್ತ ಭೂಮಿಗೆ ಬಿದ್ದರೆ ಬೊಟ್ಟಿಗೊಂದರಂತೆ ಅವನಂತಹ ಮಹಾವೀರರು ಸಾವಿರ ಲೆಕ್ಕದಲ್ಲಿ ಹುಟ್ಟಿಕೊಳ್ಳುತ್ತಾರೆ. ಆದುದರಿಂದಲೇ ಅವನಿಗೆ ರಕ್ತಬೀಜನೆಂಬ ಹೆಸರು. ಇಂತಹ ಏನೋ ಒಂದು ಅದ್ಭುತ ಶಕ್ತಿಯುಳ್ಳ ಅನೇಕ ದಾನವ ವೀರರು ಶುಂಭನ ಆಸ್ಥಾನಕ್ಕೆ ಬಂದು ಸೇರಿದುದರಿಂದ ಅವನ ಸೇನಾ ಬಲವು ಬಹು ದೊಡ್ಡದಾಯಿತು.

ಹೀಗಿರುವಾಗ ಒಂದುಸಾರಿ ನಿಶುಂಭನಿಗೆ ಇಂದ್ರನನ್ನು ಜಯಿಸಬೇಕೆಂದು ಬುದ್ಧಿ ಹುಟ್ಟಿತು. ಹುಟ್ಟಿದ್ದೇ ತಡ, ಅವನು ದಂಡಿನೊಂದಿಗೆ ಹೊರಟು ಅಮರಾವತಿಗೆ ದಾಳಿಯಿಟ್ಟನು. ಇಂದ್ರನು ದೇವತೆಗಳೊಂದಿಗೆ ಬಂದು ಯುದ್ಧವನ್ನು ಪ್ರಾರಂಭಿಸಿದನು. ಕಡೆಗೆ ಇಂದ್ರನ ವಜ್ರಾಯುಧದ ಪೆಟ್ಟಿನಿಂದ ನಿಶುಂಭನು ಮೂರ್ಛೆ ಹೋಗಿಬಿದ್ದನು.

ಇದನ್ನು ಕೇಳಿ ಶುಂಭನಿಗೆ ಬಂದ ಕೋಪವು ಅಷ್ಟಿಷ್ಟಲ್ಲ. ಅವನು ಮಹಾ ರಭಸದಿಂದ ಯುದ್ಧರಂಗಕ್ಕೆ ಬಂದು, ದೇವತೆಗಳನ್ನೆಲ್ಲಾ ಚೆಲ್ಲಾಚೆದರಾಗುವಂತೆ ದಿಕ್ಕು ದಿಕ್ಕುಗಳಿಗೆ, ಓಡಿಸಿ, ಇಂದ್ರನನ್ನೂ ಎಳೆದು ಉರುಳಿಸಿ ಓಡಿಸಿ, ತಾನೇ ಇಂದ್ರಾಧಿಪತ್ಯವನ್ನು ವಹಿಸಿಕೊಂಡನು. ಆಮೇಲೆ ಅಷ್ಟದಿಕ್ಪಾಲಕರನ್ನು ತಾನು ಹೇಳಿದ ಹಾಗೆ ಕೇಳುವಂತೆ ಮಾಡಿ, ಮೂರು ಲೋಕಗಳನ್ನೂ ಆಳುತ್ತ, ನಂದನವನದಲ್ಲಿ ಅಪ್ಸರಸಿಯರೊಂದಿಗೆ ವಿಹರಿಸುತ್ತ, ಆನಂದವಾಗಿರ ತೊಡಗಿದನು.

ಅವನು ದಿಕ್ಪಾಲಕರನ್ನು ನೋಡಿಕೊಳ್ಳಲು ತನ್ನ ಕಡೆಯ ದಾನವರನ್ನು ನಿಯೋಜಿಸಿದನು. ಅದನ್ನು ಸಹಿಸಲಾರದೆ ದಿಕ್ಪಾಲಕರು ದಿಕ್ಕಿಲ್ಲದವರಾಗಿ ಓಡಿಹೋದರು. ಇಂತಹ ಶುಂಭೇಂದ್ರನ ಪರಿಪಾಲನೆಯಲ್ಲಿ ದೇವತೆಗಳನ್ನು ಕೇಳುವವರಿಲ್ಲದೆ ಕಾಡುಪಾಲಾಗಿ ಗುಹೆಗಳಲ್ಲಿ ಕಷ್ಟಪಡತೊಡಗಿದರು.

ಈ ಅವಸ್ಥೆಯಲ್ಲಿ ಸಾವಿರ ವರ್ಷಗಳು ಕಳೆದುವು. ಕಷ್ಟಗಳಲ್ಲಿ ಸಿಕ್ಕಿದ ಇಂದ್ರನೇ ಮೊದಲಾದವರು, ಸ್ವರ್ಗವನ್ನು ಮತ್ತೆ ಹೇಗೆ ಸಂಪಾದಿಸಬೇಕೋ, ಶುಂಭನನ್ನು ಹೇಗೆ ಕೊಲ್ಲಬೇಕೋ ತಿಳಿಯದೆ, ಒಂದು ದಿನ ತಮ್ಮ ಗುರುವಾದ ಬೃಹಸ್ಪತಿಯೊಂದಿಗೆ. "ಮಹಾತ್ಮಾ, ನಿನಗೆ ತಿಳಿಯದಿರುವ ಸಂಗತಿ ಯಾವುದೂ ಇಲ್ಲವಷ್ಟೆ? ದೇವತೆಗಳಿಗೆ ಬಂದ ಈ ದುಸ್ಥಿತಿ ಹೇಗೆ ನಿವಾರಣೆಯಾಗುವುದೋ ಹೇಳಲಾರೆಯಾ? ಮಂತ್ರಗಳಿಗೆ ಬಲು ಹೆಚ್ಚಿನ ಪ್ರಭಾವವಿದೆಯಷ್ಟೆ? ಅವುಗಳಿಂದ ಏನಾದರೂ ಅಭಿಚಾರವೋ, ಮತ್ತೇನೋ ಮಾಡಿ, ನಮ್ಮ ರಾಜ್ಯವನ್ನು ನಮಗೆ ಕೊಡಿಸು" ಎಂದು ಕೇಳಿಕೊಂಡರು.

"ಇಂದ್ರಾ, ನೀನು ಹೇಳಿದಂತೆ ಮಂತ್ರ ತಂತ್ರಗಳು ಅಪಾರಶಕ್ತಿಯುಳ್ಳವಾದರೂ, ವಿಧಿ ನಿಯಮವನ್ನು

ಅನುಸರಿಯೇ ಕೆಲಸಮಾಡುವಂಥವು. ವಿಧಿ ನಿಯಮಕ್ಕೆ ವ್ಯತಿರೇಕವಾಗಿ ಯಾವ ಶಕ್ತಿಯೂ ಕೆಲಸಮಾಡ ಲಾರದು. ಆ ಮಂತ್ರ ತಂತ್ರಗಳಿಗೆ ಅಧಿಪತಿಗಳಾದ ನೀವೇ ಈಗ ದುರ್ದಶೆಯ ಪಾಲಾಗಿದ್ದೀರಿ. ಈ ಸ್ಥಿತಿ ಯಲ್ಲಿ ಮಂತ್ರಗಳು ನಿಮಗೆ ಹೇಗೆ ಸಹಾಯಮಾಡ ಬಲ್ಲವು? ಆದರೂ ಒಂದು ಮಾಡಬಹುದು. ಜಗಜ್ಜನನಿಯಾದ ಮಹಾದೇವಿ ಯಾರಿಗೂ ಸಾಧ್ಯ ವಾಗದಂತಹ ಮಹಿಷಾಸುರನನ್ನು ಕೊಂದ ಸಂಗತಿ ನಿಮಗೆ ಗೊತ್ತೇಯಿದೆ. ಆ ಮಹಾದೇವಿಯನ್ನೇ ಆಶ್ರಯಿಸಿರಿ. ನೀವು ಹಿಮಾಲಯಕ್ಕೆ ಹೋಗಿ ಆ ದೇವಿಯ ಮಾಯಾಬೀಜ ಮಂತ್ರವನ್ನು ಪುನಶ್ಚರಣೆ ಮಾಡಿರಿ." ಎಂದನು ದೇವಗುರು ಬೃಹಸ್ಪತಿ.



ದೇವತೆಗಳು ಆ ಪ್ರಕಾರವೇ ಹಿಮಾಲಯಕ್ಕೆ ಹೋಗಿ, ಒಂದು ಪ್ರಶಸ್ತವಾದ ಸ್ಥಳದಲ್ಲಿ ಮಾಯಾ ಬೀಜ ಮಂತ್ರವನ್ನು ಜಪಿಸುತ್ತ ದೇವಿಯನ್ನು ಧ್ಯಾನಿಸ ತೊಡಗಿದರು.

ಕೆಲವು ದಿನಗಳಲ್ಲಿ ಮಹಾದೇವಿ, ಒಳ್ಳೆಯ ಸೀರೆ ಯಿಂದ, ಸುಂದರವಾದ ದಿವ್ಯಾಭರಣಗಳನ್ನು ಧರಿಸಿ ಕೊಂಡು, ಆಗ ತಾನೇ ಗಂಗಾನದಿಯಲ್ಲಿ ಸ್ನಾನಮಾಡಿ ಎಲ್ಲಿಗೋ ಹೋಗುವವಳಂತೆ, ಒಂದು ಗುಹೆಯೊಳಗಿ ನಿಂದ ನಡೆದು ಬರುತ್ತ, ಧ್ಯಾನ ಮುದ್ರೆಯಲ್ಲಿರುವ ದೇವತೆಗಳನ್ನು ನೋಡಿ, "ಯಾರು ನೀವು? ದೇವತೆಗಳ ಹಾಗೆ ಕಾಣುವಿರಲ್ಲ? ಏನು ಕೆಲಸದ ಮೇಲೆ ಇಲ್ಲಿಗೆ ಬಂದು ಕುಳಿತಿದ್ದೀರಿ? ಚಿಂತೆಯಲ್ಲಿ ಬಾಡಿದಂತಿರುವಿ ರಲ್ಲಾ?" ಎಂದು ವಿಚಾರಿಸಿದಳು.

ದೇವತೆಗಳು ಅವಳಿಗೆ ಕೈಮುಗಿದು, "ಅಮ್ಮಾ! ನಮಗೆ ಬಂದ ಆಪತ್ತನ್ನು ನೀನಾದರೂ ತೊಲಗಿಸು. ನಾವು ಯುದ್ಧದಲ್ಲಿ ದಾನವರ ಪೆಟ್ಟಿಗೆ ತಡೆದುಕೊಳ್ಳ ಲಾಗದೆ ನಮ್ಮ ಅಸಮರ್ಥತೆಯನ್ನು ತಿಳಿಸಲಿಕ್ಕೇ ಬಂದಿದ್ದೇವೆ. ಇಲ್ಲಿ ನಮ್ಮ ಮುಂದೆ ಬಂದ ನೀನು ನಮ್ಮ ಧ್ಯಾನದೇವಿಯಲ್ಲದೆ ಬೇರೆ ಯಾರೂ ಅಲ್ಲ. ನಮಗೀಗ ನೀನೇ ದಿಕ್ಕಾಗಿರುವಿಯಮ್ಮಾ. ಶುಂಭ, ನಿಶುಂಭರೆಂಬ ದಾನವರು ನಮ್ಮನ್ನು ಸೋಲಿಸಿ ಸ್ವರ್ಗ ವನ್ನು ಆಕ್ರಮಿಸಿ ಅಧಿಪತ್ಯ ನಡೆಸುತ್ತಿದ್ದಾರೆ. ಇವರಿಗೆ ಹೆಣ್ಣಿನ ಕೈಯಲ್ಲಿ ಹೊರತು ಬೇರೆಯಾರಿಂದಲೂ ಸಾವಿಲ್ಲ. ಹಿಂದೆ ಮಹಿಷಾಸುರನನ್ನು ಕೊಂದಾಗ, ಮುಂದೆ ಕೂಡಾ ನಮಗೆ ಕಷ್ಟಗಳು ಬಂದಾಗ, ಅವನ್ನು ಹೋಗಲಾಡಿಸಿ ಕಾಪಾಡುವೆನೆಂದು ನೀನು ಮಾತು ಕೊಟ್ಟಿರುವೆ. ಬೇರೆ ಯಾವ ಹೆಣ್ಣು ತಾನೇ ಅವರನ್ನು ಕೊಲ್ಲಲು ಸಾಧ್ಯವಿದೆ? ಆದುದರಿಂದ ನಾವು ದಿಕ್ಕಿಲ್ಲದವರಾಗಿ ಹೀಗೆ ಕಾಡು ಕಾಡು ತಿರುಗು ತ್ತಿದ್ದೇವೆ. ಆ ಶುಂಭ, ನಿಶುಂಭರು ಮಾತ್ರವಲ್ಲದೆ ರಕ್ತಬೀಜ, ಚಂಡ, ಮುಂಡರೆಂಬವರೂ ಅವರೊಂದಿಗೆ ಕೂಡಿ ನಮಗೆ ಶತ್ರುಗಳಾಗಿದ್ದಾರೆ. ಈಗ ಅಷ್ಟ ದಿಕ್ಕುಗಳ ಅಧಿಪತಿಗಳು ಕೂಡಾ ರಾಕ್ಷಸರೇ. ಆದು ದರಿಂದ ಆ ರಾಕ್ಷಸರನ್ನೆಲ್ಲಾ ನೀನೇ ಸಂಹಾರಮಾಡ ಬೇಕು" ಎಂದು ಪ್ರಾರ್ಥಿಸಿಕೊಂಡರು.



ಮಹಾದೇವಿ ದೇವತೆಗಳ ದೈನ್ಯಾವಸ್ಥೆಯನ್ನು ನೋಡಿ ಮನಗರಗಿ, ತನ್ನಿಂದ ಕೌಶಿಕಿ ಎಂಬ ಶಕ್ತಿಯನ್ನು ಹುಟ್ಟಿಸಿದಳು. ಆ ಶಕ್ತಿದೇವಿ ಕರ್ರಗಾಗಿದ್ದುದರಿಂದ ಕಾಳಿಕಾ ಎಂತಲೂ, ಕಾಳರಾತ್ರಿ ಎಂತಲೂ ಕರೆಯಿಸಿ ಕೊಂಡು ಘೋರವಾದ ರೂಪವನ್ನು ಧರಿಸಿದಳು.

ಮಹಾದೇವಿ ಕಾಳಿಕೆಯನ್ನು ತನ್ನ ಪಾರ್ಶ್ವದಲ್ಲಿರಿಸಿ ಕೊಂಡು, "ದೇವತೆಗಳೇ, ಇನ್ನು ಚಿಂತಿಸಬೇಡಿರಿ. ಆ ಶುಂಭ, ನಿಶುಂಭರನ್ನೂ, ಅವರೊಂದಿಗಿರುವ ರಕ್ತಬೀಜ ಮೊದಲಾದ ರಾಕ್ಷಸರನ್ನೂ ಕೊಂದು ನಿಮ್ಮ ಕಷ್ಟ ತೊಲಗಿಸುತ್ತೇನೆ" ಎಂದು ಅಭಯವಿತ್ತು, ಆಗಲೇ ಪ್ರತ್ಯಕ್ಷವಾದ ತನ್ನ ಸಿಂಹದ ಮೇಲೆ ಕೌಶಿಕಿ ಯೊಂದಿಗೆ ಏರಿಕೊಂಡಳು. ಅಲ್ಲಿಂದ ಹೊರಟ ಮಹಾ ದೇವಿ ಶತ್ರುಗಳಿರುವ ನಗರಕ್ಕೆ ಹೋಗಿ, ನಗರದ ಹೊರಗಿನ ಉದ್ಯಾನದಲ್ಲಿ ವಿಹರಿಸ ತೊಡಗಿದಳು. ವಿಹರಿಸುತ್ತ ಅತಿ ಮನೋಹರ ರಾಗದಿಂದ ಗಾನ ಮಾಡ ತೊಡಗಿದಳು. ಅವಳ ಗಾಯನದಿಂದ ದೇವತೆಗಳು ಪರಮಾನಂದಗೊಂಡು ತಲೆದೂಗು ತ್ತಿರಲು, ಮೃಗಗಳೂ ಪಕ್ಷಿಗಳೂ ತಮ್ಮನ್ನು ಮರೆತು ಕಿವಿನಿಗುರಿಸಿ ಕೇಳ ತೊಡಗಿದುವು.

ಆ ಸಮಯದಲ್ಲಿ ಚಂಡಮುಂಡರು ವಿಲಾಸವಾಗಿ ಆ ಉದ್ಯಾನದಲ್ಲಿ ತಿರುಗಾಡಲು ಬಂದು, ಮನೋಹರ ವಾಗಿ ಕೇಳಿಸುವ ಆ ಗಾಯನದಿಂದ ಸ್ತಬ್ಧರಾಗಿ ಸ್ವಲ್ಪ ಹೊತ್ತು ನಿಂತು, ಸಮೀಪ ಹೋಗಿ ಜಗನ್ಮೋಹಿನಿ ಯಾದ ಅಂಬಿಕೆ ಅವತಾರವನ್ನೂ, ಅವಳೊಂದಿ ಗಿರುವ ಕೌಶಿಕಿಯನ್ನೂ ನೋಡಿ, ಅತ್ಯಾಶ್ಚರ್ಯದಿಂದ ನಗರಕ್ಕೆ ಹಿಂದಿರುಗಿ ಹೋಗಿ, ಶುಂಭೇಂದ್ರನಿಗೆ ನಮಸ್ಕಾರಮಾಡಿ ಹೀಗೆಂದರು :

"ಎಲ್ಲಿಂದಲೋ ಅಪೂರ್ವ ಸುಂದರಿಯಾದ ಸ್ತ್ರೀಯೊಬ್ಬಳು ಸಿಂಹದ ಮೇಲೇರಿಕೊಂಡು ನಮ್ಮ ಉದ್ಯಾನವನಕ್ಕೆ ಬಂದಿದ್ದಾಳೆ. ಅವಳ ಸೌಂದರ್ಯ ವನ್ನು ವರ್ಣಿಸಲಿಕ್ಕೇ ಸಾಧ್ಯವಿಲ್ಲ. ಇನ್ನು ಅವಳ ಕಂಠಸ್ವರದಿಂದ ಹೊರಡುವ ಗಾಯನದ ರುಚಿಗಂತೂ ಎಣೆಯೇ ಇಲ್ಲ. ನಮ್ಮ ಉದ್ಯಾನದಲ್ಲಿ ಅವಳು ಹಾಡುತ್ತಿರುವಾಗ, ಪಶುಪಕ್ಷ್ಯಾದಿಗಳೆಲ್ಲಾ ಮೈ ಮರೆತು ಕೇಳುತ್ತಾ, ಸ್ತಬ್ಧವಾಗಿವೆ. ಅವಳೊಂದಿಗೆ ಇನ್ನೊಬ್ಬಳು ಕೂಡಾ ಇದ್ದಾಳೆ. ಅವಳಂತೂ ಅತ್ಯದ್ಭುತ ಕೃಷ್ಣಸುಂದರಿ. ಹೆಚ್ಚು ಹೇಳಲೇಕೆ ? ನೀನೇ ಸ್ವತಃ ಹೋಗಿ ನೋಡಿ, ಅವಳ ಸಮಾಚಾರ ತಿಳಿದುಕೊಂಡು, ನಿನ್ನ ಚಿತ್ತದಂತೆ ಮಾಡಿಕೊಳ್ಳ ಬಹುದು. ನನ್ನನ್ನು ಕೇಳುವುದಾದರೆ ನೀನು ಅವಳನ್ನು ಪತ್ನಿಯಾಗಿ ಮಾಡಿಕೊಂಡರೆ ಅದಕ್ಕಿಂತ ಹೆಚ್ಚಿನ ಸುಖ ನಿನಗಿರದು. ಐರಾವತವನ್ನೂ, ಪಾರಿಜಾತ ವನ್ನೂ, ಉಚ್ಚೈಶ್ರವವನ್ನೂ, ವಿಮಾನವನೂ ಜಯಿಸಿಕೊಂಡು ಇಂದ್ರಪದವಿಯಲ್ಲಿರುವ ನಿನಗೆ ಅವಳೇ ತಕ್ಕ ಪತ್ನಿ ಪ್ರಭುವೆ."

ಚಂಡ, ಮುಂಡರ ಈ ಮಾತುಗಳಿಂದ ಶುಂಭನಿಗೆ ಮೋಹದ ಮತ್ತು ಚೆನ್ನಾಗಿ ತಲೆಗೇರಿತು. ಅವನು



ತನ್ನ ಸಮೀಪದಲ್ಲಿದ್ದ ಸುಗ್ರೀವನೆಂಬುವನನ್ನು ಕರೆದು, "ನೀನು ಕೂಡಲೇ ನನ್ನಪರವಾಗಿ ಉದ್ಯಾನಕ್ಕೆ ಹೋಗಿ, ಆ ಸುಂದರಾಂಗಿಯನ್ನು ಕರೆದುಕೊಂಡು ಬಂದುಬಿಡು. ಬಲವಂತವೇನೂ ಮಾಡದಿರು. ಶುಭಶೃಂಗಾರಗಳಿಗೆ ಸಂಬಂಧಿಸಿದ ಕೆಲಸದಲ್ಲಿ ದಂಡೋಪಾಯವನ್ನು ಪ್ರಯೋಗಿಸಲೇ ಬಾರದು. ನೆನಪಿರಲಿ!" ಎಂದನು.

ಅದರಂತೆ ಸುಗ್ರೀವನು ಉದ್ಯಾನವನಕ್ಕೆ ಹೋಗಿ, ಸಿಂಹದ ಮೇಲೆ ವಿಹರಿಸಿಕೊಂಡಿರುವ ಜಗದಂಬೆಯನ್ನು ನೋಡಿ ನಮಸ್ಕಾರಮಾಡಿ, "ಅಮ್ಮಾ, ನಮ್ಮ ಒಡೆಯ ಶುಂಭೇಂದ್ರನು ದೇವತೆಗಳನ್ನೆಲ್ಲಾ ಜಯಿಸಿ ಮೂರು ಲೋಕಗಳನ್ನೂ ಪಾಲಿಸುತ್ತಿದ್ದಾನೆ. ಅವನ ರೂಪ, ಮನ್ಮಥಾಕಾರನೆಂದರೆ ಸಾಕು. ನಾನು ಯಾರು ಗೊತ್ತೇ? ಅವನ ದೂತನಾಗಿ ಬಂದಿದ್ದೇನೆ. ನಿನ್ನನ್ನು ಕುರಿತು ಕೇಳಿ, ಆತನಿಗೆ ನಿನ್ನ ಮೇಲೆ ಮೋಹ ಹುಟ್ಟಿತು. ಅದಕ್ಕೇ ನನ್ನನ್ನು ನಿನ್ನ ಬಳಿಗೆ ಕಳುಹಿಸಿದ್ದಾನೆ. ಆತನು ನಿನ್ನನ್ನು ತನ್ನ ಹಿರಿಯ ರಾಣಿಯಾಗಿ ಮಾಡಿಕೊಂಡು ನಿನಗೆ ವಿಧೇಯನಾಗಿರುವೆನೆಂದು ಹೇಳುವಂತೆ ಹೇಳಿದ್ದಾನೆ. ಹೇಳಿದ ಮಾತು ತಪ್ಪುವವನಲ್ಲ" ಎಂದು ಹೇಳಿದನು.

ಅವನ ಮಾತುಗಳನ್ನು ಕೇಳಿ ಮಹಾದೇವಿ ಕಿರುನಗುವನ್ನು ಸೂಸುತ್ತ, "ನಿನ್ನ ರಾಜನು ದೇವತೆಗಳೆಲ್ಲರನ್ನೂ ಜಯಿಸಿದನೆಂದು ಕೇಳಿ, ಅಷ್ಟು ದೊಡ್ಡವನನ್ನು ಸಂಧಿಸಬೇಕೆಂತಲೇ ನಾನು ಇಲ್ಲಿಗೆ ಬಂದೆನು. ಈ ಮಾತನ್ನು ಅವನೊಂದಿಗೆ ಹೇಳಿ, ಮುಖ್ಯವಾದ ಇನ್ನೊಂದು ಸಂಗತಿಯನ್ನೂ ಅವನೊಂದಿಗೆ ಹೇಳಿಬಿಡು. ಅದೇನಂದರೆ, ನನ್ನನ್ನು ಯುದ್ಧದಲ್ಲಿ ಸೋಲಿಸಿದ ವೀರನನ್ನು ಹೊರತು ಬೇರೆ ಯಾರನ್ನೂ ಮದುವೆಮಾಡಿಕೊಳ್ಳಲಾರನೆಂಬುದು ನನ್ನ ವ್ರತ. ಈ ವ್ರತವನ್ನು ಹಿಡಿದು ಬಹಳ ಕಾಲವಾಯಿತು. ಈ ವರೆಗೂ ನನ್ನ ಗರ್ವವನ್ನು ಅಡಗಿಸಿದ ವೀರನು ಕಂಡುಬರಲಿಲ್ಲ. ನಿನ್ನ ಯಜಮಾನನು ಆ ಕೆಲಸಮಾಡಿ ನನ್ನ ಕೈಹಿಡಿಯಲಿ. ಹೋಗಿ ಹೇಳು" ಎಂದಳು.

ಈ ಮಾತು ಕೇಳಿ ಸುಗ್ರೀವನು, ಆಶ್ಚರ್ಯಪಡುತ್ತ, "ಅಮ್ಮಾ, ಸ್ತ್ರೀ ಸಹಜವಾದ ದುಸ್ಸಾಹಸದಿಂದ ಹೀಗೆ ಹೇಳುವೆಯೇ ಹೊರತು, ಈ ಶುಂಭೇಂದ್ರನ ಹೆಸರು ಹೇಳಿದರೇನೇ ಎಂತೆಂಥವರೆಲ್ಲಾ ಪ್ರಲಾಪಿಸಿಬಿಡುತ್ತಾರೆ ಗೊತ್ತಾ? ಇಂತಹ ಹುಚ್ಚು ಆಲೋಚನೆಯನ್ನು ಬಿಟ್ಟು ಶುಂಭನನ್ನೋ ಅವನ ತಮ್ಮನಾದ ನಿಶುಂಭನನ್ನೋ ವರಿಸಿಕೊಂಡು ಸುಖವಾಗಿರು." ಎಂದನು.

ಅದಕ್ಕೆ ಅಂಬಾದೇವಿ, "ನನ್ನ ವ್ರತವನ್ನು ಎಂದಿಗೂ ಬಿಡುವವಳಲ್ಲ, ನನ್ನ ಶೂಲಕ್ಕೆ ಬೆದರುವವನನ್ನು ನಾನು ಹೇಗೆ ಮದುವೆಮಾಡಿಕೊಳ್ಳಲಿ? ನನ್ನೊಂದಿಗೆ ಯುದ್ಧಕ್ಕೆ ಬರಲು ಹಿಂಜರಿದನಾದರೆ ನಿನ್ನ ಆ ಯಜಮಾನನು ಸ್ವರ್ಗ ಮೃತ್ಯು ಲೋಕಗಳನ್ನು ಬಿಟ್ಟು ಬಂಧುಮಿತ್ರ ಪರಿವಾರದೊಂದಿಗೆ ರಸಾತಲಕ್ಕೆ

ಹೋಗಲು ಹೇಳು. ನನ್ನ ಮಾತುಗಳನ್ನು ಇದ್ದುದಿದ್ದ ಹಾಗೆಯೇ ಹೇಳಬೇಕು; ಹೋಗು " ಎಂದಳು.

ಸುಗ್ರೀವನು ಅಂಜಿ ಮಂಕುಬಡೆದವನಂತೆ ಶುಂಭನ ಬಳಿಗೆ ಹೋಗಿ, ಮುಂದಾಗಿ ಕ್ಷಮಾಪಣೆ ಕೇಳಿ ಕೊಂಡು, ಮಹಾದೇವಿ ಹೇಳಿದ ಮಾತುಗಳನ್ನು ಅವಳು ಹೇಳಿದ ಹಾಗೆಯೇ ಹೇಳಿದನು.

ಶುಂಭನು ಆಶ್ಚರ್ಯಪಡುತ್ತ, "ಕೇಳಿದೆಯೋ, ನಿಶುಂಭಾ, ಯಾವಳೋ ಹೆಂಗುಸೊಬ್ಬಳು ಇನ್ನೊಬ್ಬ ಳನ್ನು ಜತೆಗೂಡಿಕೊಂಡು ನಮ್ಮ ಹತ್ತಿರ ಯುದ್ಧ ಮಾಡುವೆನೆಂದು ಬಂದಿದ್ದಾಳಂತೆ. ನೀನು ಹೋಗು ವೆಯಾ, ಅಲ್ಲ ನಾನೇ ಹೋಗಲೋ?" ಎಂದು ಕೇಳಿದನು. "ನೀನೂ ಬೇಡ, ನಾನೂ ಬೇಡ. ಧೂಮ್ರ ಲೋಚನನನ್ನು ಕಳುಹಿಸಿದರೆ ಅವಳನ್ನು ಜಯಿಸಿ ಹಿಡಿದು ತರುತ್ತಾನೆ. ಮರುಕ್ಷಣದಲ್ಲಿ ಅವಳು ನಿನ್ನ ರಾಣಿಯಾಗುತ್ತಾಳೆ. ಆಗಲೇ ಬೇಕು" ಎಂದನು ನಿಶುಂಭ ನಗುತ್ತ.

ಅದೇ ಸರಿಯೆಂದುಕೊಂಡು ಶುಂಭನು ಧೂಮ್ರ ಲೋಚನನನ್ನು ಕರೆದು, "ನೀನು ಉದ್ಯಾನವನಕ್ಕೆ ಹೋಗಿ ಆ ಸುಂದರಿಯ ಸಹಾಯಕಳಾಗಿರುವ ಕರಾಳಿಯನ್ನು ಕೊಂದು ಸುಂದರಿಯನ್ನು ಕರೆದು ಕೊಂಡು ಬಾ. ಅವಳು ನಿನ್ನ ಮೇಲೆ ಸಣ್ಣಗೆ ಬಾಣ ಪ್ರಯೋಗ ಮಾಡಿದರೂ ನೀನು ಅವಳನ್ನು ಕ್ರೂರ ವಾದ ಬಾಣಗಳಿಂದ ಹಿಂಸಿಸಿಬಿಡಬೇಡ ತಿಳಿಯಿತೆ? ಅವಳಿಗೆ ಸ್ವಲ್ಪವೂ ಧಕ್ಕೆ ತಗಲದಂತೆ ಕರೆದುಕೊಂಡು ಬಾ, ನೋಡೋಣ" ಎಂದನು.

ಧೂಮ್ರಲೋಚನನು ಯುದ್ಧಕ್ಕೆ ಹೋಗುವವ ನಂತೆ ಸೇನಾ ಸಮೇತನಾಗಿ ಮಹಾದೇವಿಯ ಬಳಿಗೆ ಹೋಗಿ, ತನ್ನ ಯಜಮಾನನ ಪ್ರೇಮ ಸಂದೇಶ ವನ್ನು ಅವಳಿಗೆ ತಿಳಿಯಪಡಿಸಿದನು. ಅವಳ ಮಾತಿಗೆ ಉತ್ತರ ಕೊಡುವಂತೆ ದೇವಿ ಕೌಶಿಕೆಗೆ ಸನ್ನೆ ತೋರಿ ಸಿದಳು. ಕೂಡಲೇ ಕಾಳಿಕೆ ಧೂಮ್ರಲೋಚನನನ್ನು



ನೋಡಿ, "ಯಾರೋ ನೀನು ನಾಚಿಗೆಗೇಡಿಯೇ? ವಿಟ ಪುರುಷನ ಹಾಗೆ ಮಾತಾಡುವೆಯಾ? ಕೈಲಾದರೆ ಯುದ್ಧ ಮಾಡು. ಇಲ್ಲದಿದ್ದರೆ ನಡೆಯಾಚೆ. ನಮ್ಮ ದೇವಿ ಇಲ್ಲಿಗೇಕೆ ಬಂದಳೆಂದುಕೊಂಡೆ? ನಿಮ್ಮ ಶುಂಭ, ನಿಶುಂಭ ರನ್ನು ಯಮಪುರಿಗೆ ಕಳುಹಿಸಲಿಕ್ಕೇ!" ಎಂದಳು.

ಧೂಮ್ರಲೋಚನನು ಕೋಪದಿಂದ ಉರಿಯುತ್ತ, "ನೀನೇ ಜಗಳಕ್ಕೆ ಮುಂಗಾಲು ಕೆರೆಯುವಿಯಾ? ನಿನ್ನ ಗರ್ವವನ್ನು ಅಡಗಿಸಲಾಗದೆ ಇಷ್ಟು ಹೊತ್ತೂ ಮಾತಾಡಿದೆನೆಂದುಕೊಳ್ಳುವಿಯಾ? ತಕ್ಕೋ ನನ್ನ ಪೆಟ್ಟು!" ಎಂದು ಹೇಳಿ ಕಾಳಿಕೆಯೊಂದಿಗೆ ಯುದ್ಧಕ್ಕೆ ತಲೆ ಹಾಕಿ, ತನ್ನ ಸೈನ್ಯವನ್ನೆಲ್ಲಾ ಕಳೆದುಕೊಂಡು ಕಡೆಗೆ ಅವನೂ ಸತ್ತುಬಿದ್ದನು.

ಮಹಾದೇವಿ ದಿಕ್ಕುಗಳು ಕಿವಿಡಾಗುವಂತೆ ಶಂಖಾ ರಾವಮಾಡಿದಳು. ಅದನ್ನು ಕೇಳಿ ಶುಂಭನು ಅದುರಿ ಬಿದ್ದು, ಏನೋ ಹೋಗುವ ಕಾಲ ಬಂತೆಂದುಕೊಂಡು ಗಾಬರಿಯಿಂದ ಓಡೋಡಿ ಬಂದು ನೋಡಿದನು.

ಅಲ್ಲಿ ಧೂಮ್ರಲೋಚನನ ಗುರುತೂ ಕಾಣಲಿಲ್ಲ. ಸೈನ್ಯಗಳ ಜಾಡೂ ಇರಲಿಲ್ಲ. ಕೆಳಗೆ ನೋಡಿದರೆ ಎಲ್ಲರೂ ಸತ್ತು ಶವಗಳಾಗಿ ಬಿದ್ದಿದ್ದಾರೆ. ಅವರ ಕುದುರೆಗಳೂ ಸಿಕ್ಕಾಬಟ್ಟೆ ಸತ್ತು ಬಿದಿದ್ದುವು. ಒಬ್ಬಿಬ್ಬರು ಹತಶೇಷರು ಓಡಿಬಂದು ನಡೆದ ಸಂಗತಿಯನ್ನು ಶುಂಭನೊಡನೆ ಹೇಳಿದರು.

ಶುಂಭನ ಪ್ರಣಯಕಥೆ ತಲೆ ಕೆಳಗಾಗಿ ಹೋಗಿತ್ತು. ಮಾಡಿದರೆ ದೇವಿಯೊಂದಿಗೆ ಯುದ್ಧಮಾಡಬೇಕು. ಇಲ್ಲವೇ ಸಂಧಿಮಾಡಿಕೊಳ್ಳಬೇಕು. ಸಂಧಿಮಾಡಿಕೊಳ್ಳುವುದೆಂದರೆ ರಸಾತಲಕ್ಕೆ ಓಡಿಹೋಗುವುದೇ! ಹಾಗೇಕೆ? ಶುಂಭನ ಬಳಿಯಲ್ಲಿರುವ ವೀರರಿಗೆ ಕಡಿಮೆಯೇ? ಆಕೆಯೊಂದಿಗೆ ಯುದ್ಧಮಾಡುವಂಥ ಶೂರರು ಶುಂಭನೊಂದಿಗೆ ಬಹಳಮಂದಿ ಇರುವರು.

ಮೊದಲು ಚಂಡ, ಮುಂಡರು ಮಹಾದೇವಿಯೊಂದಿಗೆ ಯುದ್ಧಕ್ಕೆ ಹೊರಟರು. ಅವರು ಸತ್ತು ಬಿದ್ದ ಮೇಲೆ, ಶುಂಭನ ಪ್ರೇರಣೆಯಂತೆ ರಕ್ತಬೀಜನು ದೇವಿಯ ಮುಂದೆ ಹೋಗಿ, "ಇನ್ನು ಯುದ್ಧದ ಗೊಡವೆ ಬಿಟ್ಟು ಶುಂಭನನ್ನೋ ನಿಶುಂಭನನ್ನೋ ವರಿಸಿ ಸುಖವಾಗಿರು" ಎಂದು ಬುದ್ಧಿ ಹೇಳಿದನು.

"ನನ್ನೊಡನೆ ಯುದ್ಧಮಾಡಿ ಗೆದ್ದವನನ್ನೇ ನಾನು ಮದುವೆಮಾಡಿಕೊಳ್ಳುವುದೆಂದು ಮೊದಲೇ ತಿಳಿಸಿಯಾಗಿದೆ. ಮತ್ತೆ ಮತ್ತೆ ಅರ್ಥವಿಲ್ಲದ ಮಾತು ಹೇಳಬೇಡ. ನಿನ್ನ ಆ ಶುಂಭ ನಿಶುಂಭರೇ ಬಂದು ನನ್ನೊಂದಿಗೆ ಹೋರಾಡಲು ಹೇಳು, ಹೋಗು" ಎಂದಳು ದೇವಿ.

"ಇಷ್ಟೊಂದು ಗರ್ವಿಷ್ಠನಾದ ನಿನಗೆ ಬುದ್ಧಿ ಕಲಿಸಲಿಕ್ಕೆ ನಾನೇ ಸಾಕು. ನನ್ನೊಂದಿಗೇ ಯುದ್ಧ ಮಾಡು" ಎಂದು ರಕ್ತಬೀಜನು ಯುದ್ಧಕ್ಕೆ ಪ್ರಾರಂಭಿಸಿ, ದೇವಿಯ ಒಂದೇ ಪೆಟ್ಟಿಗೆ ತನ್ನ ರಥದಲ್ಲೇ ಮೂರ್ಛೆ ಹೋಗಿಬಿದ್ದನು.

ಆದರೆ ರಕ್ತಬೀಜನ ರಕ್ತವು ನೆಲದ ಮೇಲೆ ಬಿದ್ದರೆ ಒಂದೊಂದು ಬೊಟ್ಟಿಗೆ ಒಬ್ಬೊಬ್ಬ ರಕ್ತಬೀಜನು ಹುಟ್ಟಿ ಬರುತ್ತಾನೆ. ಇಡೀ ರಣರಂಗವೇ ರಕ್ತಬೀಜಮಯವಾಗುತ್ತದೆ. ಅದರಂತೆ ಅನೇಕಮಂದಿ ರಕ್ತಬೀಜರು ಹುಟ್ಟಲೂ ತೊಡಗಿದರು. ಈ ವಿಪರೀತವನ್ನು ನೋಡಿ ದೇವಿ ಕಾಳಿಯನ್ನು ಕರೆದು, ಅವನ ರಕ್ತವು ನೆಲದ ಮೇಲೆ ಬೀಳುವುದಕ್ಕೆ ಮೊದಲೇ ಕುಡಿದುಬಿಡಲು ಹೇಳಿದಳು. ಅನಂತರ ಮಹಾದೇವಿ ಆ ರಕ್ತಬೀಜಂದಿರನ್ನೂ, ಅಸಲು ರಕ್ತ ಬೀಜಾಸುರನನ್ನೂ ಕೊಂದುಬಿಟ್ಟಳು. ಅವರ ರಕ್ತವು ನೆಲಕ್ಕೆ ಬೀಳುವ ಮೊದಲೇ ಕಾಳಿಕೆ ಕುಡಿದುಬಿಟ್ಟಳು.

ಕಟ್ಟಕಡೆಗೆ ಮಹಾದೇವಿಯೊಂದಿಗೆ ಯುದ್ಧಮಾಡಿ ಸತ್ತವರು ಶುಂಭ, ನಿಶುಂಭರು. ಉಳಿದ ರಾಕ್ಷಸರು ದೇವಿಗೇ ಶರಣಾಗತರಾಗಿ ಅವಳಿಂದ ಅಭಯದಾನ ಪಡೆದು, ಪಾತಾಳಕ್ಕೆ ಹೊರಟುಹೋದರು.





# ದೇವೀಭಾಗವತ

ಆದಿಶಕ್ತಿಯೂ ಪರದೇವತೆಯೂ ಆದ ಮಹಾದೇವಿಯನ್ನು ಆರಾಧಿಸಿ ವರಗಳನ್ನು ಪಡೆದವರು ಎಷ್ಟೋ ಮಂದಿ ಇದ್ದಾರೆ.

ಅಂತಹವರಲ್ಲಿ ಸುರಥ ಮಹಾರಾಜನು ವಿಶಾಲವಾದ ರಾಜ್ಯಕ್ಕೆ ಅಧಿಪತಿಯಾಗಿ ಒಳ್ಳೆಯ ರೀತಿಯಲ್ಲಿ ಪಾಲಿಸಿಕೊಂಡಿದ್ದನು. ಅವನು ಮಾಡದ ಪುಣ್ಯ ಕಾರ್ಯಗಳಿರಲಿಲ್ಲ. ಪಾಲಿಸದ ನೀತಿ ನಿಯಮಗಳಿರಲಿಲ್ಲ. ಹೀಗೆ ಎಲ್ಲಾ ವಿಧದಲ್ಲಿಯೂ ಸುಖವಾಗಿದ್ದ ಸುರಥ ಮಹಾರಾಜನಿಗೆ ಕೂಡ ಗಂಡಾಂತರ ಬಂದಿತು. ಅರಣ್ಯ ಜಾತಿಯವರೂ, ಪರದೇಶದ ಯವನರೂ ಒಂದೇಸಾರಿ ದೊಡ್ಡ ಸೇನೆಗಳೊಂದಿಗೆ ಸುರಥನ ಮೇಲೆ ಯುದ್ಧಕ್ಕೆ ಬಂದರು.

ಯುದ್ಧದಲ್ಲಿ ಶತ್ರುಗಳು ಮೊರಟರಾಗಿ ಅತ್ಯಧಿಕ ಬಲಗಳೊಂದಿಗೆ ಯುದ್ಧ ಮಾಡಿದುದರಿಂದ, ಸುರಥನಿಗೆ ಅಪಜಯವಾಯಿತು. ಅದರೆಡೆಯಲ್ಲಿ ಅವನ ಮಂತ್ರಿಗಳೂ ಶತ್ರು ಪಕ್ಷಕ್ಕೆ ಒಡಕೊಂಡರು. ಅದರಿಂದ ಸುರಥನ ಪ್ರಾಣಕ್ಕೇ ಗಂಡಾಂತರ ಬಂದಿತು. ಇದನ್ನೆಲ್ಲ ತಿಳಿದು ಸುರಥನು ತನಗೆ ದೈವವು ಅನುಕೂಲಿಸಲಿಲ್ಲವೆಂದು ಚಿಂತಿಸುತ್ತಾ ಹೀಗೆಂದುಕೊಂಡನು :

"ವಿಶ್ವಾಸದ ಮಂತ್ರಿಗಳೇ ಘಾತಮಾಡುವರೆಂದ ಮೇಲೆ, ಅವರನ್ನು ನಂಬುವುದು ಇನ್ನಿಷ್ಟು ಅಪಾಯ. ಅವರು ನನ್ನನ್ನು ಹಿಡಿದುಕೊಂಡು ಹೋಗಿ ಶತ್ರುಗಳ ಕೈಗೇ ಒಪ್ಪಿಸಿಬಿಡುತ್ತಾರೆ. ಒಮ್ಮೆ ಅಡ್ಡದಾರಿಗೆ ಬಿದ್ದು ದುಷ್ಟತನಕ್ಕೆ ಇಳಿದವರು ಎಂತಹ ಕ್ರೂರ ಕರ್ಮವನ್ನಾದರೂ ಮಾಡಿಬಿಡುತ್ತಾರೆ. ಅಂಥವರಿಗೆ ನೀತಿ ನಿಯಮಗಳ ಗೊಡವೆ ಎಲ್ಲಿಯದು? ಅಂಥವರು ತಂದೆ, ತಾಯಿ, ತಾತ, ಬಂಧು, ಸ್ನೇಹ ಮುಂತಾದ ಆತ್ಮೀಯ ಸಂಬಂಧವನ್ನೆಲ್ಲಾ ಕಡಿದೊಗೆದು ಬಿಡುತ್ತಾರೆ!"

ಹೀಗೆಂದುಕೊಂಡು ಸುರಥನು ವೇಗವಂತವಾದ ತನ್ನ ಕುದುರೆಯನ್ನು ಓಡಿಸಿಕೊಂಡು ಗಾಢಾರಣ್ಯದೊಳಗೆ ಹೋಗಿಬಿಟ್ಟನು. ಅದು ಕಾಗೆಗಳು ಪ್ರವೇಶಿಸಲಾಗದಂತಹ ಕಟ್ಟಡವಿ. ದಟ್ಟವಾಗಿ ಕಾಡು ಬಳ್ಳಿಗಳು ಹೆಣೆದುಕೊಂಡು ಭಾರೀ ಮರೆಗಳು

೧೬. ಸುರಥನ ಕಥೆ



ತುಂಬಿದ್ದುವು. ಅವುಗಳ ನಡುವೆ ನದಿಗಳೂ, ನೀರೋಳೆಗಳೂ ಪ್ರವಹಿಸುತ್ತಿದ್ದುವು. ಹುಲಿಗಳು, ಸಿಂಹಗಳು, ಆನೆಗಳು, ಜಿಂಕೆಗಳು ಮೊದಲಾದ ಮೃಗಗಳು ಸ್ವೇಚ್ಛೆಯಾಗಿ ತಿರುಗುತ್ತಿದ್ದುವು. ಸುರಥನು ಮುಂದೆ ಹೋಗುತ್ತಿದ್ದಂತೆ, ಅಂತಹ ಕೀಕಾರಣ್ಯದ ಮಧ್ಯದಲ್ಲಿಯೂ ಬ್ರಹ್ಮಚಾರಿಗಳು ಪಠಿಸುವ ವೇದ ಪಾಠಗಳು ಕೇಳಿಬರ ತೊಡಗಿದುವು. ಹೋಮ ಮಾಡಿದ ಸುವಾಸನೆಯ ಧೂಮಗಾಳಿ ಸುಳಿಯುತ್ತಿದ್ದಿತು. ಚೆನ್ನಾಗಿ ಹಣ್ಣಾದ ಹಣ್ಣುಗಳ ಪರಿಮಳವೂ ಬರತೊಡಗಿತು. ಅವನ ಮನಸ್ಸಿನೊಳಗೆ ಏನೋ ಆಶಾಂಕುರವು ತಲೆಯೆತ್ತ ತೊಡಗಿತು.

ಸುರಥನಿಗೆ ಒಂದು ಆಶ್ರಮವು ಕಂಡಿತು. ಅವನು ಅಲ್ಲಿಗೆ ಹೋಗಿ, ಶಿಷ್ಯರಿಗೆ ಪಾಠ ಹೇಳುತ್ತಿದ್ದ ಒಬ್ಬ ಮುನಿಯನ್ನು ನೋಡಿದನು. ಅವನ ಶರೀರವು ತಪಸ್ಸಿನಿಂದ ಕೃಶವಾಗಿದ್ದರೂ ಮುಖದಲ್ಲಿ ತೇಜಸ್ಸಿದ್ದಿತು. ಜಿಂಕೆಯ ಚರ್ಮದ ಮೇಲೆ ಕುಳಿತಿದ್ದನು. ಪ್ರಶಾಂತವಾದ ಆ ಮುನಿಯ ಮುಖವನ್ನು ನೋಡಿ ಸುರಥನಿಗೆ ಆಯಾಸ ಪರಿಹಾರವಾದಂತಾಯಿತು. ಅವನು ತನ್ನ ಕುದುರೆಯನ್ನು ಒಂದು ಮರಕ್ಕೆ ಕಟ್ಟಿ, ಮುನಿಯ ಬಳಿಗೆ ಹೋಗಿ ಸಾಷ್ಟಾಂಗ ನಮಸ್ಕಾರ ಮಾಡಿ, ಧಾರಾಕಾರವಾಗಿ ಕಣ್ಣೀರು ಸುರಿಸುತ್ತ ಕೈ ಮುಗಿದು ಕುಳಿತನು.

ಮುನಿ ಅವನ ಬೆನ್ನು ತಟ್ಟಿ ಆದರಿಸಿ, ಒಬ್ಬ ಶಿಷ್ಯನ ಮೂಲಕ ಜಿಂಕೆಯ ಚರ್ಮವನ್ನು ತರಿಸಿ, ಅದರ ಮೇಲೆ ಅವನನ್ನು ಕುಳಿತುಕೊಳ್ಳಲು ಹೇಳಿ, ಫಲ ಪಾನಿಯಗಳನ್ನು ತರಿಸಿಕೊಟ್ಟು ಆತಿಥಿ ಮರ್ಯಾದೆಗಳನ್ನೆಲ್ಲ ಮಾಡಿ, "ಅಪ್ಪಾ, ನೀನು ಎಲ್ಲಿಂದ ಬರುತ್ತಿರುವಿ? ನಿನಗೆ ಬಂದ ಕಷ್ಟವೇನು? ಎಲ್ಲವನ್ನೂ ವಿವರವಾಗಿ ಹೇಳು. ನಿನ್ನನ್ನು ನೋಡಿದರೆ ಒಳ್ಳೆಯ ಕಾರ್ಯಗಳಲ್ಲೇ ನಿರತನಾದವನಂತೆ ಕಾಣುವಿ. ನಿನ್ನ ಮನಸ್ಸಿನೊಳಗಿರುವ ಒಳ್ಳೆಯ ಬಯಕೆ ಎಷ್ಟು ಕಷ್ಟಸಾಧ್ಯವಾದುದಾದರೂ ನಾನು ಅದನ್ನು ತೀರಿಸುತ್ತೇನೆ. ಹೇಳಪ್ಪ." ಎಂದನು.

ಅದಕ್ಕೆ ಸುರಥನು ಗದ್ಗದ ಸ್ವರದಿಂದ, "ನಾನು "ಸುರಥನೆಂಬ ಹೆಸರಿನ ಒಬ್ಬ ರಾಜ. ಶತ್ರುಗಳಿಂದಲೂ ಹಿತ. ಶತ್ರುಗಳಿಂದಲೂ ಸೋತು ತಪ್ಪಿಸಿಕೊಂಡು ಬಂದು ನಿಮ್ಮ ಚರಣ ಸನ್ನಿಧಿಯಲ್ಲಿದ್ದೇನೆ. ನಾನು ರಾಜ್ಯವನ್ನೂ, ಹೆಂಡತಿ ಮಕ್ಕಳನ್ನೂ ಬಿಟ್ಟು ಈ ಅರಣ್ಯಕ್ಕೆ ಓಡಿ ಬಂದಿದ್ದೇನೆ. ಅವರ ದೃಷ್ಟಿಯಲ್ಲಿ ನಾನು ಸತ್ತುಹೋದವನೇ. ಆದರೂ ಬದುಕಿರುವ ನನಗೆ ಇಲ್ಲಿ ಈಗ ತಾಯಿಯೂ ತಂದೆಯೂ ಎಲ್ಲವೂ ನೀವೇ! ನಿಮ್ಮ ಸೇವೆಯಲ್ಲಿ ನೀವು ಹೇಳಿದ ಕೆಲಸಗಳೆಲ್ಲವನ್ನೂ ಮಾಡುತ್ತ ಇಲ್ಲಿರುತ್ತೇನೆ. ನಾನು ಯಾವ ದುರಾಶೆಗೂ ಹೋಗದೆ ನನ್ನ ಪಾಡಿಗಿದ್ದರೂ, ಶತ್ರುಗಳು ದುರಾಶೆಯಿಂದ ನನಗೆ ಇಂಥ ಗತಿಯನ್ನು ತಂದಿಟ್ಟರು. ಈಗ ನಿಸ್ಸಹಾಯಕನಾಗಿರುವ ನನಗೆ ನಿಮ್ಮ ದಯದಿಂದ ಶತ್ರು ಭಯವು ಹೋಗಿ, ನನ್ನ

ಕಡೆಯವರ ಬಳಿಗೆ ನಾನು ಸೇರುವಂತಾದರೆ ಅದಕ್ಕಿಂತ ಹೆಚ್ಚಿನ ಸಂತೋಷ ಬೇರೇನಿಲ್ಲ. ಇದೇ ನನ್ನ ಬಯಕೆ " ಎಂದನು.

ಮುನಿ ಅವನಿಗೆ ಅಭಯ ಕೊಡುತ್ತ, "ನೀನು ಇಲ್ಲಿ ವನವೃತ್ತಿ ಅವಲಂಬಿಸಿ, ಅರಣ್ಯ ಧಾನ್ಯಗಳ ಅನ್ನ ಉಣ್ಣುತ್ತ, ಶುಚಿಯಾಗಿದ್ದು, ಹಿಂಸೆಮಾಡದೆ ನಮ್ಮ ಆಶ್ರಮವನದಲ್ಲಿ ಸ್ವೇಚ್ಛೆಯಾಗಿ ಸಂಚರಿಸಿ ಕೊಂಡಿರು. ಯಾವ ವನ ಮೃಗಗಳಿಂದಲೂ ನಿನಗೇನೂ ಆಗದು. ಕ್ರಮವಾಗಿ ನಿನ್ನ ಎಲ್ಲಾ ಶುಭೇಚ್ಛೆಗಳೂ ನೆರವೇರುತ್ತವೆ." ಎಂದನು.

ಈ ಮಾತುಗಳನ್ನು ಕೇಳಿ ಸುರಥನಿಗೆ ಸಂತೋಷ ವಾಯಿತು. ಮುನಿಯ ಮಾತಿನ ಮೇಲೆ ವಿಶ್ವಾಸವಿಟ್ಟು ಮುನಿ ವೃತ್ತಿ ಹಿಡಿದು ಆಶ್ರಮದಲ್ಲೇ ಇದ್ದನು.

ಒಂದು ದಿನ ಅವನು ತಣ್ಣಗಿನ ಮರದ ನೆರಳಿನಲ್ಲಿ ಸೇರಿ ತನ್ನನ್ನು ಕುರಿತು ಆಲೋಚಿಸಿಕೊಂಡಿದ್ದನು. ತನ್ನ ಯಾವ ಪ್ರಯತ್ನವೂ ಇಲ್ಲದೆ, ಯಾವ ತಪ್ಪೂ ಇಲ್ಲದೆ ತನಗೆ ಪ್ರಾಪ್ತವಾದ ಕಷ್ಟಗಳನ್ನು, ಅಂದರೆ ರಾಜ್ಯವು ಹೋಗುವುದೂ, ಹೆಂಡತಿ ಮಕ್ಕಳ ವಿಯೋಗವೂ, ಶತ್ರುಗಳ ಮುಂದೆ ಪರಾಭವ ವಾದುದೂ, ವಿಶ್ವಾಸಿಗಳು ಮಾಡಿದ ಘಾತಗಳೂ ಇವನ್ನೆಲ್ಲ ಕುರಿತು ಆಲೋಚಿಸುವಾಗ, ಒಬ್ಬ ಹೊಸ ಮನುಷ್ಯನು ಅಲ್ಲಿಗೆ ಬಂದನು. ಅವನು ಅತ್ಯಂತ ದೀನಸ್ಥಿತಿಯಲ್ಲಿರುವಂತೆ ಕಾಣುತ್ತಿದ್ದನು.

ಸುರಥನು ಅವನನ್ನು ಕುಳಿತುಕೊಳ್ಳುವಂತೆ ಹೇಳಿ, "ಯಾರು ನೀನು? ಯಾವ ಕೆಲಸದ ಮೇಲೆ ಈ ಕಡೆಗೆ ಬಂದೆ? ನರಸಂಚಾರವಿಲ್ಲದೆ, ಘೋರ ನೋಟಕ್ಕೆ ಭಯಂಕರವಾಗಿ ಕಾಣುವ ಈ ವನಪ್ರದೇಶಕ್ಕೆ ನೀನು ಬರಬೇಕಾದರೆ ಏನೋ ಕಷ್ಟ ಬಂದಿರಬೇಕು. ಏನು ಕಷ್ಟವೋ ಹೇಳುವಂಥಾದ್ದಾದರೆ ಹೇಳು. ಕೆಲವು ಕಷ್ಟ ಗಳನ್ನು ಇನ್ನೊಬ್ಬರೊಡನೆ ಹೇಳಿಕೊಂಡರೆ ಸಮಾಧಾನ ವೆನಿಸುತ್ತದೆ " ಎಂದನು.



ಅದಕ್ಕೆ ಆ ಮನುಷ್ಯ, "ನಾನು ವೈಶ್ಯ ವೃತ್ತಿ ಯವನು. ದೊಡ್ಡ ಐಶ್ವರ್ಯವಂತನು. ಸತ್ಯವ್ರತ ಹಿಡಿದವನು. ದಾನಧರ್ಮಗಳನ್ನು ಧಾರಾಳವಾಗಿ ಮಾಡುತ್ತ ಬಹಳ ಉದಾರನೆಂದು ಹೆಸರು ಪಡೆ ದವನು. ಹುಟ್ಟಿದಂದಿನಿಂದ ಕಷ್ಟವೆಂಬುದನ್ನು ಅರಿಯ ದವನು. ಅಂತಹ ನನ್ನನ್ನು ಹೆಂಡತಿಯೂ, ಮಕ್ಕಳೂ ಧನಲೋಭದಿಂದ ತಿರುಗಿಬಿದ್ದು ಓಡಿಸಿಬಿಟ್ಟರು, ನಮ್ಮವರೇ ನನ್ನನ್ನು ಓಡಿಸಿಬಿಟ್ಟ ಮೇಲೆ, ಊರೊಳಗೆ ಎಲ್ಲಿ ಹೋಗಿ ಏನು ಪ್ರಯೋಜನ? ಈ ಅರಣ್ಯಕ್ಕೆ ಬಂದುಬಿದ್ದೆನು. ನನ್ನ ಹೆಸರು ಸಮಾಧಿ. ತಾವು ಯಾರೋ? ನಾನು ತಿಳಿಯಬಹುದೆ? ತಮ್ಮ ಮುಖ ನೋಡಿದರೆ ಒಳ್ಳೆಯ ರಾಜ ಕಳೆ ಸ್ಫುರಿಸು ತ್ತದೆ " ಎಂದನು.

"ನನ್ನ ಹೆಸರು ಸುರಥ. ನಾನು ರಾಜನಾಗಿದ್ದವನು. ಶತ್ರುಗಳ ಮುಂದೆ ಸೋತು, ದುರ್ಮರಣ ಹೊಂದಲು ಇಷ್ಟವಿಲ್ಲದೆ, ನಿನ್ನ ಹಾಗೆಯೇ ಈ ಅರಣ್ಯಕ್ಕೆ ಬಂದು



ಬಿದ್ದವನು. ಭಾಗ್ಯವೆಲ್ಲಾ ಹೋಗಿ. ಅಭಿಮಾನವನ್ನು ಕಳೆದುಕೊಂಡು, ಜಡನ ಹಾಗೆ ಇಲ್ಲಿ ಸಂಚರಿಸಿ ಕೊಂಡಿದ್ದೇನೆ. ಇಲ್ಲಿರುವ ಯಾವ ಮೃಗಗಳೂ ಹಾನಿ ಮಾಡುವಂಥವಲ್ಲ. ಅಂಥ ಪ್ರಭಾವಶಾಲಿಗಳಾದ ಮುನಿಯೊಬ್ಬರು ಇಲ್ಲಿಯೇ ಇದ್ದಾರೆ. ದೈವಿಕವಾಗಿ ನಾವಿಬ್ಬರೂ ಇಲ್ಲಿ ಸೇರಿಕೊಂಡೆವು. ಆದುದರಿಂದ ಎಲ್ಲಾ ಚಿಂತೆಗಳನ್ನೂ ಬಿಟ್ಟು ಇಲ್ಲಿಯೇ ಸುಖ ವಾಗಿರೋಣ. ಏನನ್ನುವಿ?" ಎಂದನು ಸುರಥ.

ಆದಕ್ಕೆ ವೈಶ್ಯನು, "ರಾಜಾ, ನನ್ನ ಮನಸ್ಸಿಗೆ ಶಾಂತಿ ಸಮಾಧಾನಗಳೆಲ್ಲಿಯದು? ಹೆಂಡತಿಯ ಸುಖ ವಿಲ್ಲದೆ ಹೋಯಿತು. ನನ್ನ ಕುಟುಂಬದ ಆಧಾರ ಹಾಳಾಯಿತು. ಪುತ್ರರು ಅಪ್ರಯೋಜಕರಾದರು. ನಾನು ಹೊಟ್ಟೆ ಬಾಯಿ ಕಟ್ಟಿ ಸೇರಿಸಿದ ಹಣವನ್ನೆಲ್ಲಾ ನನ್ನ ಪುತ್ರರು ದುಂದು ವ್ಯಯಮಾಡಿ ದರಿದ್ರರಾಗಿ ಬೀದಿಗೆ ಬೀಳುವರೇನೋ ಎಂಬ ಚಿಂತೆಯಿಂದ ನನಗೆ ಶಾಂತಿ ಇಲ್ಲವಾಗಿದೆ. ಎಷ್ಟೇ ಕೆಟ್ಟವರಾದರೂ ಪುತ್ರ ಪಾಶ ಬಿಡುವುದಿಲ್ಲ ಅನ್ನುತ್ತೆ. ನಾನು ಇನ್ನು ಜೀವ ದಿಂದ ಅವರನ್ನು ನೋಡುವೆನೋ ಇಲ್ಲವೋ!" ಎಂದು ಕೊಡ ಕೊಡ ಕಣ್ಣೀರು ಸುರಿಸಿದನು ಸಮಾಧಿ.

ಹೀಗೆ ಶೋಕಿಸುವ ಸಮಾಧಿಯನ್ನು ನೋಡಿ ಸುರಥನು, "ನಿನ್ನನ್ನು ಮನೆಯಿಂದ ಓಡಿಸಿದ ಆ ರಾಕ್ಷಸರನ್ನು ನೀನು ಮತ್ತೆ ನೋಡಿದರೆ ಮಾತ್ರ ನಿನಗೆ ಏನು ಸುಖ ಉಂಟಾದೀತು? ನಾನು ಕೂಡಾ ವಿಶಾಲವಾದ ನನ್ನ ರಾಜ್ಯವೆಲ್ಲಾ ಹೋದುದಕ್ಕೆ ದುಃಖಿಸುತ್ತಲೇ ಇದ್ದೇನೆ. ದೈವಿಕವಾಗಿ ಬರುವ ಕಷ್ಟ ಗಳನ್ನು ದಾಟಬೇಕಾದರೆ ಅವುಗಳನ್ನು ಅನುಭವಿಸಲೇ ಬೇಕಾಗುತ್ತೆ. ಆದರೂ ಇಲ್ಲಿ ಇರುವ ಮುನಿಯ ಹತ್ತಿರ ಮಾತಾಡಿದರೆ, ನಮ್ಮ ದುಃಖವು ತೊಲಗು ವಂತಹ ಉಪಾಯವಿದ್ದರೆ ಹೇಳುವರು. ಅವರ ದರ್ಶನಮಾಡಿದರೂ ಸಹ ಒಂದು ಬಗೆಯ ಧನ್ಯತೆ ಯುಂಟಾಗುತ್ತದೆ. ಹೋಗೋಣ ಬಾ" ಎಂದನು.

ವೈಶ್ಯ ಸಮಾಧಿ ಅದಕ್ಕೆ ಒಪ್ಪಿದನು. ಇಬ್ಬರೂ ಮುನಿಯ ಬಳಿಗೆ ಹೋಗಿ ನಮಸ್ಕಾರಮಾಡಿ ನಿಂತರು. ಸುರಥನು ಮುನಿಯೊಂದಿಗೆ ಹೀಗೆಂದನು:

"ಇವನ ಹೆಸರು ಸಮಾಧಿ. ವೈಶ್ಯ ವೃತ್ತಿಯವನು. ಈ ಅರಣ್ಯದಲ್ಲಿ ನನಗೆ ಮಿತ್ರನಾದನು. ಈ ಪುಣ್ಯಾತ್ಮ ನನ್ನು ಹೆಂಡತಿ ಮಕ್ಕಳೇ ಹೊರಡಿಸಿಬಿಟ್ಟರು. ಇವನು ಈಗ ನಿಮಗೆ ಶರಣಾರ್ಥಿಯಾಗಿ ಬಂದಿದ್ದಾನೆ. ನನ್ನನ್ನು ಕಾಪಾಡಿದ ವಿಧವಾಗಿಯೇ, ಪಾಪ, ಇವನನ್ನು ಕೂಡಾ ಕಾಪಾಡಬೇಕು. ನಿಮ್ಮ ದಯ ದಿಂದ ನಾನು ಇಲ್ಲಿ ಸುಖವಾಗಿದ್ದೇನೆ. ಆದರೂ ನಾನು ಪಟ್ಟ ಕಷ್ಟಗಳನ್ನು ಮರೆಯಲಾಗದೆ ನಿದ್ದೆ ಸರಿಯಾಗಿ ಬರುವದಿಲ್ಲ. ಸ್ವಾಮೀ, ನಮ್ಮ ದುಃಖವು ನಿವಾರಣೆಯಾಗುವಂತಹ ಒಂದು ಮಾರ್ಗವನ್ನು ನೀವು ತಿಳಿಸಬೇಕು."

ಈ ಪ್ರಾರ್ಥನೆಯನ್ನು ಕೇಳಿ ಮುನಿ, "ಅಪ್ಪ ಗಳಿರಾ, ತ್ರಿಮೂರ್ತಿಗಳಿಗಾದರೂ ಮಾಯೆ ತಪ್ಪಿದ್ದಲ್ಲ.

ಅವರು ಕೂಡಾ ಮೋಹ ಸಮುದ್ರದಲ್ಲಿ ಬಿದ್ದು ತೊಳಲುತ್ತಾರೆನ್ನುವಾಗ, ನಿಮ್ಮಂತಹ ಮಾನವ ಮಾತ್ರರ ಸಂಗತಿ ಕೇಳಬೇಕೆ? ಇದಕ್ಕೊಂದು ಕಥೆಯನ್ನು ಹೇಳುತ್ತೇನೆ." ಎಂದು ಕಥೆಯನ್ನು ಹೇಳಿದನು. ಅದೇನೆಂದರೆ : ಹಿಂದೆ ಕೃತಯುಗವು ನಡೆಯುತ್ತಿದ್ದಾಗ ಶ್ವೇತದ್ವೀಪದಲ್ಲಿ ನಾರಾಯಣನು ತಪಸ್ಸು ಮಾಡಿಕೊಂಡಿದ್ದನು. ಅದೇ ಕಾಲದಲ್ಲಿ ಬ್ರಹ್ಮನೂ ಸಹ ತನ್ನ ಮೋಹ ನಿವೃತ್ತಿಗಾಗಿ ನಾರಾಯಣನ ಸಮೀಪ ಕುಳಿತು ತಪಸ್ಸಿಗೆ ತೊಡಗಿದನು.



ಇಬ್ಬರೂ ಒಬ್ಬರನ್ನೊಬ್ಬರು ನೋಡಲೂ ಇಲ್ಲ. ಸ್ವಲ್ಪ ಕಾಲದ ಮೇಲೆ ಇಬ್ಬರೂ ತಪಸ್ಸನ್ನು ಸಾಕು ಮಾಡಿ ಎದ್ದು ಹೋಗುತ್ತ, ಒಂದು ಕಡೆಯಲ್ಲಿ ಒಬ್ಬರನ್ನೊಬ್ಬರು ಸಂಧಿಸಿ, "ನೀನು ಯಾರು? ನೀನು ಯಾರು?" ಎಂದು ಆಶ್ಚರ್ಯಪಡುತ್ತ ಪರಸ್ಪರ ಪ್ರಶ್ನಿಸಿಕೊಂಡರು.

"ನಾನು ಚರಾಚರ ಪ್ರಪಂಚವನ್ನೆಲ್ಲಾ ಸೃಷ್ಟಿ ಮಾಡಿದವನು" ಎಂದನು ಬ್ರಹ್ಮ. ಅದನ್ನು ಕೇಳಿ ವಿಷ್ಣು, "ಜಗತ್ತನ್ನೆಲ್ಲಾ ನೀನೇ ಸೃಷ್ಟಿಸಿರುವುದಾಗಿ ನನ್ನ ಹತ್ತಿರ ಹೇಳುವಿಯಾ? ನೀನೆಷ್ಟರವನು ನನ್ನ ಮುಂದೆ? ನಾನು ವಿಷ್ಣು ತಿಳಿದುಕೋ. ಈ ಸೃಷ್ಟಿಯನ್ನೆಲ್ಲಾ ನಾನೇ ಸೃಷ್ಟಿಸಿದೆ. ಆ ದಿನ ನಾನು ಮಧುಕೈಟಭರನ್ನು ಕೊಂದು ನಿನ್ನನ್ನು ಕಾಪಾಡಿದ. ಮಾತಿಗೆ ಏನು ಹೇಳುತ್ತೀ? ನಾನು ನಿನ್ನನ್ನು ಬೆಳೆಸಿ ದೊಡ್ಡವನನ್ನಾಗಿ ಮಾಡಿದುದನ್ನೂ, ದಾನವರು ನಿನ್ನ ಮೇಲೆ ಏರಿ ಬರುವಾಗ ನೀನು ಹೆದರಿ ಓಡಿದ ಸಂಗತಿಯನ್ನೂ ಮರೆಯುವಂಥ ರಾಜಸವಾದ ಜಡ ಬ್ರಹ್ಮಗುಣ ನಿನ್ನದು. ಏಕೆ ನಿನಗಿಷ್ಟು ಗರ್ವ? ಎಲ್ಲಿಂದ ಬಂತು ನಿನಗಿಷ್ಟು ಮರೆವು? ಇನ್ನಾದರೂ ತುಸು ಎಚ್ಚರಿಕೆಯಿಂದಿರು." ಎಂದನು.

"ನೀನು ಮಾತ್ರ ಜಂಬ ಹೇಳಿಕೊಳ್ಳುವುದಿಲ್ಲವೆ? ನೀನು ರಾಕ್ಷಸರೊಂದಿಗೆ ಯುದ್ಧ ಮಾಡುವಾಗ ಜಗದಂಬೆ ನಿನಗೆ ಸಹಾಯ ಮಾಡಿದುದನ್ನು ಮರೆತೆಯಾ? ಅಂತಹ ನಿನಗೇಕೆ ಇಷ್ಟೆಲ್ಲ ಬಿಂಕ? ಅಂತಹ ನಿನ್ನ ಮಗನಾದ ನನಗೆ ನಿನಗಿಂತ ಹೆಚ್ಚು ಬಿಂಕವಿದ್ದರೆ ತಪ್ಪೇನಾಯಿತು?" ಎಂದ ಬ್ರಹ್ಮ.

"ನನ್ನನ್ನೇ ಮೀರಿಸುವವನೋ ನೀನು?" ಎಂದನು ವಿಷ್ಣು. ಹೀಗೆ ಬ್ರಹ್ಮ ವಿಷ್ಣುಗಳು ವಾದವಿವಾದ ಮಾಡಿಕೊಂಡಿರುವಾಗ ಅವರ ಮುಂದೆ ಒಂದು ಮಹಾ ಲಿಂಗವು ಕಾಣಬಂದಿತು. ಆ ಲಿಂಗದಿಂದ ಗಂಭೀರ ಸ್ವರದಲ್ಲಿ ಈ ಮಾತುಗಳು ಹೊರಟು ಬಂದುವು:

"ಓ ನಾರಾಯಣಾ! ಓ ಬ್ರಹ್ಮಾ! ನಿಮ್ಮ ವಾಗ್ವಾದವನ್ನು ಕಟ್ಟಿಟ್ಟು, ನಾನು ಹೇಳುವುದನ್ನು ಕೇಳಿರಿ. ಈ ಶ್ವೇತ ದ್ವೀಪದಲ್ಲಿ ಈಗ ಉದ್ಭವಿಸಿದ ಈ ಲಿಂಗದ ತಲೆಯನ್ನು ನೋಡಲು ಒಬ್ಬರೂ, ಬುಡವನ್ನು ನೋಡಲು ಒಬ್ಬರೂ ಹೋಗಿರಿ. ನಿಮ್ಮಲ್ಲಿ ಯಾರು ಮೊದಲು ತಿರುಗಿ ಬರುತ್ತಾನೋ ಅವನೇ ನಿಮ್ಮಿಬ್ಬರಲ್ಲಿ ದೊಡ್ಡವನು!"



ಇಬ್ಬರೂ ಇದಕ್ಕೆ ಒಪ್ಪಿಕೊಂಡರು. ಲಿಂಗದ ಬುಡವನ್ನು ನೋಡಲು ವಿಷ್ಣು ಪಾತಾಳಕ್ಕೂ, ಅದರ ತಲೆಯನ್ನು ನೋಡಿ ಬರಲು ಬ್ರಹ್ಮನು ಆಕಾಶಕ್ಕೂ ಹೊರಟರು.

ವಿಷ್ಣು ಪಾತಾಳದಲ್ಲಿ ಎಷ್ಟು ಆಳಕ್ಕೆ ಹೋದರೂ ಅದರ ಬುಡವು ಕಾಣಲೇ ಇಲ್ಲ. ತನಗೆ ಅದರ ಬುಡವು ಕಾಣಲಾರದೇನೋ ಎಂದು ವಿಷ್ಣು ತಲ್ಲಣಗೊಳ್ಳತೊಡಗಿದನು.

ಹಾಗೆಯೇ ಬ್ರಹ್ಮನು ಆಕಾಶದ ಮೇಲೆ ಎಷ್ಟು ಎತ್ತರಕ್ಕೆ ಹೋದರೂ ಲಿಂಗದ ತಲೆ ಕಾಣಲಿಲ್ಲ. ಬ್ರಹ್ಮನಿಗೆ ಬಹಳ ಲಜ್ಜೆಯೂ, ದುಃಖವೂ ಉಂಟಾಯಿತು. ಅವನು ಏನೂ ತೋರದೆ ಒಂದು ಕಡೆಯಲ್ಲಿ ನಿಂತಿರುವಾಗ, ಮೇಲಿನಿಂದ ಭೂಮಿಯ ಕಡೆಗೆ ಬೀಳುತ್ತಿದ್ದ ಒಂದು ಕೇದಿಗೆಯ ಹೂ ಕಂಡು ಬಂತು. ಬ್ರಹ್ಮನು ಅದನ್ನು ಹಿಡಿದು ಅತ್ಯಾನಂದದಿಂದ ವಿಷ್ಣು ಇರುವ ಸ್ಥಳಕ್ಕೆ ಹೋಗಿ, "ನಾನು ಲಿಂಗದ ತಲೆಯನ್ನು ನೋಡಿ ಬಂದೆ. ಅಲ್ಲಿದ್ದ ಈ ಕೇದಿಗೆ ಹೂವನ್ನು ತಂದೆ ನೋಡು!" ಎಂದನು.

ಆಗ ವಿಷ್ಣು ಆ ಕೇದಿಗೆ ಹೂವಿನೊಂದಿಗೆ "ನಿಜವೇನೆಂದು ನೀನೇ ಹೇಳಿಬಿಡು. ಈ ಬ್ರಹ್ಮ ನಿಜಕ್ಕೂ ಲಿಂಗದ ತಲೆಯನ್ನು ನೋಡಿದನೇನು ? ನಿನ್ನನ್ನು ದೇವತೆಗಳು ನಿಜಕ್ಕೂ ಲಿಂಗದ ತಲೆಯ ಮೇಲೆ ಇರಿಸಿದರೇ ? ನಿನ್ನನ್ನು ಬ್ರಹ್ಮನು ಅಲ್ಲಿಂದಲೇ ತೆಗೆದಿರುವನೆ? " ಎಂದು ಕೇಳಿದನು.

" ಹೌದು! ಬ್ರಹ್ಮ ಹೇಳಿದ್ದು ನಿಜವೇ!" ಎಂದು ಕೇದಿಗೆ ಹೂ ಸುಳ್ಳು ಹೇಳಿತು. ವಿಷ್ಣು ಆ ಮಾತನ್ನು ನಂಬದೆ, "ಲೋಕದಲ್ಲಿ ಅನೇಕ ಮಂದಿ ಹಣದ ಆಸೆಯಿಂದ ಕಳ್ಳ ಸಾಕ್ಷಿ ಹೇಳುತ್ತಾರೆ. ಈ ವಿಷಯದಲ್ಲಿ ಶಿವನ ಮಾತು ಹೊರತು ಇನ್ನಾರ ಮಾತನ್ನೂ ನಾನು ನಂಬಲಾರೆ. ನಮ್ಮನ್ನು ಈ ಕಾರ್ಯಕ್ಕೆ ಹೊರಡಿಸಿದ ಶಿವನೇ ಈಗ ಸತ್ಯ ಹೇಳಲಿ!" ಎಂದನು.

ಆಗ ಅಲ್ಲಿ ಲಿಂಗರೂಪವು ಅಂತರ್ಧಾನವಾಗಿ ಶಿವನೇ ಪ್ರತ್ಯಕ್ಷನಾದನು. ಶಿವನು ವಿಷ್ಣುವನ್ನು ನೋಡಿ, "ಕೇದಿಗೆ ಹೂ ಸುಳ್ಳು ಹೇಳಿತು. ಅದು ನನ್ನ ತಲೆಯ ಮೇಲಿನಿಂದ ಕೆಳಗೆ ಬೀಳುವಾಗ ದಾರಿಯಲ್ಲಿ ಬ್ರಹ್ಮನು ಅದನ್ನು ಹಿಡಿದು ಎತ್ತಿಕೊಂಡನೇ ಹೊರತು, ಅವನು ನನ್ನ ತಲೆಯನ್ನು ನೋಡಿದವನಲ್ಲ" ಎಂದನು.

ಆಗಲೇ ಶಿವನು ಕೇದಿಗೆ ತನ್ನ ಪೂಜೆಗೆ ಅನರ್ಹವಾಗಲೆಂದು ಶಾಪ ಕೊಟ್ಟನು. ಆ ಮೇಲೆ ಬ್ರಹ್ಮ ವಿಷ್ಣುಗಳು ಗರ್ವವಡಗಿ ತಮ್ಮ ದಾರಿ ಹಿಡಿದು ಹೋದರು.

ಮುನಿ ಸುರಥನಿಗೂ ಸಮಾಧಿಗೂ ಈ ಕಥೆಯನ್ನು ಹೇಳಿದ ಮೇಲೆ, ಹೀಗೆಂದನು :

"ಆದುದರಿಂದ ರಾಜಾ, ಮೋಹವನ್ನು ದಾಟಲು ಎಂಥವರಿಗೂ ಸಾಧ್ಯವಿಲ್ಲ. ಎಷ್ಟೇ ಪ್ರವೀಣ

ರಾದವರೂ ಸಹ ಮೋಹಪಾಶಕ್ಕೆ ಬೀಳುತ್ತಾರೆ. ಹಾಗೆ ಮೋಹಕ್ಕೆ ಬೀಳದಿರುವವಳು ಜಗದಂಬೆ ಯೊಬ್ಬಳೇ. ಆಕೆಯ ದಿವ್ಯ ಲಕ್ಷಣ ವಿಶೇಷಗಳನ್ನು ತಿಳಿದು ವ್ರತದೀಕ್ಷೆ ಹಿಡಿದವರು ಮಾತ್ರವೇ ಮೋಹ ಸಮುದ್ರವನ್ನು ದಾಟಬಲ್ಲವರು. ನೀವೂ ಅಂಥವ ರಾಗಿರಿ" ಎಂದನು.

"ಮಹಾತ್ಮರೇ, ಆ ವ್ರತದ ಲಕ್ಷಣಗಳೇನೆಂದು ಅಪ್ಪಣೆ ಮಾಡಬೇಕು" ಎಂದು ಸುರಥನು ಮುನಿ ಯನ್ನು ಕೇಳಿದನು. ಮುನಿ ಹೀಗೆಂದನು:

"ಅಂಬಾದೇವಿಯ ಪೂಜೆ ತುಂಬ ಶುಭಪ್ರದ ವಾದುದು. ಇದನ್ನು ಆಶ್ವಯುಜ ಮತ್ತು ಚೈತ್ರಮಾಸ ಗಳೆರಡರ ಪ್ರಾರಂಭದಲ್ಲಿಯೂ, ಒಂಭತ್ತು ದಿನಗಳ ವರೆಗೆ ಮಾಡಬೇಕು. ಈ ವ್ರತವನ್ನು ಆಚರಿಸು ವವನು ನಿರಾಹಾರಿಯಾಗಿ ಮಂತ್ರ ಜಪ ಮಾಡುತ್ತಾ, ತುಪ್ಪ, ಹಾಲು, ಸಕ್ಕರೆ ಬೆರೆಸಿದ ಪಾಯಸದಿಂದಾಗಲಿ, ಭಕ್ಷ್ಯಗಳಿಂದಾಗಲೀ, ಬಿಲ್ವಪತ್ರಗಳಿಂದಾಗಲೀ, ಹೋಮ ಮಾಡಿ ಬ್ರಾಹ್ಮಣ ಸಂತರ್ಪಣೆ ಮಾಡ ಬೇಕು. ನವರಾತ್ರಿ ಪೂಜೆ ಮಾಡುವವನು ಜಾತಿ ಭೇದ ನೋಡಬಾರದು. ಸ್ತ್ರೀಪುರುಷ ಭೇದವೂ ಇರಬಾರದು. ದೇವಿಯ ಪೂಜೆಗೆ ಆರು ಕೋಣ ಗಳಿರುವ ಯಂತ್ರವನ್ನೂ, ಅದರ ಪಕ್ಕದಲ್ಲಿ ಎಂಟು ಕೋಣಗಳಿರುವ ಯಂತ್ರವನ್ನೂ ರಚಿಸಬೇಕು. ನವಾ ಕ್ಷರೀ ಬೀಜಮಂತ್ರಗಳಿಂದ ಪ್ರಾಣಪ್ರತಿಷ್ಠೆ ಮಾಡಿ, ಮಂಡಲದ ಮಧ್ಯದಲ್ಲಿ ತಾಮ್ರದ ಕಲಶಪಾತ್ರವನ್ನಿಡ ಬೇಕು. ಅದಕ್ಕೆ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಹೋಮವನ್ನೂ, ಅದರ ಹತ್ತು ಪಾಲು ತರ್ಪಣವನ್ನೂ, ತರ್ಪಣದ ಹತ್ತು ಪಾಲು ಬ್ರಾಹ್ಮಣ ಸಂತರ್ಪಣೆ ಮೊದಲಾದ ದಾನ ಧರ್ಮಗಳನ್ನೂ ಮಾಡಬೇಕು. ಹತ್ತನೇ ದಿನದಲ್ಲಿ ತಾನು ಪಾರಣೆ ಮಾಡಬೇಕು, ಈ ಪದ್ಧತಿಯಿಂದ ಮಹಾದೇವಿ ಯನ್ನು ಆರಾಧಿಸಿದವರಿಗೆ ಉತ್ತಮ ಲೋಕಗಳೂ,



ದೇವಿಯ ಸಹಾಯವೂ ಲಭಿಸುತ್ತವೆ. ರಾಜಾ, ದೇವೀ ಪೂಜೆಗೆ ಸಮಾನವಾದುದು ಇನ್ನೊಂದಿಲ್ಲ. ದೇವಿಯನ್ನು ಅರ್ಚಿಸುವುದರ ಮೂಲಕವಾಗಿ, ನಿನ್ನ ಬಂಧುಗಳೆಲ್ಲರನ್ನೂ, ಕಳೆದು ಹೋದ ವೈಭವ ಭಾಗ್ಯ ಗಳನ್ನೂ ತಿರುಗಿ ಸಂಪಾದಿಸಲು ಸಾಧ್ಯವಿದೆ. ಓ ವೈಶ್ಯೋತ್ತಮಾ, ನೀನು ಕೂಡಾ ದೇವಿಯ ಪೂಜೆ ಮಾಡು. ನಿನ್ನ ದುಃಖವೆಲ್ಲಾ ಶಮನವಾಗಿ ನೀನು ಮತ್ತೆ ಧನಿಕನಾಗುವೆ. ನಿನ್ನ ಇಚ್ಛೆ ಏನೋ ಅದೆಲ್ಲ ನೆರವೇರುತ್ತದೆ. ನಿಮಗಿಬ್ಬರಿಗೂ ದೇವಿಯ ವ್ರತ ದೀಕ್ಷೆಗೆ ತಕ್ಕ ಕಾಲವು ಇದೀಗ ಪಕ್ವವಾಗಿದೆ."

ಮುನಿ ಹೇಳಿದ ಈ ಮಾತುಗಳಿಗೆ ಆ ಇಬ್ಬರೂ ಸಂತೋಷಪಟ್ಟು "ಮಹಾತ್ಮಾ, ತಮ್ಮ ದಯದಿಂದ ನಮ್ಮ ಮನೋವ್ಯಥೆ ಹೋಯಿತು. ನೀವು ತೋರಿಸಿದ ಮಾರ್ಗವು ಮಂದಟ್ಟಾಯಿತು. ದಯವಿಟ್ಟು ನಮಗೆ ಆ ಮಂತ್ರವನ್ನು ಉಪದೇಶಮಾಡಬೇಕು." ಎಂದು ಕೇಳಿಕೊಂಡರು.

ಮುನಿ ಅವರಿಗೆ ನವಾಕ್ಷರ ಮಂತ್ರವನ್ನು ಬೀಜ ಮಂತ್ರ ಸಹಿತವಾಗಿ ಉಪದೇಶಮಾಡಿದನು. ಅವರು ಮುನಿಯಿಂದ ಅಪ್ಪಣೆ ಪಡೆದುಕೊಂಡು, ಒಂದು ನದೀ ತೀರದ ನಿರ್ಜನ ಪ್ರದೇಶಕ್ಕೆ ಹೋದರು. ಅವರಿಗೆ ನವರಾತ್ರಿ ವ್ರತಮಾಡಲು ಸಾಧ್ಯವಿಲ್ಲದುದರಿಂದ, ಅಲ್ಲಿಯೇ ಕುಳಿತು ಎಲೆ ಚಿಗುರಗಳನ್ನೇ ಸ್ವೀಕರಿಸುತ್ತ ಎರಡು ವರ್ಷ ಆ ಮಂತ್ರವನ್ನು ಜಪಿಸಿದರು.

ಒಂದು ದಿನ ಸ್ವಪ್ನದಲ್ಲಿ ಅವರಿಗೆ ಮಹಾದೇವಿ ಕೆಂಪು ಸೀರೆಯನ್ನು ಧರಿಸಿದವಳಾಗಿ ಕಾಣಿಸಿದಳು. ಆದರೂ ಅವರು ತಪಸ್ಸನ್ನು ಬಿಡದೆ ಮುಂದುವರಿಸುತ್ತ, ಮೂರನೇ ವರ್ಷದಲ್ಲಿ ಜಲವನ್ನು ಮಾತ್ರವೇ ಸ್ವೀಕರಿಸಿ ತಪಸ್ಸು ಮಾಡಿದರು. ಆದರೂ ದೇವಿಯ ಸಾಕ್ಷಾತ್ಕಾರವಾಗಲಿಲ್ಲ.

ಕಡೆಗೆ ಅವರು ಆತ್ಮಾಹುತಿ ಮಾಡಿಕೊಳ್ಳಲು ನಿಶ್ಚಯಿಸಿ, ಒಂದು ಹೊಂಡವನ್ನು ತೋಡಿ ಹೋಮ ಕುಂಡಮಾಡಿ, ಅದರಲ್ಲಿ ಅಗ್ನಿಯನ್ನು ಉರಿಸಿ, ತಮ್ಮ ಮಾಂಸವನ್ನು ಕೊಯಿದು ಹೋಮಮಾಡುವಷ್ಟರಲ್ಲಿ ದೇವಿ ಅವರ ಮುಂದೆ ಪ್ರತ್ಯಕ್ಷಳಾಗಿ, "ಸಾಕು ನಿಲ್ಲಿಸಿರಿ. ನಿಮ್ಮ ಸಾಹಸಕ್ಕೆ ಮೆಚ್ಚಿದೆನು. ವರ ಕೇಳಿರಿ" ಎಂದಳು.

ಸುರಥನು, "ತಾಯೇ! ಶತ್ರುಗಳಿಂದ ಸೋತು ರಾಜ್ಯಭ್ರಷ್ಟನಾಗಿ, ಇಷ್ಟು ಕಾಲದ ಮೇಲೆ ನಿನ್ನ ಪುಣ್ಯ ಫಲಿಸಿ ನಿನ್ನ ದರ್ಶನವಾಯಿತು. ನನ್ನ ರಾಜ್ಯವು ಮೊದಲಿನಂತೆ ನನಗೆ ಬರುವ ಹಾಗೆ ಮಾಡಮ್ಮಾ" ಎಂದು ಬೇಡಿದನು.

"ನೀನು ನಿನ್ನ ಶತ್ರುಗಳನ್ನು ಓಡಿಸುವಿ. ನಿನ್ನ ಮಂತ್ರಿಗಳು ನಿನ್ನ ಸೇವೆಗೆ ಬರುತ್ತಾರೆ. ನೀನು ಸಾವಿರ ವರ್ಷ ಸುಖವಾಗಿ ರಾಜ್ಯವಾಳುವಿ. ನಿನಗೆ ಒಳ್ಳೆಯ ಕಾಲವು ಸಮೀಪಿಸಿತು" ಎಂದಳು ಮಹಾದೇವಿ.

ಸುರಥನು ಅತ್ಯುತ್ಸಾಹದಿಂದ ಮಹಾಶಕ್ತಿವಂತನಾಗಿ ತನ್ನ ಕುದುರೆಯ ಮೇಲೇರಿಕೊಂಡು ಹೋಗಿ, ಪ್ರಜೆಗಳ ಸಹಾಯದಿಂದ ಶತ್ರುಗಳನ್ನು ಜಯಿಸಿ, ಮತ್ತೆ ಚಿರಕಾಲ ರಾಜ್ಯವನ್ನಾಳುತ್ತ ಹೆಂಡತಿ ಮಕ್ಕಳೊಂದಿಗೆ ಸುಖವಾಗಿದ್ದು, ಕಡೆಗೆ ದೇವೀ ಸಾಯುಜ್ಯ ಹೊಂದಿದನು.

ವೈಶ್ಯ ಸಮಾಧಿ ಮಾತ್ರ, "ತಾಯೇ, ನನಗೆ ಸಿರಿ ಸಂಪತ್ತುಗಳೇನೂ ಬೇಡ. ಶಾಶ್ವತ ಸುಖವೇ ಬೇಕು" ಎಂದು ಬೇಡಿದನು. ದೇವಿಯ ಮಂತ್ರ ಜಪತಪಸ್ಸಿನಿಂದಾಗಿ ಅವನ ಮೋಹ ಪಾಶಗಳು ಪೂರ್ತಿ ಕಳಚಿದ್ದುವು. ದೇವಿ ಅವನಿಗೆ ದಿವ್ಯ ಜ್ಞಾನವನ್ನು ಕೊಟ್ಟಳು. ಅವನು ಜೀವಿತಾಂತದವರೆಗೂ ನಿಸ್ಸಂಗನಾಗಿ ತೀರ್ಥ ಯಾತ್ರೆ ಮಾಡುತ್ತ, ಆತ್ಮಾನಂದದೊಂದಿಗೆ ದೇವೀ ಸಾಯುಜ್ಯ ಪಡೆದನು.





# ದೇವೀಭಾಗವತ

**ಪೂ**ರ್ವ ಕಾಲದಲ್ಲಿ ದೇವತೆಗಳಿಗಿಂತ ದೊಡ್ಡವನಾಗಿಯೂ, ದೊಡ್ಡ ತಪಸ್ಸುಮಾಡಿದ ಮಹಾಪುರುಷನಾಗಿಯೂ ಹೆಸರು ಪಡೆದವನಾದ ತ್ವಷ್ಟೃ ಪ್ರಜಾಪತಿಗೆ ಇಂದ್ರನ ಮೇಲೆ ತುಂಬಾ ದ್ವೇಷವಿದ್ದಿತು. ಇಂದ್ರನು ತಪಸ್ವಿಗಳಿಗೆ ವಿರೋಧಿ ಎಂಬುದು ಅವನ ನಂಬುಗೆ. ಅಂತಹ ಇಂದ್ರನನ್ನು ಹತಮಾಡುವುದೇ ಅವನ ಉದ್ದೇಶವಾಯಿತು. ಅದಕ್ಕಾಗಿಯೇ ಅವನು ಮೂರು ತಲೆಗಳಿರುವ ವಿಶ್ವರೂಪನೆಂಬ ಅದ್ಭುತ ಮಗನನ್ನೇ ಸೃಷ್ಟಿ ಮಾಡಿಕೊಂಡನು. ಅವನು ಬೆಳೆದು ದೊಡ್ಡವನಾಗುತ್ತಾ, ಬಂದಂತೆ ಮೂರು ತಲೆಗಳಿಂದ ಒಂದೇ ಬಾರಿ ಬೇರೆ ಬೇರೆ ಕೆಲಸಗಳನ್ನು ಮಾಡುತ್ತಿದ್ದನು. ಒಂದು ಬಾಯಿಯಿಂದ ವೇದಪಠನ ಮಾಡುತ್ತಿದ್ದರೆ, ಇನ್ನೊಂದು ಬಾಯಿಯಿಂದ ಪಾನೀಯವನ್ನು ಕುಡಿಯುವನು. ಮೂರನೇ ಮುಖದಿಂದ ಪ್ರಪಂಚದಲ್ಲಿ ನಡೆಯುವುದನ್ನು ನೋಡುವನು.

ಅಂತಹ ವಿಶ್ವರೂಪನು ಒಂಟಿಕಾಲಿನಿಂದ ನಿಂತೂ, ನೀರಿನ ಮೇಲೆ ಪದ್ಮಾಸನದಲ್ಲಿ ಕುಳಿತೂ, ಬೇಸಗೆಯಲ್ಲಿ ಪಂಚಾಗ್ನಿಗಳ ನಡುವೆ ನಿಂತೂ ನಿರಾಹಾರಿಯಾಗಿ ಅವನು ಘೋರ ತಪಸ್ಸು ಮಾಡುವುದನ್ನು ನೋಡಿ ದೇವೇಂದ್ರನಿಗೆ ಭಯವಾಯಿತು. ಅವನು ತನ್ನ ಇಂದ್ರ ಪದವಿಯನ್ನು ವಶಪಡಿಸಿಕೊಳ್ಳಲಿಕ್ಕಾಗಿಯೇ ಕಠಿನ ತಪಸ್ಸು ಮಾಡುವನೆಂದು ತಿಳಿದು, ಅವನ ತಪಸ್ಸನ್ನು ಭಗ್ನಗೊಳಿಸಬೇಕೆಂದುಕೊಂಡು, ತನ್ನ ಸಭೆಯಲ್ಲಿರುವ ಸುಂದರಾತಿಸುಂದರಿಯರಾದ ರಂಭಾ, ಊರ್ವಶಿ, ಮೇನಕೆಯರನ್ನು ಕರೆದು, "ಸುಂದರಾಂಗಿಯರೇ, ಭೂಮಿಯಲ್ಲಿ ಮೂರು ತಲೆಗಳಿರುವವನೊಬ್ಬನು ನನ್ನ ಸಿಂಹಾಸನದ ಮೇಲಿನ ಆಶೆಯಿಂದ ಘೋರವಾದ ತಪಸ್ಸಿನಲ್ಲಿ ಮಗ್ನನಾಗಿದ್ದಾನೆ. ನೀವು ಹೋಗಿ ನಿಮ್ಮ ಚೆನ್ನಾಟಗಳಿಂದ ಹೇಗಾದರೂ ಅವನ ತಪಸ್ಸನ್ನು ಹಾಳುಮಾಡಿ, ನನಗೆ ಬರಲಿರುವ ಈ ಹಾಳು ವಿಘ್ನವನ್ನು ತೊಲಗಿಸಿಬಿಡಿರಿ. ನಿಮ್ಮ ನೃತ್ಯಗಾನ ಕಲಾ ಕೌಶಲವನ್ನು ಪ್ರದರ್ಶಿಸಿ ಆ ವಿಶ್ವರೂಪನು ಮೋಹ ಪಾಶದಲ್ಲಿ ಸಿಕ್ಕಿಕೊಂಡು ತಪಸ್ಸು ಬಿಟ್ಟು ಹೋಗುವ ಹಾಗೆ

೧೭. ವೃತ್ರನ ವಿಜೃಂಭಣೆ



ಮಾಡಿ ಬನ್ನಿರಿ. ಈ ನಿಮ್ಮ ಸಹಾಯಕ್ಕಾಗಿ ನಿಮ್ಮನ್ನು ತುಂಬಾ ಸಂತೋಷಪಡಿಸುತ್ತೇನೆ" ಎಂದನು.

ಹೀಗೆ ಇಂದ್ರನು ದೀನ ಭಾವದಿಂದ ಹೇಳುವುದನ್ನು ಕೇಳಿ, ಆ ಅಪ್ಸರೆಯರು ಉಬ್ಬಿಕೊಂಡು, "ನೀವು ಆ ಚಿಂತೆ ಬಿಡಿರಿ. ನಮ್ಮ ತಳಕು ಬೆಳಕು ವಿದ್ಯುತ್ ಕಟಾಕ್ಷಗಳಿಂದ ಆ ಮುನಿಯನ್ನು ನಮ್ಮ ದಾಸನಾಗಿ ಮಾಡಿಬಿಡುತ್ತೇವೆ" ಎಂದು ಹೇಳಿ ವಿಶ್ವರೂಪನ ಆಶ್ರಮಕ್ಕೆ ಬಂದರು.

ವಿಶ್ವರೂಪನ ಇದಿರಿನಲ್ಲಿ ಆ ದೇವಲೋಕದ ಅಪ್ಸರಸಿಯರು, ಹಾಡುತ್ತಾ, ನರ್ತಿಸುತ್ತಾ, ಚಿತ್ರವಿಚಿತ್ರವಾದ ಮೋಹಕ ಅಭಿನಯಗಳಿಂದ ಏನೇನು ಮಾಡಿದರೂ, ವಿಶ್ವರೂಪನು ಕುರುಡನೂ ಕಿವುಡನೂ ಆದಂತೆ ಸ್ವಲ್ಪ ಕೂಡಾ ಚಲಿಸದಿದ್ದನು. ಅಪ್ಸರಸಿಯರು ಬೇಸರಪಡದೆ ಕೆಲವು ದಿನಗಳವರೆಗೆ ವಿಶ್ವರೂಪನ ಮುಂದೆ ತಮ್ಮ ಆಟಪಾಟಗಳನ್ನು ಪ್ರದರ್ಶಿಸುತ್ತ, ಬರಿಗೋಡೆಯ ಮುಂದೆ ಆಡಿದ ಹಾಗೆಯೇ ಆಗುವುದನ್ನು ನೋಡಿ ಆಶ್ಚರ್ಯಪಡುತ್ತ, ಬೇಸತ್ತು ಇಂದ್ರನ ಬಳಿಗೆ ಹಿಂದಿರುಗಿ ಹೋಗಿ, "ಪ್ರಭುವೇ! ನಮ್ಮ ಎಲ್ಲಾ ಪ್ರಯತ್ನಗಳೂ ಆ ಮುನಿಯ ಮುಂದೆ ಬೂದಿಗೆ ಹಾಕಿದ ಪನ್ನೀರಾಯಿತು. ಅವನ ಶಾಪಕ್ಕೊಳಗಾಗದೆ ಬಂದದ್ದೇ ನಮ್ಮ ಪುಣ್ಯ" ಎಂದರು.

ಅದನ್ನು ಕೇಳಿ ಇಂದ್ರನು ಮಹಾತ್ಮನಾದ ಆ ವಿಶ್ವರೂಪನನ್ನು ಕೊಲ್ಲಲು ನಿಶ್ಚಯಿಸಿ ಎದ್ದನು. ಸುಮ್ಮನಿರುವವನನ್ನು ಕೊಲ್ಲುವುದರಿಂದ ಎಷ್ಟು ದೊಡ್ಡ ಪಾಪವಾಗುವುದೆಂಬುದನ್ನು ಅವನು ಆಲೋಚನೆ ಮಾಡಲಿಲ್ಲ. ಅವನು ತನ್ನ ಐರಾವತದ ಮೇಲೇರಿಕೊಂಡು ವಿಶ್ವರೂಪನು ತಪಸ್ಸಮಾಧಿಯಲ್ಲಿರುವ ಸ್ಥಳಕ್ಕೆ ಬಂದು, ಅವನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿ ಕೊಂದೇಬಿಟ್ಟನು. ವಿಶ್ವರೂಪನು ಒಂದು ಶಬ್ದವನ್ನೂ ಮಾಡದೆ ವಜ್ರಾಯುಧದ ಏಟಿನಿಂದ ಸತ್ತುಬಿದ್ದನು.

ಅದನ್ನು ನೋಡಿ ಮುನಿಗಳು, "ಈ ದೇವೇಂದ್ರನಿಗೆ ಇಂತಹ ಕೆಟ್ಟ ಸಾಹಸ ಏಕೆ ಬಂತೋ! ಅಂತಹ ಪುಣ್ಯಾತ್ಮನನ್ನೇ ಸುಮ್ಮನೆ ಕೊಂದುಬಿಟ್ಟನಲ್ಲಾ! ಇದರ ಫಲ ತಪ್ಪದೆ ಅನುಭವಿಸಿ ತೀರುತ್ತಾನೆ!" ಎಂದು ತಮ್ಮೊಳಗೆ ಮಾತಾಡಿಕೊಂಡರು.

ವಿಶ್ವರೂಪನು ಸತ್ತುಬಿದ್ದುದನ್ನು ನೋಡಿ ಇಂದ್ರನು ಹಿಂದಿರುಗಿ ಹೋದನು. ಆದರೆ ಅವನ ಮನಸ್ಸಿನಲ್ಲಿ ಒಂದು ಸಂದೇಹ ಉಳಿದುಹೋಯಿತು. ಸತ್ತುಹೋದ ವಿಶ್ವರೂಪನು ಮತ್ತೆ ಬದುಕಿ ಏಳಲಾರನಷ್ಟೆ? ಏಕೆಂದರೆ ವಜ್ರಾಯುಧದ ಪೆಟ್ಟು ತಿಂದು ಸತ್ತುಬಿದ್ದ ಮೇಲೆ ಕೂಡಾ ವಿಶ್ವರೂಪನ ತೇಜಸ್ಸು ಸ್ವಲ್ಪವೂ ಮಂಗಿರಲಿಲ್ಲ.

ಈ ಅನುಮಾನದಿಂದ ದೇವೇಂದ್ರನು, ತನ್ನ ಬಡಗಿಯನ್ನು ಕರೆದುಕೊಂಡು ವಿಶ್ವರೂಪನ ಬಳಿಗೆ ಬಂದು "ನೋಡು, ಇವನು ಸತ್ತು ಕೂಡಾ ಜೀವಕಳೆಯಿಂದಿರುವ ಹಾಗೇ ಇದ್ದಾನೆ. ಅವನು ಮತ್ತೆ

ಬದುಕಿ ಏಳದಹಾಗೆ ಅವನ ತಲೆಗಳನ್ನು ಕಡಿದು ಬಿಡು" ಎಂದನು.

ಅದನ್ನು ಕೇಳಿ ಬಡಗಿ, "ಇದೆಂಥ ಕೆಲಸ ? ಇವನು ವಜ್ರಾಯುಧದ ಪೆಟ್ಟಿಗೆ ಸತ್ತುಹೋಗಿದ್ದಾನೆ. ಸತ್ತವನನ್ನು ಕಡಿದು ಪಾಪ ಕಟ್ಟಿಕೊಳ್ಳಲು ಹೇಳುವಿರಾ ? ನೀವು ಕಾರಣವೇನಿಲ್ಲದೆ ಈ ಮುನಿಯನ್ನು ಕೊಂದಿರಲಿಕ್ಕಿಲ್ಲ. ಆ ಕಾರಣವೇನೆಂದು ನನಗಂತೂ ಗೊತ್ತಿಲ್ಲ. ಆದರೂ ಸತ್ತುಹೋದವನ ತಲೆ ಕಡಿಯಬೇಕಾದ ಕೆಲಸವೇಕೆ ? ಒಂದಲ್ಲ ಮೂರು ತಲೆಗಳಿವೆ. ಈ ಸತ್ತವನನ್ನು ನೋಡಿ ನಿಮಗೇಕೆ ಇಷ್ಟು ಭಯವೋ ?" ಎಂದು ಕೇಳಿದನು.

"ಇವನೊಬ್ಬ ದೊಡ್ಡ ತಪಸ್ವಿ ಎಂಬುದೇನೋ ನಿಜ. ಆದರೇನು ? ನನಗೆ ಶತ್ರು. ಶತ್ರುವನ್ನು ಕೊಲ್ಲಬೇಕಾದ್ದು ವಿಧಿಯೇ ಆದ್ದರಿಂದ ಕೊಂದಿದ್ದೇನೆ. ಸತ್ತರೂ ಬದುಕಿರುವವನ ಹಾಗೆ ಕಾಣುತ್ತಾನೆ. ಅಗ್ನಿ ಶೇಷ, ಋಣ ಶೇಷ, ಶತ್ರು ಶೇಷಗಳನ್ನು ಉಳಿಯಗೊಡಬಾರದಷ್ಟೆ? ಆದಕ್ಕೇ ತಲೆ ಕಡಿಯಲು ಹೇಳುತ್ತೇನೆ" ಎಂದನು ಇಂದ್ರ.

"ಇದೊಳ್ಳೇ ಕತೆಯಾಯಿತಲ್ಲ! ನಿರಪರಾಧಿಯಾಗಿ ಬ್ರಹ್ಮ ತೇಜಸ್ಸಿನಿಂದ ಬೆಳಗುವ ಈ ಮಹಾಮುನಿಯನ್ನು ಕೊಂದು ಹಾಕಿರುವ ನಿಮಗೆ, ಬ್ರಹ್ಮ ಹತ್ಯೆಯ ದೋಷ ಬರುತ್ತದೆಂಬ ಭಯ ಕೂಡಾ ಇಲ್ಲವೇ?" ಎಂದು ಬಡಗಿ ಕೇಳಿದನು.

"ನನಗೆ ಶತ್ರುಶೇಷದ ಮೇಲಿರುವಷ್ಟು ಭಯವು ಬ್ರಹ್ಮಹತ್ಯಾಪಾಪದ ಮೇಲೆ ಇಲ್ಲ. ಆ ಪಾಪವನ್ನು ಹೇಗಾದರೂ ಕಳೆದುಕೊಳ್ಳಬಹುದು. ಶತ್ರುಶೇಷ ಬೆಳೆದುಬಿಟ್ಟರೆ ಹಾಗೆಲ್ಲಾ ಕಳೆದುಕೊಳ್ಳಲು ಸಾಧ್ಯವಿಲ್ಲವಷ್ಟೆ? ಆದುದರಿಂದ ಶತ್ರು ನಿರ್ಮೂಲನಕ್ಕಾಗಿ ಎಂತಹ ಪಾಪವನ್ನಾದರೂ ಮಾಡಬಹುದು." ಎಂದನು ಇಂದ್ರ. ಆದರೂ ಬಡಗಿ ಒಪ್ಪದೆ, ಅನುಮಾನಿಸುತ್ತ, "ಇಂತಹ ಮಹಾ ಪಾಪದ ಕಾರ್ಯಕ್ಕೆ ಏನೋ



ಲಾಭವು ನಿಮ್ಮನ್ನು ಹುರಿಗೊಳಿಸಿರಬಹುದು. ನನ್ನನ್ನು ಹಾಗೆ ಯಾವ ಲಾಭವೂ ಹುರಿಗೊಳಿಸಲಿಲ್ಲವಲ್ಲಾ ? ತಿಳಿತಿಳಿದೇ ನಾನೇಕೆ ಇಂತಹ ಪಾಪವನ್ನು ಮಾಡಲಿ?" ಎಂದು ಕೇಳಿದನು.

"ನೀನು ಹೀಗೆ ಹೇಳುವುದಾದರೆ ನಿನಗೊಂದು ಲಾಭವನ್ನು ಕೊಡಿಸುತ್ತೇನೆ. ಇನ್ನು ಮೇಲೆ ಯಜ್ಞದಲ್ಲಿ ಒಂದು ಭಾಗವನ್ನು ವಿಶ್ವಕರ್ಮನಿಗೂ ಕೊಡಬೇಕೆಂದು ಶಾಸನಮಾಡುತ್ತೇನೆ. ಯಜ್ಞದಲ್ಲಿ ಬಲಿ ಕೊಡುವ ಯಜ್ಞ ಪಶುವಿನ ತಲೆ ಇನ್ನು ಮೇಲೆ ನಿನಗೆ ದಕ್ಕುತ್ತದೆ!" ಎಂದನು ಇಂದ್ರ.

ಆ ಮಾತು ಕೇಳು ಬಡಗಿ ತನ್ನ ಕೊಡಲಿಯಿಂದ ವಿಶ್ವರೂಪನ ತಲೆಗಳನ್ನು ಕಡಿದನು. ಆಗ ಒಂದು ಅದ್ಭುತ ದೃಶ್ಯವು ಹೊರಬಿತ್ತು. ಆ ತಲೆಗಳು ನೆಲದ ಮೇಲೆ ಬೀಳುವಾಗ, ಒಂದೊಂದು ತಲೆಯಿಂದಲೂ ಬಗೆಬಗೆಯ ಪಕ್ಷಿಗಳು ಅನೇಕ ಸಾವಿರ ಸಂಖ್ಯೆಯಲ್ಲಿ ಹೊರಗೆ ಬಂದು ಆಕಾಶವನ್ನೆಲ್ಲಾ ತುಂಬಿಕೊಂಡು



ಹಾರಿಹೋದುವು. ವೇದವನ್ನು ಓದುವ ಮುಖದಿಂದ ಕಪಿಂಜಲವೆಂಬ ಪಕ್ಷಿಗಳೂ, ಪ್ರಪಂಚ ಪರಿಶೀಲನೆ ಮಾಡುವ ಮುಖದಿಂದ ತಿತ್ತಿರಿ ಪಕ್ಷಿಗಳೂ, ಪಾನೀಯ ಸೇವಿಸುವ ಮುಖದಿಂದ ಊರಗುಬ್ಬಿಗಳೂ ಹೊರಬಿದ್ದುವು. ಹೀಗೆ ತನ್ನ ಕೆಲಸ ಮುಗಿಯಿತೆಂಬ ತೃಪ್ತಿಯಿಂದ ಇಂದ್ರನು ಅಲ್ಲಿಂದ ಹೊರಟುಹೋಗಿ, ತನಗುಂಟಾದ ಬ್ರಹ್ಮಹತ್ಯಾಪಾತಕಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುವ ಪ್ರಯತ್ನಕ್ಕೆ ತೊಡಗಿದನು.

ವಿಶ್ವರೂಪನನ್ನು ಸುಮ್ಮ ಸುಮ್ಮನೇ ಇಂದ್ರನು ಕೊಂದ ಸಮಾಚಾರ ಅವನ ತಂದೆ ತ್ವಷ್ಟ್ರ ಪ್ರಜಾಪತಿಗೆ ತಿಳಿಯಿತು. ತನ್ನ ಪುತ್ರನನ್ನು ಇಂದ್ರನು ಕೊಲೆ ಮಾಡಿದನೆಂದು ತಿಳಿದು ತ್ವಷ್ಟ್ರ ಪ್ರಜಾಪತಿ ಕೋಪದಿಂದ ಉರಿದುಬಿದ್ದು, "ಎಲೆಲೋ ದೇವತೆಗಳೇ! ನೋಡಿದಿರಾ ನೀವೆಲ್ಲರೂ? ಯಾವ ಪಾಪವನ್ನೂ ಅರಿಯದೆ ತಪಸ್ಸುಮಾಡಿಕೊಂಡಿದ್ದ ನನ್ನ ಮಗನನ್ನು ಕೊಂದ ಇಂದ್ರನನ್ನು ನಾಶಮಾಡದೆ ಬಿಡುವೆನೆಂದು ಕೊಂಡಿರಾ? ಇಂದ್ರನನ್ನು ನಾಶಮಾಡತಕ್ಕಂತಹ ಮಹಾಬಲಿಷ್ಠನಾದ ಮಗನನ್ನೇ ನಾನು ಪಡೆಯುತ್ತೇನೆ, ನೋಡಿರಿ!" ಎಂದು ಹೇಳಿಕೊಂಡು, ಅಥರ್ವಣ ವೇದ ಮಂತ್ರಗಳಿಂದ ಅಗ್ನಿಯನ್ನು ಅರ್ಚಿಸಿ ಹೋಮ ಮಾಡ ತೊಡಗಿದನು. ಆಗ ಅಗ್ನಿಹೋತ್ರನಿಗೆ ಸಮಾನನಾದ ಪುತ್ರನು ಅಗ್ನಿಕುಂಡದಿಂದ ಹುಟ್ಟಿಬಂದನು.

ತ್ವಷ್ಟ್ರ ಪ್ರಜಾಪತಿ ಆ ಪುತ್ರನನ್ನು ನೋಡಿ, "ಮಗನೇ, ನೀನು ಹೀಗೆ ಹುಟ್ಟಿದಮಾತ್ರಕ್ಕೆ ಏನೂ ಆಗಲಿಲ್ಲ. ಕೂಡಲೇ ಬೆಳೆದು ದೊಡ್ಡವನಾಗು. ಇಂದ್ರನನ್ನು ಹತಮಾಡಿ ಬಾ! ಎಲ್ಲಾ ಈಗಲೇ ಆಗಬೇಕು!" ಎಂದು ಅವನನ್ನು ಶಾಸಿಸಿದನು.

ನೋಡ ನೋಡುತ್ತಿದ್ದಂತೆ ಆ ಶಿಶು ಪರ್ವತಾಕಾರವಾಗಿ ಬೆಳೆಯುತ್ತ, ಕಾಲಮೃತ್ಯುವಿನಂತೆ ಕಂಡುಬಂದನು. ಅವನನ್ನು ನೋಡಿ ದೇವತೆಗಳೆಲ್ಲಾ ನಡುಗುತ್ತಿರಲು, ಅವನು ತ್ವಷ್ಟ್ರ ಪ್ರಜಾಪತಿಯನ್ನು ನೋಡಿ, "ಅಪ್ಪಾ, ನನ್ನ ಹೆಸರು ಏನು? ಏತಕ್ಕಾಗಿ ನನ್ನನ್ನು ಹುಟ್ಟಿಸಿದೆ? ಏನು ಮಾಡಬೇಕು ನಾನು? ಎಂತಹ ದುಃಸಾಧ್ಯವಾಗಿದ್ದರೂ ಸಾಧಿಸಿ ಬಿಡುತ್ತೇನೆ. ತಂದೆಯ ಕೋರಿಕೆಯನ್ನು ಈಡೇರಿಸಲಾರದ ಮಗನಿದ್ದು ಏನು ಪ್ರಯೋಜನ?" ಎಂದು ತಂದೆಯನ್ನು ಕೇಳಿದನು.

ಅದಕ್ಕೆ ತ್ವಷ್ಟ್ರ ಹೀಗೆಂದನು: "ಮಗನೇ, ನಿನ್ನ ಹೆಸರು ವೃತ್ರ. ವೇದಗಳ ತತ್ವಗಳನ್ನು ತಿಳಿದವನಾಗಿ, ಮೂರು ತಲೆಗಳುಳ್ಳವನಾಗಿ, ತಪಸ್ಸು ಮಾಡಿಕೊಂಡಿದ್ದ ನಿನ್ನ ಅಣ್ಣನನ್ನು ಅನ್ಯಾಯವಾಗಿ ಕೊಂದ ಆ ಇಂದ್ರನನ್ನು ಹತಮಾಡಲಿಕ್ಕಾಗಿಯೇ ನೀನು ಹುಟ್ಟಿರುವೆ. ಆ ಕೆಲಸ ಮುಗಿಸಿಬಿಡು. ಅದುವೇ ನನ್ನ ಕೋರಿಕೆ!"

ಹೀಗೆಂದು ತ್ವಷ್ಟ್ರ ವೃತ್ರನಿಗೆ ಬಗೆಬಗೆಯ ಆಯುಧಗಳನ್ನು ಕೂಡಾ ತಯಾರಿಸಿ ಕೊಟ್ಟು, ಒಳ್ಳೆಯ ಮುಹೂರ್ತದಲ್ಲಿ, ಬ್ರಾಹ್ಮಣರ ಆಶೀರ್ವಾದಗಳೊಂದಿಗೆ ಇಂದ್ರನನ್ನು ಕೊಲ್ಲಲು ಕಳುಹಿಸಿಕೊಟ್ಟನು.

ಭಯಂಕರಾಕಾರನಾದ ವೃತ್ರನು ತನ್ನನ್ನು ಕೊಲ್ಲಲಿಕ್ಕಾಗಿಯೇ ಹುಟ್ಟಿಬರುವನೆಂಬ ಸಮಾಚಾರ ಇಂದ್ರನಿಗೆ ಕೂಡಲೇ ತಿಳಿಯಿತು. "ಇಂದ್ರಾ! ತ್ವಷ್ಟ್ರ ಪ್ರಜಾಪತಿ ನಿನ್ನನ್ನು ಕೊಲ್ಲಲಿಕ್ಕಾಗಿಯೇ ಅಥರ್ವಣ ಹೋಮದಿಂದ ಪರ್ವತಾಕಾರನಾದ ವೃತ್ರನನ್ನು ಸೃಷ್ಟಿಮಾಡಿ, ವಿಶೇಷಬಗೆಯ ಆಯುಧಗಳನ್ನೂ ಸೃಷ್ಟಿಸಿ ಕೊಟ್ಟು ಕಳುಹಿಸಿದ್ದಾನೆ. ಆ ವೃತ್ರನು ಬಲವಂತರಾದ ಅನೇಕಮಂದಿ ರಾಕ್ಷಸರನ್ನು ಕರೆದುಕೊಂಡು ಬರುತ್ತಿದ್ದಾನೆ" ಎಂದು ದೂತರು ಇಂದ್ರನೊಂದಿಗೆ ಹೇಳುತ್ತಿರುವಾಗಲೇ, ವೃತ್ರನನ್ನು ಸ್ವಯಂ ನೋಡಿ ಹೆದರಿ ಓಡಿಬಂದ ದೇವತೆಗಳು ಹೀಗೆಂದರು :



"ದೇವಾ ! ಅತಿ ಭಯಂಕರವಾದ ದುಃಶಕುನಗಳು ನಿಮ್ಮ ವಠಾರದೊಳಗೆ ಕಾಣುತ್ತಿವೆ. ಕಾಗೆಗಳೂ, ಗೂಗೆಗಳೂ, ರಣಹದ್ದುಗಳೂ ವಿಕಾರ ಸ್ವರದಿಂದ ಕೂಗುತ್ತಿವೆ. ಎಲ್ಲಿ ನೋಡಿದರೂ ರಾಕ್ಷಸರ ಗರ್ಜನೆಗಳು ಕಿವಿಗಳನ್ನು ಅಪ್ಪಳಿಸುತ್ತಿವೆ. ಅಂತಃಪುರ ಸ್ತ್ರೀಯರಿಗೆ ಕೆಟ್ಟ ಕನಸುಗಳು ಬಿದ್ದು ಭೀತಿಯಿಂದ ಕೂಗಿಕೊಳ್ಳುತ್ತಿದ್ದಾರೆ ! ದೇವತೆಗಳಿಗೆ ಏನೋ ಕೆಟ್ಟ ಕಾಲವು ಬಂದಿದೆ". ಈ ವಾರ್ತೆಯನ್ನು ಕೇಳಿ ಇಂದ್ರನು ಭಯಪಟ್ಟು ಬೃಹಸ್ಪತಿಯನ್ನು ನೋಡಿ, "ದೇವಗುರುಗಳೇ, ಕೇಳಿದಿರಷ್ಟೆ ? ಈ ದುಃಶಕುನಗಳಿಗೆ ಶಾಂತಿ ಹೇಗೆ ?" ಎಂದು ಕೇಳಿದನು.

"ಏನು ತಾನೇ ಶಾಂತಿ ಹೇಳಲಿ ? ವ್ಯರ್ಥವಾಗಿ ನೀನು ಯಾರನ್ನೂ ಕೇಳದೆ ನಿರಪರಾಧಿಯಾದ ಮುನಿಶ್ರೇಷ್ಠನಾದ ವಿಶ್ವರೂಪನನ್ನು ಕೊಂದು ಬಾಚಿಕೊಂಡ ಸುಖಗಳಿವು! ಆ ಪಾಪ ನಿನ್ನನ್ನು ಕಟ್ಟಿ ಕುಕ್ಕಿ ಹಿಂಸಿಸದೆ ಬಿಡುವುದುಂಟೇ ? ಯಾವ ಕೆಲಸವನ್ನಾದರೂ ಮಾಡುವ ಮೊದಲು, ಅದರ ಹಿಂದು ಮುಂದುಗಳನ್ನು ಆಲೋಚನೆ ಮಾಡಿ ನೋಡಿ ಪ್ರಾರಂಭಿಸಬೇಕು. ಇದು ರಾಜನಾದವನಿಗೆ ತುಂಬಾ ಮುಖ್ಯ. ಅವನ ತಪ್ಪಿನಿಂದ ಪ್ರಜೆಗಳೆಲ್ಲಾ ಕಷ್ಟಪಡಬೇಕಾಗುತ್ತದೆ. ಹಾಗೇ ಆಯಿತು ಈಗ. ನೀನು ಮಹಾಲೋಭಕ್ಕೆ ವಶನಾಗಿ ಬ್ರಹ್ಮಹತ್ಯಾಪಾತಕದ ಮೂಟೆಯನ್ನು ಕೊರಳಿಗೆ ಕಟ್ಟಿಕೊಂಡಿರುವೆ. ದೊಡ್ಡ ರೀತಿಯಲ್ಲಿ ಮಾಡಿದ ಪಾಪ ಪುಣ್ಯಗಳ ಫಲಿತವು ಕೂಡಲೇ ಕಂಡು ಬರುತ್ತದೆ. ಇತರರನ್ನು ವ್ಯರ್ಥವಾಗಿ ಪೀಡಿಸುವವರಿಗೆ ಸುಖವಿರಲಾರದು. ನಿನಗೆ ಈಗ ಕಷ್ಟಕಾಲವು ಪ್ರಾಪ್ತವಾಯಿತು. ಈ ವೃತ್ರನು ಮಹಾಬಲಿಷ್ಠನು. ಅವನಿಗೆ ತ್ವಷ್ಟ್ರ ವಿಶೇಷವಾದ ಆಯುಧಗಳನ್ನು ಕೂಡಾ ಕೊಟ್ಟಿದ್ದಾನೆ. ಅವುಗಳಲ್ಲಿ ಒಂದಕ್ಕೂ ಸಹ ನಿನ್ನ ವಜ್ರವು ಸಾಟಿಯಾಗಲಾರದು." ಎಂದನು ಬೃಹಸ್ಪತಿ. ಇಂದ್ರನು ಹತಾಶನಾಗಿ ಯುದ್ಧಕ್ಕೆ ಸಿದ್ಧನಾಗ ತೊಡಗಿದನು.

ದೇವೇಂದ್ರನನ್ನು ಹತಮಾಡಲು ವೃತ್ರನು ಬರುತ್ತಿದ್ದಾನೆಂದು ಕೇಳಿ, ಮುನಿಗಳೂ, ಯಕ್ಷರೂ, ದೇವತೆಗಳೂ ಗಾಬರಿಯಾಗಿ ಎಲ್ಲೆಲ್ಲಿಗೋ ಓಡ ತೊಡಗಿದರು. ಹಾಗೆ ಮನೆ ಬಾಗಿಲು ಬಿಟ್ಟು ಓಡಿ



ಹೋಗುವ ದೇವತೆಗಳನ್ನು ನೋಡಿ ಇಂದ್ರನು ಚಿಂತೆಯಿಂದ ತನ್ನ ಸೇವಕರನ್ನು ಕರೆದು, "ರುದ್ರರನ್ನೂ, ಆದಿತ್ಯರನ್ನೂ, ವಸುಗಳನ್ನೂ, ದಿಕ್ಪಾಲಕರನ್ನೂ ವಿಮಾನಗಳ ಮೇಲೆ ಯುದ್ಧಕ್ಕೆ ಬರಬೇಕೆಂದು ಹೇಳಿರಿ, ಬೇಗ ಬರಲಿ!" ಎಂದು ಆಜ್ಞೆ ಕಳುಹಿಸಿದನು.

ಆ ಮೇಲೆ ಇಂದ್ರನು ಬೃಹಸ್ಪತಿಯನ್ನು ಸಹಾ ತನ್ನ ಆನೆಯ ಮೇಲೆ ಕೂಡಿಸಿಕೊಂಡು ಯುದ್ಧಕ್ಕೆ ಹೊರಟನು. ಅವನ ಹಿಂದೆ ಆಯುಧಗಳೊಂದಿಗೆ ದೇವತೆಗಳ ಸೈನ್ಯವೂ ಹೊರಟಿತು. ವೃತ್ರನು ಕೂಡಾ ದಾನವ ಸೇನೆಗಳೊಂದಿಗೆ ಬಂದು ಬಿಟ್ಟನು. ಉಭಯ ಪಕ್ಷಗಳೂ ಮಾನಸಸರೋವರಕ್ಕೆ ಉತ್ತರದಲ್ಲಿದ್ದ ಪರ್ವತ ಪ್ರದೇಶದಲ್ಲಿ ಒಂದನ್ನೊಂದು ತಾಗಿದುವು.

ಆ ಪ್ರದೇಶದಲ್ಲೇ ಘೋರ ಯುದ್ಧವು ಪ್ರಾರಂಭವಾಯಿತು. ನೂರು ವರ್ಷಗಳ ವರೆಗೆ ಎಡೆಬಿಡದೆ ನಡೆಯಿತು ಆ ಯುದ್ಧ. ಅದರಿಂದಾಗಿ ಲೋಕಗಳೆಲ್ಲಾ ಭೀತಿಯಿಂದ ನಡುಗಿಕೊಂಡಿದ್ದುವು. ಆಮೇಲೆ ಮೊದಲು ವರುಣನು ಸೋತು ರಣರಂಗದಿಂದ ಓಡಿ ಹೋದನು. ಅನಂತರ ಕ್ರಮವಾಗಿ ವಾಯುಗಣಗಳೂ, ಯಮನೂ, ಕಾಂತಿವಿಹೀನನಾದ ಅಗ್ನಿಯೂ ಕೈಲಾಗದವರಾಗಿ ಓಡಿದರು. ಕಡೆಗೆ ಇಂದ್ರನೂ ಆನೆಯಿಂದ ಹಾರಿ ಓಡಿ ತಪ್ಪಿಸಿಕೊಂಡನು. ಆಮೇಲೆ ಎಲ್ಲಾ ದೇವತೆಗಳೂ ದಿಕ್ಕು ದಿಕ್ಕಿಗೆ ಓಡಿ ಹೋದರು.

ವೃತ್ರನು ಇಂದ್ರನ ಆನೆಯನ್ನು ಎಳೆದುಕೊಂಡು ತಂದೆಯ ಬಳಿಗೆ ಹೋಗಿ ನಮಸ್ಕಾರ ಮಾಡಿ, "ಅಪ್ಪಾ, ದೇವತೆಗಳೆಲ್ಲರೂ ಹೆದರಿ ಪಲಾಯನ ಮಾಡಿ ಬಿಟ್ಟರು. ಇಂದ್ರನೂ ಸಹ ಕಾಲಿನ ಬಲವನ್ನುಪಯೋಗಿಸಿ ಓಡಿ ಹೋಗುವುದನ್ನು ನೋಡಿ, ಅಂಥವನನ್ನು ಹಿಡಿಯಲು ಇಷ್ಟವಿಲ್ಲದೆ. ಅವನ ಆನೆಯನ್ನು ನಿಮಗೆ ಕಾಣಿಕೆ ತಂದಿದ್ದೇನೆ. ಇನ್ನೇನು ಮಾಡಬೇಕು ಹೇಳಿರಿ" ಎಂದನು.

ತ್ವಷ್ಟೃ ತನ್ನ ಮಗನನ್ನು ನೋಡಿ ಬಹಳ ಸಂತೃಪ್ತನಾಗಿ ಸಂತೋಷಪಡುತ್ತ, "ಅಪ್ಪಾ. ನಿನ್ನ ಪರಾಕ್ರಮವು ಎಣೆಯಿಲ್ಲದ್ದು. ಇನ್ನು ನಾನು ನಾಲ್ಕು ಮಂದಿಗಳ ಮುಂದೆ ತಲೆಯೆತ್ತಿ ತಿರುಗುವಂತಾಯಿತು. ನನ್ನ ಮನೋವೇದನೆ ಹೋಯಿತು. ಜೀವಿತವು ಫಲಿಸಿತು. ಮನಸ್ಸಿಗೆ ಸ್ಥಿಮಿತ ಉಂಟಾಯಿತು. ಇನ್ನು ನೀನು ಮಾಡಬೇಕಾದುದನ್ನು ಹೇಳುತ್ತೇನೆ, ಕೇಳು. ಓಡಿ ಹೋದ ಆ ಇಂದ್ರನನ್ನು ನಂಬಲೇಬಾರದು. ಅವನು ಮಾಡುವ ಇಂದ್ರಜಾಲಗಳನ್ನು ಲಕ್ಷ್ಯ ಮಾಡದೆ, ಬ್ರಹ್ಮನನ್ನು ಕುರಿತು ತಪಸ್ಸು ಮಾಡು. ಬ್ರಹ್ಮನಿಂದ ಸಾವಿಲ್ಲದ ಹಾಗೆ ವರವನ್ನು ಪಡೆದು. ಆ ಮೇಲೆ ಇಂದ್ರನನ್ನು ಹತ ಮಾಡಿ ಬಿಡು. ತಪಸ್ಸಿನಿಂದ ಸಾಧಿಸಲಾಗದ್ದು ಯಾವುದೂ ಇಲ್ಲ. ದೇವತೆಗಳೆಲ್ಲ ಓಡುವಷ್ಟು ಪ್ರಾಣ ಉಳಿಸಿಕೊಂಡರೆಂದರೆ, ಅವರನ್ನು ತೀರಿಸಲು ಬ್ರಹ್ಮನಿಂದ ವರಪಡೆಯಲೇಬೇಕು. ಇಂದ್ರನು ಕಾರಣವೇನಿಲ್ಲದೆ ನನ್ನ ಮಗನನ್ನು ಕೊಂದ ಸಂಗತಿ ನನ್ನ ಮನಸ್ಸಿನೊಳಗೆ ಉಳಿದೇ ಇದೆ.

ಆ ಇಂದ್ರನನ್ನು ಅಂತ್ಯಗೊಳಿಸದೆ ಅದು ಶಾಂತ ವಾಗದು. ಅವನು ಇಲ್ಲದಂತಾಗಲೇಬೇಕು!" ಎಂದನು.

ಹಾಗೆಯೇ ಆಗಲೆಂದು ವೃತ್ರನು ತಂದೆಯಿಂದ ಅಪ್ಪಣೆಪಡೆದು, ಮನಸ್ಸಿನೊಳಗೆ ಕ್ರೋಧಾವೇಶವನ್ನು ತುಂಬಿಕೊಂಡು, ಗಂಧಮಾದನ ಪರ್ವತದ ಮೇಲೆ ಹೋಗಿ, ಗಂಗೆಯಲ್ಲಿ ಸ್ನಾನಮಾಡಿದನು. ಅನಂತರ ದರ್ಭಾಸನದಲ್ಲಿ ಕುಳಿತು, ತಪಸ್ಸಿಗೆ ತೊಡಗಿದನು. ತಪಸ್ಸಿನಲ್ಲಿ ಸಂಪೂರ್ಣವಾಗಿ ಮುಳುಗಿ, ಯಾವ ಬಗೆಯ ಆಹಾರ ಪಾನೀಯಗಳನ್ನೂ ತೆಗೆದುಕೊಳ್ಳದೆ, ಯೋಗವನ್ನು ಅವಲಂಬಿಸಿ ದೊಡ್ಡ ದೊಡ್ಡ ಮುನಿ ಗಳಿಗೂ ಅದ್ಭುತವಾಗಿ ತೋರುವ ರೀತಿಯಲ್ಲಿ, ಬ್ರಹ್ಮನನ್ನು ಕುರಿತು ತಪಸ್ಸುಮಾಡಿದನು.

ಅದನ್ನು ನೋಡುತ್ತಾ ಇದ್ದ ಇಂದ್ರನಿಗೆ ಮತ್ತೆ ಭಯ ಹಿಡಿಯಿತು. ಅವನ ತಪಸ್ಸನ್ನು ಭಂಗಪಡಿಸಲು ಅಪ್ಸರಸಿಯರನ್ನು ಕಳುಹಿಸಿದನು. ಅವರ ಯಾವ ಚೇಷ್ಟೆಗಳೂ ವೃತ್ರನ ಮೇಲೆ ಯಾವ ಪರಿಣಾಮ ವನ್ನೂ ಮಾಡಲಿಲ್ಲ. ಅವರು ಇಂದ್ರನ ಬಳಿಗೆ ಹಿಂದಿರುಗಿ ಹೋಗಿ, ವೃತ್ರನ ತಪಸ್ಸನ್ನು ಹಾಳು ಮಾಡುವ ಕೆಲಸ ತಮ್ಮ ಶಕ್ತಿಗಳಿಗೆ ಮೀರಿದುದೆಂದು ಹೇಳಿಬಿಟ್ಟರು. ಇಂದ್ರನಿಗೆ ದಿಕ್ಕೇ ತೋಚದಂತಾಯಿತು.

ಕಡೆಗೆ ವೃತ್ರನ ಮಹಾ ತಪಸ್ಸಿಗೆ ಬ್ರಹ್ಮನು ತೃಪ್ತ ನಾಗಿ, ಅವನ ಮುಂದೆ ಬಂದು, "ವೃತ್ರಾ, ಇನ್ನು ತಪಸ್ಸನ್ನು ಸಾಕುಮಾಡು. ಬಹಳವಾಗಿ ಮೆಚ್ಚಿದೆ ನಪ್ಪಾ. ಏನು ವರ ಬೇಕೋ ಕೇಳು" ಎಂದನು.

ವೃತ್ರನು ಬ್ರಹ್ಮನಿಗೆ ಕೈಗಳನ್ನು ಜೋಡಿಸಿ, "ಮಹಾದೇವ! ನಾನು ಇದುವರೆಗೇ ಇಂದ್ರಪದವಿ ಯನ್ನು ವಶಪಡಿಸಿಕೊಂಡು ಸಂತೋಷಿಸಿದ್ದೇನೆ. ಈಗ ನಿನ್ನ ದರ್ಶನ ಭಾಗ್ಯವೂ ಲಭಿಸಿ ಇನ್ನಷ್ಟು ಸಂತೋಷ ವಾಗಿದೆ. ಧನ್ಯನಾದೆನು. ನಾನು ಕೇಳುವ ವರವನ್ನು ಕೊಡುವೆಯಾದರೆ, ಲೋಹಗಳಿಂದಾಗಲೀ, ಕಟ್ಟಿಗೆ ಕೋಲುಗಳಿಂದಾಗಲೀ, ಒಣಗಿದ್ದೋ, ಹಸಿಯದೋ ಆದ ಬಿದಿರುಗಳಿಂದಾಗಲೀ, ಇತರ ಆಯುಧಗಳಿಂ ದಾಗಲೀ ನನಗೆ ಮರಣ ಬಾರದಂತೆ ವರ ಕೊಡು" ಎಂದು ಬೇಡಿದನು.

ಬ್ರಹ್ಮನು ಅವನು ಕೇಳಿದಂತೆಯೇ ವರವನ್ನು ಕೊಟ್ಟು ಅಂತರ್ಧಾನನಾದನು. ವೃತ್ರನು ಪರಮಾ ನಂದದಿಂದ ತನ್ನ ತಂದೆಯ ಬಳಿಗೆ ಹೋಗಿ, ತನ್ನ ತಪಸ್ಸು ಸಿದ್ಧಿಸಿ ವರ ಪಡೆದ ಸಂಗತಿಯನ್ನು ಬಿನ್ನವಿಸಿ ಕೊಂಡು ಮುಂದಿನ ಕೆಲಸಕ್ಕೆ ಅಪ್ಪಣೆ ಕೇಳಿದನು.

"ಕಂದಾ; ನಿನಗೆ ಶುಭವಾಗಲಿ. ನಿನ್ನ ಅಣ್ಣನಾದ ವಿಶ್ವರೂಪನನ್ನು ಅಕಾರಣವಾಗಿ ಕೊಂದು, ಬ್ರಹ್ಮ ಹತ್ಯಾ ಪಾತಕವನ್ನು ಕೊರಳಿಗೆ ಕಟ್ಟಿ ಕೊಂಡಿರುವ ಆ ಮಹಾದುಷ್ಟ ಇಂದ್ರನನ್ನು ಕೊಂದುಬಿಡು" ಎಂದನು ತ್ವಷ್ಟ್ರ ಪ್ರಜಾಪತಿ.





# ದೇವೀಭಾಗವತ

ಇಂದ್ರನನ್ನು ನಿರ್ಮೂಲಿಸಲೇಬೇಕೆಂದು ತಂದೆ ಗಟ್ಟಿಯಾಗಿ ಹೇಳಿದ ಮೇಲೆ, ವೃತ್ರನು ರಥದ ಮೇಲೇರಿ ಹೊರಟನು. ಅವನ ಹಿಂದೆ ದೊಡ್ಡ ಸೇನೆಯೂ ಹೊರಟಿತು. ವೃತ್ರನೆಂಬ ಆ ಅದ್ಭುತ ರಾಕ್ಷಸನು ಬಹು ದೊಡ್ಡ ಬಲದೊಂದಿಗೆ ಯುದ್ಧಕ್ಕೆ ಬರುವುದನ್ನು ನೋಡಿ, ಇಂದ್ರನೂ ಸಿದ್ಧನಾದನು.

ಇಂದ್ರನಿಗೂ ವೃತ್ರನಿಗೂ ದೊಡ್ಡ ಯುದ್ಧವು ಪ್ರಾರಂಭವಾಯಿತು. ಇಬ್ಬರೂ ಸೋಲಿನ ಪರಿವೆ ಕಾಣದೆ ಹೋರಾಡ ತೊಡಗಿದರು. ಕಡೆಗೆ ವೃತ್ರನು ಇಂದ್ರನನ್ನು ಹಿಡಿದು ಬಾಯಿಯೊಳಗಿಟ್ಟುಕೊಂಡನು.

ಅದನ್ನು ನೋಡಿ ದೇವತೆಗಳು ಒಂದೇ ಸಮನೆ ಆಕ್ರೋಶಿಸುತ್ತ ಇಂದ್ರನ ಬಿಡುಗಡೆಗೆ ಏನು ದಾರಿ ಎಂದು ಬೃಹಸ್ಪತಿಯೊಂದಿಗೆ ಮೊರೆಯಿಟ್ಟುಕೊಂಡರು.

"ನಾನು ಮಾತ್ರ ಏನು ತಾನೇ ಹೇಳಲಿ? ನನ್ನಿಂದ ಏನುಮಾಡಲೂ ಸಾಧ್ಯವಿಲ್ಲ. ಬಾಯಿಯೊಳಗಿದ್ದರೂ ಹೊಟ್ಟೆಯೊಳಗಿದ್ದರೂ ಇಂದ್ರನು ಸಾಯಲಾರನು. ಅವನು ವೃತ್ರನ ಬಾಯಿಯಲ್ಲಿ ಜೀವದೊಂದಿಗೇ ಇದ್ದಾನೆ. ಇದು ಅವನು ತಾನಾಗಿಯೇ ತಂದುಕೊಂಡ ಕೇಡು." ಎಂದನು ಬೃಹಸ್ಪತಿ.

ಕಡೆಗೆ ಅವರೆಲ್ಲ ಕೂಡಿ ಮಹಾಶಕ್ತಿಯೊಂದನ್ನು ಸೃಷ್ಟಿಸಿ ಅವಳಿಗೆ ಜೃಂಭಿಕಾ ಎಂದು ಹೆಸರಿಟ್ಟರು. ದೇವತೆಗಳ ಕೋರಿಕೆಯಂತೆ ಜೃಂಭಿಕಾ ವೃತ್ರನನ್ನು ಆವರಿಸಿ ಅವನಿಗೆ ಭಾರೀ ಆಕಳಿಕೆ ಬರುವಂತೆ ಮಾಡಿದಳು. ವೃತ್ರನು ದೊಡ್ಡದಾಗಿ ಬಾಯಿ ತೆರೆದಾಗ, ಇಂದ್ರನು ಹೊರಕ್ಕೆ ಹಾರಿ ತಪ್ಪಿಸಿಕೊಂಡನು.

ಆ ಮೇಲೆ ಬಿಡದೆ ವೃತ್ರೇಂದ್ರರೊಳಗಿನ ಯುದ್ಧವು ಮತ್ತೆ ಪ್ರಾರಂಭವಾಯಿತು. ಕಟ್ಟಕಡೆಗೆ ಇಂದ್ರನು ಸಂಪೂರ್ಣವಾಗಿ ಸೋತು ಅಮರಾವತಿಯನ್ನು ಬಿಟ್ಟು ಕೊಟ್ಟು ದಿಕ್ಕಿಲ್ಲದವನಾಗಿ ಓಡಿದನು. ವೃತ್ರನು ಅಮರಾವತಿಯನ್ನು ಸ್ವಾಧೀನಪಡಿಸಿಕೊಂಡು ಅಲ್ಲಿಯ ಒಡೆಯನಾದನು.

ತನ್ನ ಮಗನು ಸ್ವರ್ಗಲೋಕದ ರಾಜನಾದುದನ್ನು ನೋಡಿ ತ್ವಷ್ಟ್ರುವಿಗೆ ತುಂಬಾ ಸಂತೋಷವಾಯಿತು. ಎಲ್ಲಾ ಬಗೆಯ ಯಜ್ಞಭಾಗಗಳೂ ವೃತ್ರಾಸುರನ

೧೮. ವೃತ್ರನ ವಧೆ



ಕಡೆಯವರಿಗೇ ಆಗಿ, ದೇವತೆಗಳೆಲ್ಲ ಗತಿಗಾಣದೆ ಕಾಡು ಮೇಡುಗಳಲ್ಲಿ ತಿರುಗ ತೊಡಗಿದರು. ದೇವ ನಗರವಾಗಿದ್ದ ಸ್ವರ್ಗಲೋಕ ರಾಕ್ಷಸ ನಗರವಾಯಿತು.

ಎಷ್ಟುಕಾಲ ಈಗತಿ? ಎಲ್ಲಾ ದೇವತೆಗಳೂ ಪರಸ್ಪರ ಮಾತಾಡಿ ಒಂದು ನಿರ್ಣಯಕ್ಕೆ ಬಂದು ಶಿವನ ಬಳಿಗೆ ಹೋಗಿ ತಮ್ಮ ಗೋಳನ್ನು ತೋಡಿಕೊಂಡರು. "ಶಿವ ಶಿವಾ! ನೀನೇ ಗತಿ! ನಿನಗೇ ಶರಣಾಗತರಾಗಿದ್ದೇವೆ" ಎಂದು ಎಲ್ಲಾ ದೇವತೆಗಳು ಆಕ್ರಂದನ ಮಾಡಿದರು.

ಶಿವನು ಸಾಧಾರಣ ಭಾವದಲ್ಲಿಯೇ ಆ ದೇವತೆಗಳೊಂದಿಗೆ, "ಬನ್ನಿ, ನಾವೆಲ್ಲಾ ಬ್ರಹ್ಮನನ್ನು ಕರೆದುಕೊಂಡು ವಿಷ್ಣುವಿನ ಬಳಿಗೆ ಹೋಗೋಣ. ಆತನಿಂದಲೇ ವೃತ್ರನ ಸಂಹಾರವಾಗುವಂತೆ ನೋಡಬೇಕು." ಎಂದನು.

ಮತ್ತೇನು? ಎಲ್ಲರೂ ಕೂಡಿ ವಿಷ್ಣು ನಿವಾಸವಾದ ವೈಕುಂಠಕ್ಕೆ ಹೋದರು. ಅವರನ್ನೆಲ್ಲಾ ನೋಡಿ ವಿಷ್ಣು, "ನೀವೆಲ್ಲಾ ಒಟ್ಟಿಗೆ ಸೇರಿ ಬಂದಿದ್ದೀರಲ್ಲಾ? ಏನು ವಿಶೇಷವೋ?" ಎಂದು ಪ್ರಶ್ನೆಮಾಡಿದನು.

ಯಾರು ಮೊದಲು ಏನು ಹೇಳುವುದೆಂದು ತೋರದೆ ಎಲ್ಲರೂ ಸುಮ್ಮನಿದ್ದರು. ಅವರು ಚಿಂತೆಯಲ್ಲಿರುವುದನ್ನು ಅರಿತು ವಿಷ್ಣುವೇ ಪುನಃ "ನಿಮಗೆ ಬಂದ ಕಷ್ಟವೇನೆಂದು ಹೇಳಿದರೆ ಅದಕ್ಕೆ ತಕ್ಕ ಪರಿಹಾರಮಾಡುತ್ತೇನೆ. ಹೇಳಿರಿ" ಎಂದನು.

ವೃತ್ರಾಸುರನಿಂದ ಇಂದ್ರನಿಗೆ ಬಂದ ಕಷ್ಟವನ್ನು, ದೇವತೆಗಳು ಗತಿ ತಪ್ಪಿ ಹೋಗಿ, ಪ್ರಪಂಚದ ಕ್ರಮವೂ ತಪ್ಪುವ ಅಪಾಯವನ್ನು ಕುರಿತು ಬ್ರಹ್ಮನೂ ಶಿವನೂ ಹೇಳಿದರು. ಅದನ್ನೆಲ್ಲಾ ಕೇಳಿ ವಿಷ್ಣು ಅವರೊಂದಿಗೆ ಹೀಗೆಂದನು:

"ನಿಜ ನಿಜ. ನಿಮಗೆಲ್ಲಾ ಎಂತಹ ಕಷ್ಟ ಬಂದಿದೆ ಎಂದು ನನಗೆ ಗೊತ್ತಿದೆ. ವೃತ್ರನನ್ನು ಯಾವುದಾದರೂ ಮೋಸದಿಂದಲೇ ಕೊಲ್ಲಬೇಕಾಗಿದೆ. ಅದಕ್ಕೆ ತಕ್ಕ ಉಪಾಯವನ್ನು ಆಲೋಚಿಸಿ ಹೇಳುತ್ತೇನೆ. ಬ್ರಹ್ಮನಿಂದ ಪಡೆದ ವರಗಳ ಮಹಿಮೆಯಿಂದ ಯಾರಿಂದಲೂ ಸಾವಿಲ್ಲದಂತೆ ಮದಿಸಿ ನಿರಂಕುಶನಾಗಿ ಪ್ರವರ್ತಿಸುತ್ತಿದ್ದಾನೆ ಆ ವೃತ್ರ. ನೀವು ಹೇಗಾದರೂ ಮಾಡಿ ವೃತ್ರನಿಗೂ ಇಂದ್ರನಿಗೂ ಸ್ನೇಹಮಾಡಿಸಿಬಿಡಿ. ನಾನು ವಜ್ರಾಯುಧದಲ್ಲಿ ಅದೃಶ್ಯನಾಗಿದ್ದು ನಿಮಗೆ ಸಹಾಯ ಮಾಡುತ್ತೇನೆ. ಎಂತಹ ಕಪಟದಿಂದ ಅವನನ್ನು ಸ್ನೇಹಕ್ಕೆ ಒಪ್ಪಿಸಲು ಸಾಧ್ಯವೋ ಅಂತಹ ಕಪಟವನ್ನೇ ಪ್ರಯೋಗಿಸಿರಿ. ಹೇಗಾದರೂ ಅವನನ್ನು ನಂಬಿಸಿರಿ. ಅಷ್ಟುಮಾತ್ರ ನೀವು ನಿಮ್ಮ ವಾಗ್ಜಾಲದಿಂದ ಮಾಡಿಬಿಟ್ಟರೆ ಸಾಕು. ಆ ಮೇಲೆ ಇಂದ್ರನು ಅವನನ್ನು ಉಪಾಯವಾಗಿ ಕೊಂದುಬಿಡುತ್ತಾನೆ. ಅದರಿಂದ ತಪ್ಪೇನಿಲ್ಲ. ನಾನು ಮೊದಲು ಮೋಸಗಳನ್ನು ಮಾಡಲಿಲ್ಲವೇ? ವಾಮನನ ರೂಪದಲ್ಲಿ ಹೋಗಿ ಬಲಿಯನ್ನು ಮೋಸಪಡಿಸಿದ್ದೇನೆ. ಮೋಹಿನಿ ರೂಪದಲ್ಲಿ ದಾನವರನ್ನು ಮೋಸಪಡಿಸಿದ್ದೇನೆ.

ದೊಡ್ಡ ಕೆಡುಕನ್ನು ಕೆಡಹಲು ಈ ಬಗೆಯ ಮೋಸಗಳನ್ನು ಮಾಡಲೇ ಬೇಕಾಗುತ್ತದೆ. ಇನ್ನೊಂದು ಮುಖ್ಯ ವಿಷಯ. ಸಮಸ್ತ ಕೋರಿಕೆಗಳನ್ನೂ ತೀರಿಸುವಂಥವಳಾದ ಜಗಜ್ಜನನಿಯನ್ನು ಮೊದಲು ಪ್ರಾರ್ಥನೆ ಮಾಡಿ ಒಲಿಸಿಕೊಳ್ಳಿರಿ. ಅವಳು ತನ್ನ ಯೋಗಮಾಯೆಯಿಂದ ಸಹಾಯಮಾಡದಿದ್ದರೆ ಅವನನ್ನು ಮೋಸಪಡಿಸಲು ಸಾಧ್ಯವಿಲ್ಲ. ಅವಳ ಮಾಯೆಗೆ ಒಳಪಟ್ಟು ವೃತ್ರನು ಇಂದ್ರನೊಂದಿಗೆ ಸ್ನೇಹಮಾಡಿ, ಅವನ ಕೈಯಲ್ಲಿ ಸಾಯುತ್ತಾನೆ. ಹೀಗೆ ನೀವೆಲ್ಲರೂ ಸೇರಿ ಜಗಜ್ಜನನಿಯ ಸಹಾಯ ಪಡೆಯಿರಿ."

ವಿಷ್ಣು ಹೇಳಿದಂತೆ ದೇವತೆಗಳು ಕಲ್ಪವೃಕ್ಷಗಳಿಂದ ಕೂಡಿದ ಮೇರುಪರ್ವತದ ಮೇಲೆ ಹೋಗಿ ಮಹಾದೇವಿಯನ್ನು ಧ್ಯಾನಮಾಡ ತೊಡಗಿದರು. "ಓ ಜಗಜ್ಜನನೀ! ಈ ಮೊದಲು ನೀನು ನಮಗೆ ಸಹಾಯ ಮಾಡಿ ಮಹಿಷಾಸುರನನ್ನೂ, ಶುಂಭ ನಿಶುಂಭರನ್ನೂ, ಇತರ ರಾಕ್ಷಸರನ್ನೂ ಸಂಹಾರಮಾಡಿರುವೆ. ತಾಯೇ! ಈ ವೃತ್ರನು ನಿನಗೂ ಶತ್ರುವೇ ಆಗಿರಬೇಕು. ಇಲ್ಲದಿದ್ದರೆ ನಿನ್ನ ಭಕ್ತರಾದ ನಮ್ಮನ್ನು ಹೀಗೆ ಹಿಂಸೆಗೊಳಿಸುತ್ತಿದ್ದನೇ?" ಎಂದು ಪ್ರಾರ್ಥಿಸಿಕೊಂಡರು.

ಅವರ ದೈನ್ಯತೆಯನ್ನೂ ಪ್ರಾರ್ಥನೆಯನ್ನೂ ಕೇಳಿ ದೇವಿ ಕನಿಕರಗೊಂಡು, ಸಕಲಾಭರಣಧಾರಿಣಿಯಾಗಿ, ಮೂರು ಕಣ್ಣುಗಳುಳ್ಳವಳಾಗಿ, ನಾಲ್ಕು ಕೈಗಳೊಂದಿಗೆ, ದಿವ್ಯಾಯುಧಗಳನ್ನು ಹಿಡಿದು ರಕ್ತಚಂದನದ ರಂಗಿನ ವಸ್ತ್ರಗಳನ್ನು ಧರಿಸಿಕೊಂಡು ಪ್ರತ್ಯಕ್ಷಳಾದಳು.

ಅನಂತರ ದೇವತೆಗಳ ಕೋರಿಕೆಯಂತೆ ಅವರಿಗೆ ಸಹಾಯಮಾಡುತ್ತೇನೆಂದು ಮಾತುಕೊಟ್ಟು, ಮಹಾದೇವಿ ಅಂತರ್ಧಾನಳಾದಳು. ದೇವತೆಗಳು ಕೃತಕೃತ್ಯರಾದ ಆನಂದದಲ್ಲಿ, ಇಂದ್ರನಿಗೂ ವೃತ್ರನಿಗೂ ಸ್ನೇಹ ಮಾಡಿಸುವ ಭಾರವನ್ನು ಮುನಿಗಳಿಗೆ ಒಪ್ಪಿಸಿದರು.

ಆದರಂತೆ ಮುನಿಗಳು ವೃತ್ರನ ಬಳಿಗೆ ಹೋಗಿ, ಕುಶಲ ವಿಚಾರಿಸಿ ಹೊಗಳಿ ಮಾತು ಪ್ರಾರಂಭಿಸಿ,



"ನೋಡಯ್ಯಾ ವೃತ್ರಾ! ನೀನು ಎಷ್ಟು ಯೋಗ್ಯನಾದವನೋ ಅಷ್ಟೇ ಯೋಗ್ಯತೆ ಇಂದ್ರನಿಗೂ ಇದೆ, ಹಾಗಿರುವಾಗ ನೀವಿಬ್ಬರೂ ಸ್ನೇಹವಾಗಿದ್ದರೆ ಕೇಳುವುದೇನಿದೆ? ಇಂದ್ರನು ನಿನ್ನೊಡನೆ ಸ್ನೇಹ ಪ್ರಮಾಣಕ್ಕೆ ಸಿದ್ಧನಾಗಿದ್ದಾನೆ. ನೀನು ಕೂಡಾ ಹಾಗೇ ಮಾಡಿಬಿಡು. ಮುನಿಗಳಾದ ನಾವೇ ನಿಮ್ಮ ಸ್ನೇಹ ಸಂಬಂಧಕ್ಕೆ ಮಧ್ಯವರ್ತಿಗಳಾಗಿರುತ್ತೇವೆ. ವಿರೋಧಿಯನ್ನು ವಿರೋಧಿಯಾಗಿಯೇ ತಿರುಗಿಸಿಕೊಂಡಿರುವುದು ಒಳ್ಳೆಯದಲ್ಲ. ಪ್ರಪಂಚ ಕ್ಷೇಮಕ್ಕೂ ಕೆಡುಕೇ. ಸ್ನೇಹವಾಗಿದ್ದರೆ ನಿಮ್ಮಿಬ್ಬರ ಪ್ರಯೋಜನಗಳಿಂದ ಪ್ರಪಂಚಕ್ಕೆ ಮೇಲೇ ಆಗುತ್ತದೆ. ವ್ಯವಹಾರದಲ್ಲಿ ಶತ್ರು, ಮಿತ್ರ, ಯುದ್ಧ, ಸೋಲು, ಸ್ನೇಹ, ಸಂಧಿ ಎಲ್ಲವೂ ಸಹಜವೇ" ಎಂದರು.

ಅದಕ್ಕೆ ವೃತ್ರನು, "ಅವರವರ ದ್ರೋಹ ಅವರವರನ್ನೇ ಮುಳುಗಿಸುತ್ತದೆ. ಹಾಗಂತ ನಿಮ್ಮ ಮಾತನ್ನು ಮೀರಿ ನಡೆಯಲಿಕ್ಕೂ ಮನಸ್ಸು ಬರುವು



ದಿಲ್ಲ. ಏಕೆಂದರೆ ನೀವು ಲೋಕಹಿತಚಿಂತಕರಾದ ಮುನಿಗಳು. ಆದರೂ ಪಾಪಾತ್ಮನೂ, ಬ್ರಹ್ಮ ಹಂತಕನೂ ಆದ ಇಂದ್ರನನ್ನು ಹೇಗೆ ನಂಬಲಿ? ಮಹಾ ಸ್ವಾರ್ಥಿ ಬೇರೆ!" ಎಂದನು ವೃತ್ರ.

"ನೀನು ಹೇಳಿದಂತೆ ಅವರವರ ದ್ರೋಹ ಅವರವರನ್ನೇ ಮುಳುಗಿಸುತ್ತದೆ. ಬ್ರಹ್ಮಹತ್ಯಾಪಾತಕಕ್ಕೂ, ಕಳ್ಳು ಕುಡಿದ ಪಾಪಕ್ಕೂ ಪ್ರಾಯಶ್ಚಿತ್ತವಾದರೂ ಇದೆ. ಆದರೆ ಮಿತ್ರದ್ರೋಹಕ್ಕೆ ಪ್ರಾಯಶ್ಚಿತ್ತವಿಲ್ಲವಲ್ಲ? ಆದುದರಿಂದ ಸ್ನೇಹಪ್ರಮಾಣಮಾಡಿದ ಮೇಲೆ ಇಂದ್ರನು ಪ್ರಮಾಣ ಮುರಿಯಲಾರ! ನಿಃಸಂಶಯದಿಂದ ಸ್ನೇಹಪ್ರಮಾಣ ಮಾಡಿಕೊಳ್ಳಿರಿ." ಎಂದರು ಮುನಿಗಳು.

"ಒದ್ದೆಯಿಂದಾಗಲೀ, ಒಣಗಿದುದರಿಂದಾಗಲೀ, ಕಲ್ಲಿನಿಂದಾಗಲೀ, ಕೋಲಿನಿಂದಾಗಲೀ, ಕಠಿಣವಾದ ವಜ್ರದಿಂದಾಗಲೀ, ಹಗಲಲ್ಲೋ, ರಾತ್ರಿಯಲ್ಲೋ ಯಾವ ದೇವತೆಗಳೋ, ಆ ದೇವತೆಗಳ ನಾಯಕ ಇಂದ್ರನೋ ನನ್ನನ್ನು ಕೊಲ್ಲಕೂಡದು. ಈ ನಿಬಂಧನೆಗಳಿಗೆ ಅಭ್ಯಂತರವಿಲ್ಲದಿದ್ದರೆ, ನಿಮ್ಮ ಇಚ್ಛೆಯಂತೆ ನಡೆಸಬಹುದು" ಎಂದನು ವೃತ್ರ.

ಮುನಿಗಳು ಈ ಮಾತನ್ನು ಒಯ್ದು ಇಂದ್ರನಿಗೆ ತಲಪಿಸಿದರು. ಇಂದ್ರನು ಆ ನಿಬಂಧನೆಗಳಿಗೆ ಒಪ್ಪಿದನು. ಆಮೇಲೆ ನಿರ್ವಿಘ್ನವಾಗಿ ಅಗ್ನಿಸಾಕ್ಷಿಯಾಗಿ ಇಂದ್ರವೃತ್ರರೊಳಗೆ ಸ್ನೇಹಬಂಧನವಾಯಿತು. ಅಂದಿನಿಂದ ಇಬ್ಬರೂ ಸ್ನೇಹದಿಂದ ಕೂಡಿ ತಿರುಗಾಡಲಾರಂಭಿಸಿದರು. ಸಮುದ್ರತೀರದಲ್ಲಿಯೂ, ನಂದನವನದಲ್ಲಿಯೂ ಸಂಚಾರ ಮಾಡಿದರು, ಇಂದ್ರನ ನಡವಳಿಕೆಗಳನ್ನು ನೋಡಿ ವೃತ್ರನಿಗೆ ತೃಪ್ತಿಯಾಯಿತು. ಆದರೆ ಇಂದ್ರನು ಮಾತ್ರ ವೃತ್ರನನ್ನು ಕೊಲ್ಲುವ ಅವಕಾಶಕ್ಕಾಗಿ ಹೊಂಚುತ್ತ ತಕ್ಕ ಕ್ಷಣಗಳನ್ನು ಎಣಿಸಿಕೊಂಡೇ ಇದ್ದನು.

ತನ್ನ ಮಗನು ಇಂದ್ರನೊಂದಿಗೆ ಸ್ನೇಹ ಮಾಡಿಕೊಂಡು ತಿರುಗಾಡುವನೆಂಬ ಸಮಾಚಾರ ತ್ವಷ್ಟೃವಿಗೆ ಗೊತ್ತಾಯಿತು. ಅವನು ಅತ್ಯಾಶ್ಚರ್ಯದಿಂದ ಮಗನನ್ನು ನೋಡಲು ಬಂದು ವೃತ್ರನೊಂದಿಗೆ ಹೀಗೆಂದನು :

"ಏನಿದು ಮಗನೇ! ಆ ಮೋಸಗಾರ ಇಂದ್ರನನ್ನು ನೀನು ಹೇಗೆ ನಂಬಿದೆ? ಎಲ್ಲರೂ ನಮ್ಮ ಹಾಗಿನವರೇ ಅಂದುಕೊಳ್ಳುವುದು ಬಹಳ ತಪ್ಪು. ಎಂತಹ ಹುಚ್ಚನಾದರೂ ಶತ್ರುವನ್ನು ನಂಬುತ್ತಾನೆಯೇ? ಅದರ ಮೇಲೆ ಅವಕಾಶ ಸಿಕ್ಕಿದಾಗ ನಂಬಿಕೆಯನ್ನು ಭಂಗಿಸುವುದರಲ್ಲಿ ಹೆಸರುಹೋದವನು ಇಂದ್ರ! ಅವನು ಧರ್ಮನ್ಯಾಯಗಳಿಗೆ ಕಟ್ಟು ಬೀಳುವುದುಂಟೇನೋ?"

ಈ ರೀತಿಯಾಗಿ ತಂದೆ ಎಷ್ಟೇ ಬೋಧಿಸಿದರೂ ಕಾಲ ಮೂಡಿಬಂದ ವೃತ್ರನ ತಲೆಗೆ ಏರಲಿಲ್ಲ. ಮಹಾದೇವಿಯ ಮಾಯೆಯೇ ಅಂತಹುದು!

ಒಂದು ದಿನ ಸಂಧ್ಯಾಕಾಲದ ವೇಳೆಯಲ್ಲಿ ಇಂದ್ರನೂ ವೃತ್ರನೂ ಸಮುದ್ರತೀರದಲ್ಲಿ ತಿರುಗಾಡು

ತ್ತಿದ್ದರು. ಅದು ರಾತ್ರಿಯೂ ಅಲ್ಲ, ಹಗಲೂ ಅಲ್ಲ. ಅಷ್ಟುಮಾತ್ರವಲ್ಲದೆ ವೃತ್ರನು ಒಬ್ಬಂಟಿಗನಾಗಿದ್ದಾನೆ. ಇವನನ್ನು ಕೊಲ್ಲಲು ಇದೇ ತಕ್ಕ ಸಮಯ, ಎಂದು ಕೊಂಡು ಇಂದ್ರನು ವಿಷ್ಣುವನ್ನು ಧ್ಯಾನಿಸಿದನು. ವಿಷ್ಣು ಬಂದು ಅದೃಶ್ಯರೂಪದಲ್ಲಿ ವಜ್ರಾಯುಧ ದೊಳಗೆ ಪ್ರವೇಶಿಸಿದನು. ಇಂದ್ರನಿಗೆ ಸಮುದ್ರ ದಲ್ಲಿರುವ ನೊರೆಗಳು ಕಂಡುಬಂದುವು. ಅವು ಒದ್ದೆಯೂ ಅಲ್ಲ, ಒಣಗಿದುವೂ ಅಲ್ಲ. ಯಾವ ವಿಧವಾದ ಆಯುಧವೂ ಅಲ್ಲ ಅವುಗಳು. ಇಂದ್ರನು ದೇವಿಯನ್ನು ಧ್ಯಾನಿಸಿಕೊಂಡನು. ಅವಳು ತನ್ನ ಅಂಶವನ್ನು ಆ ನೊರೆಗಳಲ್ಲಿ ಪ್ರವೇಶಗೊಳಿಸಿದಳು. ಇಂದ್ರನು ತನ್ನ ವಜ್ರಾಯುಧವನ್ನು ತೊಳೆಯುವವ ನಂತೆ ಆ ನೊರೆಗಳಿಂದ ಮುಟ್ಟಿ ವೃತ್ರನ ಮೇಲೆ ಬಲವಾಗಿ ಬೀಸಿ ಎಸೆದನು. ಆ ಪೆಟ್ಟಿಗೆ ವೃತ್ರನು ಪರ್ವತ ಒಡೆದುಬಿದ್ದಂತೆ ಬಿದ್ದು ಪ್ರಾಣಬಿಟ್ಟನು.

ಹೀಗೆ ಇಂದ್ರನ ಶತ್ರುಭಯವು ತೀರಿಹೋಯಿತು. ಅವನು ಎಲ್ಲಾ ದೇವತೆಗಳೊಂದಿಗೆ ಸ್ವರ್ಗದಲ್ಲಿರುವ ಉಳಿದ ರಾಕ್ಷಸರನ್ನೆಲ್ಲಾ ಓಡಿಸಿ ಅಮರಾವತಿಯ ಸಿಂಹಾಸನವನ್ನು ಸ್ವಾಧೀನಪಡಿಸಿಕೊಂಡನು. ದೇವತೆ ಗಳಿಂದಲೂ, ಮುನಿಗಳಿಂದಲೂ ಹೊಗಳಿಸಿಕೊಂಡು, ಇಂದ್ರನು ದೇವಿಯನ್ನು ಮರೆಯದೆ ಮಹಾ ಉತ್ಸವ ಮಾಡಿಸಿ ಪೂಜಿಸಿದನು. ತನ್ನ ನಂದನವನದಲ್ಲಿ ಮಹಾ ದೇವಿಗಾಗಿ ದಿವ್ಯವಾದ ಆಲಯವನ್ನು ಕಟ್ಟಿ ಪ್ರತಿಷ್ಠೆ ನಡೆಸಿದನು. ಅನಂತರ ತನಗೆ ಸಹಾಯಮಾಡಿದ ವಿಷ್ಣುವನ್ನೂ ಎಲ್ಲಾ ದೇವತೆಗಳೊಂದಿಗೆ ಕೂಡಿ ಪೂಜಿಸಿದನು. ವೃತ್ರನನ್ನು ಕೊಂದವರು ವಿಷ್ಣುವೂ ದೇವಿಯೂ ಇಂದ್ರನೂ ಕೂಡಿಯೇ ಆದರೂ ಅದರ ಕೀರ್ತಿ ಇಂದ್ರನಿಗೇ ಇರಲೆಂದನು ವಿಷ್ಣು.

ಅದೆಲ್ಲಾ ಮುಗಿದ ಮೇಲೆ ಇಂದ್ರನಿಗೆ ತಾನು ಮಿತ್ರದ್ರೋಹಮಾಡಿದೆನೆಂದು ದಿಗಿಲು ಹುಟ್ಟಿತು. ಈ ಪಾತಕದಲ್ಲಿ ತಮಗೂ ವಿಷ್ಣುವಿಗೂ ಭಾಗವಿರುವು



ದನ್ನು ನೆನೆದು ಮುನಿಗಳು ಕೂಡಾ ಭಯಪಟ್ಟರು. ತಾವು ಮಾಡಿದ ಕೆಲಸಕ್ಕೆ ಮುನಿಗಳು ಪಶ್ಚಾತ್ತಾಪ ಪಡುತ್ತ ತಮ್ಮ ಆಶ್ರಮಗಳಲ್ಲಿ ಬಾಡಿದವರಾಗಿದ್ದರು.

ಕಡೆಗೂ ತನ್ನ ಇನ್ನೊಬ್ಬ ಮಗನೂ ಸತ್ತುಹೋದು ದನ್ನು ನೋಡಿ ತ್ವಷ್ಟ ತುಂಬಾ ದುಃಖದಿಂದ ಮಗನಿಗೆ ಉತ್ತರ ಕ್ರಿಯೆಗಳನ್ನು ಮಾಡಿದನು. ಮೋಸದಿಂದ ವೃತ್ರನನ್ನು ಕೊಂದ ಇಂದ್ರನು ಕಷ್ಟದಲ್ಲೇ ಬೀಳಲೆಂದು ಶಪಿಸಿದನು.

ಆ ಶಾಪದಿಂದಾಗಿ ವೃತ್ರನನ್ನು ಕೊಂದ ಅನಂತರ ಇಂದ್ರನ ತೇಜಸ್ಸು ಮಂಕಾಗಿಹೋಯಿತು. "ಇಂದ್ರನು ಕೃತಘ್ನ" ಎಂದು ದೇವತೆಗಳೇ ಹೇಳಿಕೊಳ್ಳ ತೊಡಗಿದರು. ಅವನ ಮೇಲೆ ದೇವತೆಗಳಿಗೆ ಗೌರವ ವಿಳಿಯಿತು. ಸ್ವಾರ್ಥಕ್ಕಾಗಿ ಪ್ರಮಾಣಗಳನ್ನೆಲ್ಲವನ್ನೂ ಗಾಳಿಗೆ ತೂರಿಸಿ ಮಿತ್ರಘಾತಕನಾದ ಇಂದ್ರನಿಗೆ ಸಮಾನರಾದವರು ಮೂರು ಲೋಕಗಳಲ್ಲಿಯೂ ಇನ್ನೊಬ್ಬರಿಲ್ಲವೆಂದು ದೇವತೆಗಳು ವ್ಯಂಗ್ಯವಾಗಿ



ಮಾತಾಡಿಕೊಳ್ಳ ತೊಡಗಿದರು. ಮಾನವ ಲೋಕ ದಲ್ಲಿಯೂ ಇಂದ್ರನ ಅಪಖ್ಯಾತಿ ಹರಡಿತು.

ಕಡೆಗೆ ಇಂದ್ರನು ಸಭೆಯಲ್ಲಿ ಮುಖ ತೋರಿಸಲು ನಾಚಿ, ಒಳಗೊಳಗೇ ಕುದಿಯುತ್ತ ಮನೆಯ ಮೂಲೆ ಯಲ್ಲಿ ಕುಳಿತಿರುವುದನ್ನು ನೋಡಿ ಅವನ ಹೆಂಡತಿ ಶಚೀದೇವಿ, "ಇದೇನಿದು? ಶತ್ರುಭಯವು ನೀಗಿ ಹೋದರೂ ಸುಖಸಂತೋಷವಿಲ್ಲವೇಕೆ? ಅಂತಹ ಶತ್ರು ಬೇರೆ ಯಾರಾದರೂ ಇರುವ ಹಾಗೆ ಕಾಣುವು ದಿಲ್ಲವಲ್ಲಾ?" ಎಂದು ಕೇಳಿದಳು.

ಇಂದ್ರನು ಶಚೀದೇವಿಯನ್ನು ನೋಡಿ, "ನನಗೆ ಈಗ ಹಿಡಿದಿರುವುದು ಶತ್ರುಭಯವೇನಲ್ಲ. ಬ್ರಹ್ಮ ಹತ್ಯಾ ಪಾತಕದ ಭಯ! ಇಲ್ಲಿಯ ನಂದನವನವೂ ಅಮೃತವೂ, ಗಂಧರ್ವ ಗಾನವೂ, ಅಪ್ಸರಸಿಯರ ನೃತ್ಯವೂ, ನೀನೂ, ಇತರ ಸ್ತ್ರೀಯರೂ, ಕಾಮ ಧೇನುವೂ, ಕಲ್ಪವೃಕ್ಷವೂ ಯಾವುದೂ ನನಗೆ ಈಗ ಸುಖಸಂತೋಷವೀಯಲಾರದು!" ಎಂದನು.

ಕಡೆಗೆ ಇಂದ್ರನು ಸ್ವರ್ಗದಲ್ಲಿರಲಾರದೆ, ಮಾನಸ ಸರೋವರದ ಬಳಿಗೆ ಹೋಗಿ, ಯಾರಿಗೂ ಕಾಣದಂತೆ ಸರೋವರದ ಒಂದು ತಾವರೆದಂಟಿನೊಳಗೆ ಪ್ರವೇಶಿಸಿ ನೀರು ಹಾವಿನ ಹಾಗೆ ನೀರಿನಲ್ಲೇ ಸೇರಿದನು.

ಇಂದ್ರನು ಮಾಯವಾದುದರಿಂದ ಪ್ರಪಂಚವು ಅರಾಜಕವಾಯಿತು. ಆ ಸ್ಥಿತಿಯನ್ನು ನಿವಾರಿಸಲು ದೇವತೆಗಳೂ ಮುನಿಗಳೂ ಕೂಡಿ ಆಲೋಚನೆ ಮಾಡಿ, ಇಂದ್ರ ಪದವಿಯನ್ನು ನಿರ್ವಹಿಸಲು ತಕ್ಕವನು ನಹುಷ ಮಹಾರಾಜನೆಂದು ನಿರ್ಣಯಿಸಿ, ಅವನನ್ನು ಕರೆದು ತಂದು ಇಂದ್ರ ಪದವಿಯಲ್ಲಿ ಕೂಡಿಸಿದರು. ಅದುವರೆಗೆ ಮಹಾ ಧರ್ಮಾತ್ಮನೆಂದು ಖ್ಯಾತ ನಾಗಿದ್ದ ನಹುಷನಿಗೆ ಅಧಿಕಾರ ಮದ ತಲೆಗೇರಿ ಸ್ತ್ರೀ ವ್ಯಾಮೋಹವು ಕವಿಯಿತು. ಶಚೀದೇವಿ ತುಂಬಾ ಸುಂದರಿ ಎಂದು ತಿಳಿದು ಋಷಿಗಳನ್ನು ಕರೆದು, "ಈಗ ನಾನು ದೇವತೆಗಳ ರಾಜನಾಗಿದ್ದೇನೆ, ನಾನೇ ಇಂದ್ರ. ಹಾಗಿರುವಾಗ ನನ್ನನ್ನು ಸೇವಿಸಲು ಇಂದ್ರನ ಪತ್ನಿ ಬರಲಿ! ಅವಳನ್ನು ಕರೆಸಿರಿ!" ಎಂದನು.

ಋಷಿಗಳು ನಹುಷೇಂದ್ರನ ಮಾತು ಕೇಳಿ ಕಳವಳ ಪಡುತ್ತಾ, ಹೋಗಿ ಶಚೀದೇವಿಯೊಂದಿಗೆ ಆ ಮಾತನ್ನು ಹೇಳಿದರು. ಶಚೀದೇವಿ ಬೃಹಸ್ಪತಿಯ ಮೊರೆ ಹೊಕ್ಕು ತನ್ನನ್ನು ಕಾಪಾಡಬೇಕೆಂದು ಬೇಡಿಕೊಂಡಳು. ಬೃಹಸ್ಪತಿ ಅವಳಿಗೆ ಅಭಯ ವಚನಗಳನ್ನು ಹೇಳಿದನು. ಅವನು ಹೇಳಿಕೊಟ್ಟ ಉಪಾಯದಂತೆ ಶಚೀದೇವಿ ಋಷಿಗಳೊಂದಿಗೆ ನಹುಷನ ಬಳಿಗೆ ಹೋದಳು.

ಅವಳು ನಹುಷನ ಮುಂದೆ ನಿಂತು, "ಕರೆದ ಮಾತಿಗೆ ಗೌರವ ಕೊಟ್ಟು ಬಂದೆನು. ನಿಮ್ಮ ಮನೋಗತವನ್ನೂ ಅರಿತಿದ್ದೇನೆ. ಆದರೆ ಗಂಡನ ಜಾಡು ತಿಳಿಯುವವರೆಗೂ ನಾನು ನಿಮ್ಮವಳಾಗಲು ಸಾಧ್ಯವಿಲ್ಲ. ಅದನ್ನು ತಿಳಿದ ಮೇಲೆ ನಾನು ಧೈರ್ಯ ದಿಂದ ನಿಮ್ಮನ್ನು ವರಿಸುತ್ತೇನೆ ಅದುವರೆಗೂ ತಾಳ ಬೇಕು." ಎಂದಳು ಶಚೀ.

ನಹುಷನು ಸರಿಯೆಂದು ಇಂದ್ರನನ್ನು ಹುಡುಕಿಸುವ ಏರ್ಪಾಡನ್ನು ಮಾಡಿದನು. ಅಷ್ಟರೊಳಗೆ ದೇವತೆಗಳು ವಿಷ್ಣುವಿನ ಬಳಿಗೆ ಹೋಗಿ, ಶಚೀದೇವಿಗೆ ಬಂದ ಇಕ್ಕಟ್ಟಿನ ಪರಿಸ್ಥಿತಿಯನ್ನು ಕುರಿತು ಹೇಳಿದರು.

"ನೀವು ಅಶ್ವಮೇಧ ಯಾಗವನ್ನು ಮಾಡಿ, ಜಗದಂಬೆಯನ್ನು ತೃಪ್ತಿಪಡಿಸುವುದು ಒಳ್ಳೆಯದು. ಆಗ ಇಂದ್ರನು ಮತ್ತೆ ಮೊದಲಿನಂತೆ ರಾಜನಾಗುತ್ತಾನೆ. ಶಚೀದೇವಿ ತನ್ನ ಗಂಡನೊಂದಿಗೆ ಸೇರುತ್ತಾಳೆ." ಎಂದನು ವಿಷ್ಣು.

ದೇವತೆಗಳು ಆಶಾವಾದಿಗಳಾಗಿ ನೀರಿನೊಳಗೆ ಸಂಚರಿಸಿಕೊಂಡಿದ್ದ ಇಂದ್ರನನ್ನು ಕರೆದುಕೊಂಡು ಹೋಗಿ ಅವನಿಂದ ಅಶ್ವಮೇಧ ಯಾಗವನ್ನು ಮಾಡಿಸಿದರು. ಆದರೂ ಅವನು ಅಮರಾವತಿಗೆ ಬಾರದಿರುವುದನ್ನು ನೋಡಿ ಶಚೀದೇವಿ ಗಂಡನು ಬಾರದಿರುವುದರ ಕಾರಣವನ್ನು ಬೃಹಸ್ಪತಿಯೊಡನೆ ಕೇಳಿದಳು. "ನೀನು ಮಹಾದೇವಿಯನ್ನು ಆರಾಧಿಸಿಕೊಂಡಿರು. ಎಲ್ಲಾ ಶುಭವಾಗುತ್ತದೆ." ಎಂದು ಹೇಳಿದನು ಬೃಹಸ್ಪತಿ.

ಅವಳು ಹಾಗೆಯೇ ದೇವಿಯನ್ನು ಆರಾಧಿಸಿಕೊಂಡಿರುವಾಗ, ದೇವಿ ಅವಳ ಮುಂದೆ ಪ್ರತ್ಯಕ್ಷಳಾಗಿ, "ಹೆದರಬೇಡ. ನಹುಷನಿಗೆ ಕಾಲ ಮೂಡಿತು. ಇಂದ್ರನ ಶಾಪ ಕಳೆಯಿತು. ನೀನೇ ನಿನ್ನ ಗಂಡನ ಬಳಿಗೆ ಹೋಗಿ ಉಪಾಯ ಕೇಳು. ಅವನು ಮಾನಸ ಸರೋವರದಲ್ಲಿ ಅಡಗಿಕೊಂಡಿದ್ದಾನೆ" ಎಂದಳು ದೇವಿ.

ಕೂಡಲೇ ಶಚಿ ಇಂದ್ರನ ಬಳಿಗೆ ಹೋಗಿ, ನಹುಷನಿಗೆ ತನ್ನ ಮೇಲೆ ಕಣ್ಣು ಬಿದ್ದ ಸಮಾಚಾರವನ್ನು ಹೇಳಿದಳು. "ಋಷಿಗಳು ಹೊತ್ತುಕೊಳ್ಳುವ ವಾಹನದಲ್ಲಿ ಕುಳಿತುಕೊಂಡು ನನ್ನ ಅಂತಃಪುರಕ್ಕೆ ಬಾ ಎಂದು ನಹುಷನಿಗೆ ಹೇಳಿ ಕಳುಹಿಸು. ಅಲ್ಲಿಗೆ ಅವನ ಇಂದ್ರ ಪದವಿ ಮುಗಿಯುತ್ತದೆ." ಎಂದು ಇಂದ್ರನು ಶಚಿಗೆ ಉಪಾಯ ಹೇಳಿದನು.

ಈ ಉಪಾಯ ನಾಟಿತು. ಶಚೀದೇವಿಯನ್ನು ತನ್ನ ಹೆಂಡತಿಯನ್ನಾಗಿ ಮಾಡಿಕೊಳ್ಳುವ ಆತುರದಲ್ಲಿ ನಹುಷನು ತನ್ನ ವಾಹನವನ್ನು ಸಪ್ತ ಋಷಿಗಳು ಹೊತ್ತು ಹೋಗಬೇಕೆಂದೂ, ಇತರ ಋಷಿಗಳು ಅವರೊಂದಿಗೆ ಬರಬೇಕೆಂದೂ ಋಷಿಗಳಿಗೆ ಹೇಳಿದನು. ಋಷಿಗಳು ಒಪ್ಪಿಕೊಂಡು ನಿಧಾನವಾಗಿ ನಡೆಯುವಾಗ ನಹುಷನು ಆತುರದಿಂದ, "ಸರ್ಪ! ಸರ್ಪ!" ಎನ್ನುತ್ತ ಗಿಡ್ಡನಾದ ಅಗಸ್ತ್ಯನ ತಲೆಗೆ ಒದೆದನು.

ಕೂಡಲೇ ಅಗಸ್ತ್ಯನು "ನೀನೇ ಸರ್ಪವಾಗು!" ಎಂದು ಶಪಿಸಿದ್ದೇ ತಡ, ನಹುಷನು ಹಾವಿನ ರೂಪ ಧರಿಸಿ ಭೂಮಿಗೆ ಬಿದ್ದನು. ಹೀಗೆ ಇಂದ್ರನು ಹೆಂಡತಿಯ ಪ್ರೇಮದಿಂದ, ದೇವತೆಗಳ ಒತ್ತಾಯದಿಂದ, ಚಿಂತೆ ಬಿಟ್ಟು ಮತ್ತೆ ಸ್ವರ್ಗಾಧಿಪತಿಯಾದನು.





# ದೇವೀಭಾಗವತ

ಸೂರ್ಯ ವಂಶದಲ್ಲಿ ರಾಮನಿಗಿಂತ ಪೂರ್ವದಲ್ಲಿ ಅನೇಕ ವರ್ಷಗಳ ಹಿಂದೆ ತ್ರಿಶಂಕು ಎಂಬ ರಾಜನಿದ್ದನು. ಈ ತ್ರಿಶಂಕು ರಾಜನೇ 'ತ್ರಿಶಂಕು ಸ್ವರ್ಗ'ಕ್ಕೆ ಕಾರಣನಾಗಿ ಪ್ರಸಿದ್ಧನಾದವನು. ವಿಶ್ವಾಮಿತ್ರನು ಇವನನ್ನು ಮರ್ತ್ಯ ದೇಹದೊಂದಿಗೇ ಸ್ವರ್ಗಕ್ಕೆ ಕಳುಹಿಸುವೆನೆಂದು ಹೇಳಿ, ಹಾಗೆ ಕಳುಹಿಸಲು ಸಾಧ್ಯವಾಗದೆ, ಅವನಿಗಾಗಿ ಒಂದು ಸ್ವರ್ಗವನ್ನೇ ಸೃಷ್ಟಿಸಿಕೊಟ್ಟನು.

ಈ ತ್ರಿಶಂಕು ರಾಜನಿಗೆ ಹರಿಶ್ಚಂದ್ರನೆಂಬ ಒಬ್ಬ ಮಗನಿದ್ದನು. ಹರಿಶ್ಚಂದ್ರನಿಗೆ ಬಹಳ ಕಾಲವಾದರೂ ಸಂತಾನವಾಗಲಿಲ್ಲ. ಕಡೆಗೆ ಅವನು ತನಗೆ ಮಕ್ಕಳು ಹುಟ್ಟಿದರೆ ವರುಣನಿಗೆ ಮೊದಲನೇ ಮಗನನ್ನು ನರಬಲಿ ಕೊಡುತ್ತೇನೆಂದು ಹರಿಕೆ ಹೇಳಿಕೊಂಡನು. ಆಮೇಲೆ ಅವನ ಹೆಂಡತಿ ಗರ್ಭಿಣಿಯಾಗಿ ಒಬ್ಬ ಮಗನನ್ನು ಹಡೆದಳು. ಹರಿಶ್ಚಂದ್ರನು ದಾನಧರ್ಮಗಳಿಂದ ಪುತ್ರೋತ್ಸವವನ್ನು ಮಾಡಿಸಿದನು.

ಆ ಸಂದರ್ಭದಲ್ಲಿ ಬ್ರಾಹ್ಮಣ ರೂಪದಲ್ಲಿ ವರುಣನು ಬಂದನು. ಅವನು ಕೂಡಾ ಹರಿಶ್ಚಂದ್ರನಿಂದ ದಾನಗಳನ್ನು ಹಿಡಿಯುತ್ತ, "ನಾನಾರು ಗೊತ್ತಾಯಿತೆ? ನಿನ್ನ ಮಗನನ್ನು ನನಗೆ ಬಲಿಕೊಟ್ಟು ಹೇಳಿದ ಮಾತು ನಡೆಸು" ಎಂದನು.

"ಮಹಾತ್ಮಾ, ನನ್ನ ಹೆಂಡತಿ ನಲುವತ್ತು ದಿನಗಳವರೆಗೆ ಬಾಣಂತಿ ಮೈಲಿಗೆಯಲ್ಲಿದ್ದಾಳೆ. ಅಷ್ಟರವರೆಗೆ ತಾಳು" ಎಂದನು.

ವರುಣನು ಸರಿಯೆಂದು ಹೊರಟು ಹೋಗಿ, ನಲುವತ್ತು ದಿನಗಳು ಕಳೆದಮೇಲೆ ಮತ್ತೆ ಬಂದನು. ಹರಿಶ್ಚಂದ್ರನು ಅವನಿಗೆ ಅತಿಥಿ ಸತ್ಕಾರಗಳನ್ನು ಮಾಡಿ, "ಇಷ್ಟೊಂದು ಚಿಕ್ಕಬಾಲನು ಯಜ್ಞಪಶುವಾಗಿ ಉಪಯೋಗಕ್ಕೆ ಬಾರನಲ್ಲಾ? ಅವನಿಗೆ ಉಪನಯನ ಸಂಸ್ಕಾರ ಮುಗಿಯುವವರೆಗೂ ತಾಳಿರಿ" ಎಂದನು ಹರಿಶ್ಚಂದ್ರ.

ಈಸಾರಿ ವರಣನಿಗೆ ಕೋಪ ಬಂದಿತು. "ನಿನ್ನನ್ನು ನಂಬಲಾರೆ. ಮಗನ ಮೇಲಿನ ಪ್ರೀತಿಯಿಂದ ಹೀಗೆ ಹೇಳುವಿ. ನನಗೆ ಅಷ್ಟು ಮಾತ್ರ ಗೊತ್ತಾಗುವುದಿಲ್ಲವೆಂದುಕೊಂಡೆಯಾ? ಆದರೂ ಇದೊಂದು ಕಡೇ

೧೯. ಹರಿಶ್ಚಂದ್ರನ ಕಥೆ



ಅವಕಾಶ ಕೊಟ್ಟದ್ದೇನೆ. ಆಗ ಮಾತು ತಪ್ಪಿ ಏನಾದರೂ ನೆವನ ಹೇಳಿದರೆ ನಿನ್ನನ್ನು ಖಂಡಿತವಾಗಿಯೂ ಶಪಿಸುತ್ತೇನೆ. ಎಚ್ಚರ!" ಎಂದು ಹೇಳಿ ಹೊರಟು ಹೋದನು.

ಅಂದಿನಿಂದ ಹರಿಶ್ಚಂದ್ರನ ಮನಸ್ಸಿನೊಳಗೆ ಭಾರ ಬಿದ್ದಿತು, ಆದನ್ನು ಸಾಧ್ಯವಾದಷ್ಟು ಮಟ್ಟಿಗೆ ಮುಚ್ಚಿಟ್ಟುಕೊಂಡು ತನ್ನ ಮಗನಿಗೆ ಲೋಹಿತಾಕ್ಷನೆಂದು ನಾಮಕರಣ ಮಾಡಿ, ಚೆನ್ನಾಗಿ ವಿದ್ಯಾಭ್ಯಾಸ ಮಾಡಿಸಿದನು. ಸ್ವಲ್ಪ ದೊಡ್ಡವನಾದ ಕೂಡಲೇ ತಾನು ಬಲಿ ಪಶುವಾಗಿ ಸಾಯಲಿರುವ ಸಂಗತಿ ಲೋಹಿತಾಕ್ಷನಿಗೆ ಗೊತ್ತಾಯಿತು. ಆದರಿಂದ ಚಿಂತಿತನಾದ ಲೋಹಿತಾಕ್ಷನು ಉಪನಯನವಾದ ಕೂಡಲೇ ಒಂದು ದಿನ ಮನೆಯಿಂದ ಓಡಿಹೋಗಿ ಯಾರ ಕಣ್ಣಿಗೂ ಬೀಳದಂತೆ ಒಂದು ಬೆಟ್ಟದ ಗುಹೆಯೊಳಗೆ ಅಡಗಿಕೊಂಡನು. ಪಾಪ, ಅವನಿಗೆ ತಾನು ಮುದುಕನಾಗುವ ವರೆಗೂ ಬದುಕಬೇಕೆಂದು ಆಶೆ!

ಲೋಹಿತಾಕ್ಷನಿಗೆ ಉಪನಯನದ ಪ್ರಾಯ ಬಂದ ಮೇಲೆ ಒಂದು ದಿನ ವರುಣನು ಬಂದು ನರಮೇಧ ಮಾಡುವಂತೆ ಹರಿಶ್ಚಂದ್ರನ ಮುಂದೆ ಕುಳಿತನು. "ನಾನು ಹೇಗೆ ಮಾಡಲಿ ಸ್ವಾಮಿ? ನನ್ನ ಮಗನು ಎತ್ತಲೋ ಓಡಿಹೋಗಿದ್ದಾನೆ! ಏನು ಮಾಡುವುದೋ ಗೊತ್ತಾಗುವುದಿಲ್ಲವಲ್ಲಾ!" ಎಂದನು ಹರಿಶ್ಚಂದ್ರ.

"ಸುಳ್ಳುಹೇಳಿ ನನ್ನನ್ನು ಮೋಸಪಡಿಸುವಿಯಾ? ಹಿಡೀ ಶಾಪ! ನಿನಗೆ ಜಲೋದರವೆಂಬ ವ್ಯಾಧಿ ಉಂಟಾಗಲಿ!" ಎಂದು ವರುಣನು ಹರಿಶ್ಚಂದ್ರನನ್ನು ಶಪಿಸಿ ಹೊರಟುಹೋದನು.

ಶಾಪವು ಕೂಡಲೇ ಪ್ರತಿಫಲಿಸಿತು. ಹರಿಶ್ಚಂದ್ರನು ಜಲೋದರ ವ್ಯಾಧಿಯಿಂದ ಸಂಕಟ ಪಡುತ್ತ ಬಿದ್ದನು. ಅದರ ಮೇಲೆ ಮಗನನ್ನು ಕಾಣದ ದುಃಖ ಬೇರೆ ಆತನನ್ನು ಕಾಡುತಿತ್ತು.

ಹೀಗಿರುವಾಗ ಬೆಟ್ಟದ ಗುಹೆಯಲ್ಲಿ ರಹಸ್ಯವಾಗಿ ಜೀವಿಸಿಕೊಂಡಿದ್ದ ಲೋಹಿತಾಕ್ಷನಿಗೆ ಒಂದು ದಿನ ದಾರಿಹೋಕನೊಬ್ಬನು ಕಣ್ಣಿಗೆ ಬಿದ್ದನು. ಆ ದಾರಿಹೋಕನು ಲೋಹಿತಾಕ್ಷನನ್ನು ನೋಡಿ ಗುರುತು ಹಿಡಿದು, "ಇಲ್ಲಿರುವಿಯಾ? ನಿನ್ನ ತಂದೆ ರೋಗದಿಂದ ನರಳಿಕೊಂಡು ಬಿದ್ದಿರುವಾಗ, ಅದರ ಗೊಡವೆಯಿಲ್ಲದೆ ತಿರುಗುವ ನಿನ್ನಂಥ ಮಗನು ಬೇರೆಲ್ಲಿಯೂ ಇರಲಾರನು!" ಎಂದನು.

ಆ ಮಾತು ಲೋಹಿತಾಕ್ಷನ ಮರ್ಮಕ್ಕೆ ತಾಗಿತು. ರೋಗದಲ್ಲಿರುವ ತಂದೆಯನ್ನು ಹೋಗಿ ನೋಡಲು ಹೊರಟು ನಿಂತನು. ಆಗ ದೇವೇಂದ್ರನು ಬ್ರಾಹ್ಮಣ ವೇಷದಿಂದ ಅವನ ಮುಂದೆ ಬಂದು, ಅವನ ಮೇಲೆ ತುಂಬಾ ದಯವುಳ್ಳವನ ಹಾಗೆ, "ತಂದೆಯ ಬಳಿಗೆ ಹೋಗಿ ಏಕೆ ಸಾಯುವಿಯಪ್ಪಾ? ನನ್ನ ಮಾತು ಕೇಳು. ನಿನ್ನ ತಂದೆ ಜಲೋದರ ವ್ಯಾಧಿಯಿಂದ ಕಷ್ಟ ಪಡುತ್ತಿದ್ದಾನೆ. ಆದರಿಂದ ಬಿಡುಗಡೆ ಹೊಂದಲು ನಿನ್ನನ್ನು ವರುಣನಿಗೆ ಬಲಿಕೊಡಬೇಕು. ನೀನು

ಹೋದರೆ ಅದನ್ನೇ ಮಾಡುತ್ತಾನೆ. ನಿನ್ನನ್ನು ಬಲಿಗೊಡುವೆನೆಂದು ನೀನು ಹುಟ್ಟುವುದಕ್ಕೆ ಮೊದಲೇ ವರುಣನಿಗೆ ಮಾತು ಕೊಟ್ಟವನು ನಿನ್ನ ತಂದೆ. ಅಂಥವನ ಬಳಿಗೆಹೋದರೆ ಮುಗಿದೇಹೋಗುತ್ತೆ ನಿನ್ನಕಥೆ." ಎಂದು ಹೇಳಿ ಅವನ ಮನಸ್ಸನ್ನು ಹಿಂದಿರುಗಿಸಿದನು.

ಆದರೂ ಲೋಹಿತಾಕ್ಷನಿಗೆ ಮತ್ತೊಂದುಸಾರಿ ತಂದೆಯನ್ನು ನೋಡುವುದೇ ನ್ಯಾಯವೆಂದು ತೋರಿತು. ಆಗಲೂ ಇಂದ್ರನು ಬಂದು ಅವನನ್ನು ತಪ್ಪಗಿಡಿಸಿದನು. ಹೀಗೆ ಅನೇಕಸಾರಿ ನಡೆಯಿತು.

ಒಂದು ದಿನ ವ್ಯಾಧಿ ಪೀಡಿತನಾದ ಹರಿಶ್ಚಂದ್ರನು ತನ್ನ ಕುಲಗುರುವಾದ ವಸಿಷ್ಠನೊಂದಿಗೆ, "ನೀವಾದರೂ ನನ್ನನ್ನು ಈ ಜಲೋದರ ವ್ಯಾಧಿಯಿಂದ ಕಾಪಾಡಬಾರದೆ ?" ಎಂದು ಕೇಳಿದನು.

ಅದನ್ನು ಕೇಳಿ ವಸಿಷ್ಠನು. "ರಾಜನೇ ಇದಕ್ಕೆ ಒಂದೇ ಒಂದು ಉಪಾಯ ಮಾತ್ರವಿದೆ. ಮಗಂದಿರಲ್ಲಿ ಹದಿಮೂರು ಬಗೆಯವರು ಇದ್ದಾರೆ. ಅವುಗಳಲ್ಲಿ ಕ್ರೀತಪುತ್ರನೆಂದರೆ, ಹಣಕೊಟ್ಟು ತೆಗೆದುಕೊಳ್ಳುವ ಮಗ. ಆದುದರಿಂದ ನೀನು ಯಾವನಾದರೊಬ್ಬ ಹುಡುಗನನ್ನು ಹಣಕೊಟ್ಟು ಕೊಂಡುಕೊಂಡು, ಅವನನ್ನು ಬಲಿ ಪಶುವಾಗಿಟ್ಟು ಯಜ್ಞ ಮಾಡಿಬಿಡು. ವರುಣನಿಗೆ ಪ್ರೀತಿಯಾಗುತ್ತದೆ. ಈ ವ್ಯಾಧಿ ನಿನ್ನನ್ನು ಬಿಟ್ಟು ಹೋಗುತ್ತದೆ. ಸ್ವಂತ ಮಗನು ಓಡಿಹೋದುದರಿಂದ, ಇಂತಹ ಮಗನಿಂದ ನೀನು ಶಾಪ ಮುಕ್ತನಾಗಬಹುದು" ಎಂದನು.

ವಸಿಷ್ಠನ ಮಾತಿನ ಪ್ರಕಾರ ಹರಿಶ್ಚಂದ್ರನು ತನ್ನ ಮಂತ್ರಿಗಳನ್ನು ಕರೆದು, "ಯಾವನಾದರೂ ಬ್ರಾಹ್ಮಣನು ತನ್ನ ಮಗನನ್ನು ಮಾರುವಹಾಗಿದ್ದರೆ, ಅವನು ಕೇಳುವಷ್ಟು ಧನವನ್ನು ಕೊಟ್ಟು ತೃಪ್ತಿಬಡಿಸಿ ಬಲಿಯ ಬಾಲನನ್ನು ತೆಗೆದುಕೊಂಡು ಬನ್ನಿ" ಎಂದು ಅಪ್ಪಣೆ ಕೊಟ್ಟನು.



ಅವರು ಊರೂರು ತಿರುಗುತ್ತ ಅನೇಕ ಗ್ರಾಮಗಳಲ್ಲಿ ಗಾಳಿಸುತ್ತ ಕಟ್ಟಕಡೆಗೆ ಅಜೀಗರ್ತನೆಂಬ ತುಂಬ ದರಿದ್ರನಾದ ಬ್ರಾಹ್ಮಣನನ್ನು ಮಾತಾಡಿಸಿ, ಸಂಗತಿಯನ್ನು ತಿಳಿಸಿದರು. ಅಜೀಗರ್ತನು ತನ್ನ ಕುಮಾರರಲ್ಲಿ ನಡುವಿನವನಾದ ಶುನಶ್ಶೇಪ ಎಂಬ ಹುಡುಗನನ್ನು ಮಾರಲು ಸಿದ್ಧನಾದನು. ಮಂತ್ರಿಗಳು ಅವನು ಕೇಳಿದಷ್ಟು ಹಣವನ್ನು ಕೊಟ್ಟು, ಶುನಶ್ಶೇಪನನ್ನು ಕೊಂಡುಕೊಂಡು ಕರೆದುಕೊಂಡು ಹೋದರು.

ನರಬಲಿಗೆ ತಕ್ಕ ಬಾಲಕನು ಸಿಕ್ಕಿದನೆಂಬ ಸಂತೋಷದಲ್ಲಿ ಹರಿಶ್ಚಂದ್ರನು ಯಜ್ಞಸನ್ನಾಹಗಳನ್ನು ಮಾಡಲು ತೊಡಗಿದನು. ಋತ್ವಿಕ್ಕುಗಳು ಬಂದು ವಿಧಿಪ್ರಕಾರ ಯಜ್ಞವನ್ನು ಪ್ರಾರಂಭಿಸಿದರು. ಶುನಶ್ಶೇಪನನ್ನು ಯಾಗಪಶುವಿನಹಾಗೆ ಯೂಪಸ್ತಂಭಕ್ಕೆ ಕಟ್ಟಿದರು. ಅವನು ಬಾಯಿಬಿಟ್ಟು ಕಲ್ಲುಕರಗುವಂತೆ ಅಳುತ್ತಿದ್ದನು. ಅದನ್ನು ನೋಡಿ ಅಲ್ಲಿಗೆ ಬಂದಿದ್ದ ವಿಶ್ವಾಮಿತ್ರನಿಗೆ



ಮನಸ್ಸು ಕರಗಿತು. ವಿಶ್ವಾಮಿತ್ರನು ಹರಿಶ್ಚಂದ್ರನೊಂದಿಗೆ ಹೀಗೆಂದನು :

"ರಾಜನೇ ! ಈ ಬ್ರಾಹ್ಮಣ ಬಾಲಕನನ್ನು ಏತಕ್ಕಾಗಿ ಕೊಲ್ಲುವಿ? ಬಿಟ್ಟುಬಿಡು ಹೋಗಲಿ. ಅವನು ಅಳುವುದನ್ನು ಕೇಳುವಾಗ ನನಗೆ ಸಹಿಸಲಾಗುವುದಿಲ್ಲ. ಪೂರ್ವದಲ್ಲಿ ನಿನ್ನ ವಂಶದ ರಾಜರು ಇತರರಿಗಾಗಿ ತಮ್ಮ ಪ್ರಾಣಗಳನ್ನೇ ಧಾರೆಯೆರೆದಿದ್ದಾರೆ. ನಿನ್ನ ರೋಗವನ್ನು ವಾಸಿಗೊಳಿಸಿಕೊಳ್ಳುವುದಕ್ಕಾಗಿ ಇಂತಹ ಹೀನ ಕೆಲಸ ಮಾಡಿಕೊಳ್ಳುವುದುಂಟೇ? ನಿನ್ನ ರೋಗ ಬಾಧೆಯನ್ನು ನಾನೇ ನಿವಾರಿಸಿ ಬಿಡುತ್ತೇನೆ. ಈ ಹುಡುಗನನ್ನು ಬಿಟ್ಟುಬಿಡು. ಎಲ್ಲರಿಗೂ ಅವರವರ ಜೀವ ಸವಿಯಾದುದೇ. ನೀನು ಎಂತಹ ಪಾಪಿಷ್ಠ ಬುದ್ಧಿಯವನೋ ! ನಿನಗೆ ಗುಂಡಿಗೆಯಿಲ್ಲ."

ಈ ವಿಧವಾಗಿ ವಿಶ್ವಾಮಿತ್ರನು ಎಷ್ಟು ಹೇಳಿದರೂ ಹರಿಶ್ಚಂದ್ರನು ಶುನಶ್ಶೇಪನನ್ನು ಬಿಡುಗಡೆಮಾಡಲು ಒಪ್ಪಲಿಲ್ಲ. ಆಗ ವಿಶ್ವಾಮಿತ್ರನು ಶುನಶ್ಶೇಪನ ಬಳಿಗೆ ಹೋಗಿ ಸಮಾಧಾನ ಪಡಿಸಿ, ವರುಣದೇವನಿಗೆ ಇಷ್ಟವಾದ ಒಂದು ಮಂತ್ರವನ್ನು ಉಪದೇಶಿಸಿ ಅದನ್ನು ಜಪಿಸಿಕೊಂಡಿರುವಂತೆ ಹೇಳಿದನು. ಆದರಿಂದ ಪ್ರೀತನಾದ ವರುಣನು ಶುನಶ್ಶೇಪನನ್ನು ಬಲಿ ತೆಗೆದು ಕೊಳ್ಳಲಾರನೆಂದು ನಂಬುಗೆ ಕೊಟ್ಟನು.

ಶುನಶ್ಶೇಪನು ಆ ಮಂತ್ರವನ್ನು ಜಪಿಸಿಕೊಳ್ಳಲು ತೊಡಗಿದನು. ಆದರಿಂದ ವರುಣದೇವನಿಗೆ ಪರಮ ಸಂತೋಷವಾಯಿತು. ಅವನು ಬೇಗದಲ್ಲೇ ಒಂದು ರಾಜನನ್ನು ರೋಗಮುಕ್ತ ಮಾಡಿ ಹುಡುಗ ಲೋಹಿತಾಕ್ಷನನ್ನು ಬಿಡುಗಡೆ ಮಾಡಿ ಹೊರಟುಹೋದನು.

ಈ ವಿಧವಾಗಿ ಶುನಶ್ಶೇಪನು ಬದುಕಿ ಉಳಿಯಲು ವಿಶ್ವಾಮಿತ್ರನು ಸಹಾಯ ಮಾಡಿದನು. ಆದರೆ ರಾಜರ್ಷಿಯಾದ ವಿಶ್ವಾಮಿತ್ರನು ಹರಿಶ್ಚಂದ್ರನು ತನ್ನ ಮಾತು ಕೇಳಲಿಲ್ಲವೆಂಬ ಹಗೆಯ ನೆನಪನ್ನು ಬಿಡಲಾರದೆ ಮನಸ್ಸಿನೊಳಗೇ ಹುದುಗಿಸಿಕೊಂಡಿದ್ದನು.

ಹೀಗಿರುವಾಗ ಅದಕ್ಕೂ ಒಂದು ಕಾಲ ಬೇಗದಲ್ಲೇ ಬಂತು. ಒಂದು ದಿನ ಹರಿಶ್ಚಂದ್ರನು ಕೌಶಿಕೀ ನದಿಯ ತೀರದಲ್ಲಿ ಬೇಟೆಯಾಡುತ್ತಿದ್ದನು. ಅಲ್ಲಿ ಕಣ್ಣಿಗೆ ಬಿದ್ದ ಒಂದು ದೊಡ್ಡ ಕಾಡು ಹಂದಿಯನ್ನು ಓಡಿಸಿಕೊಂಡು ಹೋಗುತ್ತಿದ್ದಂತೆ ಮಧ್ಯಾಹ್ನದ ಹೊತ್ತುಬಂತು. ವಿಶ್ವಾಮಿತ್ರನು ಒಬ್ಬ ಮುದಿಬ್ರಾಹ್ಮಣನ ರೂಪದಲ್ಲಿ ಹರಿಶ್ಚಂದ್ರನಿಗೆ ಮೋಸಮಾಡಿದನು. ಹರಿಶ್ಚಂದ್ರನ ರಾಜ್ಯಮೊದಲಾದ ಸರ್ವಸ್ವವೂ ವಿಶ್ವಾಮಿತ್ರನ ವಶವಾದುವು.

ತರುವಾಯ ಆಕಸ್ಮಿಕವಾಗಿ ಒಂದು ಕಡೆಯಲ್ಲಿ ವಸಿಷ್ಠನು ವಿಶ್ವಾಮಿತ್ರನನ್ನು ನೋಡಿ, "ವಿಶ್ವಾಮಿತ್ರಾ ! ನೀನು ಬಹಳ ಹೀನವಾದ ಮನಸ್ಸಿನವನು. ನೀತಿಯ ಭಯವೇ ನಿನಗಿಲ್ಲ. ನನ್ನ ಯಜಮಾನನಾದ ಹರಿಶ್ಚಂದ್ರನನ್ನು ನಿಷ್ಕಾರಣವಾಗಿ ಮೋಸಪಡಿಸಿ ಕಾಡಿನಪಾಲು ಮಾಡಿದಿಯಲ್ಲ! ನೀನು ತಾಪಸರೊಳಗೇ ಅಧಮ ತಾಪಸಿ. ನಿನ್ನ ತಪಸ್ಸು

ಕೇವಲ ಬಕಧ್ಯಾನವೆ ! ನೀನು ಕೊಕ್ಕರೆಯಾಗಿ ಹೋಗು !" ಎಂದು ಶಾಪಕೊಟ್ಟನು.

"ಸರಿ. ನಾನೆಷ್ಟು ಕಾಲ ಕೊಕ್ಕರೆಯಾಗಿರುವೆನೋ ನೀನೂ ಅಷ್ಟುಕಾಲ ಕೊಕ್ಕರೆಯಾಗಿರು !" ಎಂದು ವಿಶ್ವಾಮಿತ್ರನು ವಸಿಷ್ಠನಿಗೆ ಪ್ರತಿ ಶಾಪ ಕೊಟ್ಟುಬಿಟ್ಟನು.

ಅಂದಿನಿಂದ ವಸಿಷ್ಠ ವಿಶ್ವಾಮಿತ್ರರಿಬ್ಬರೂ ಪಕ್ಷಿ ರೂಪವನ್ನು ಧರಿಸಿ, ಹಿಮಾಲಯದ ಮಾನಸತೀರ್ಥದ ಸಮೀಪವಿರುವ ಮರಗಳ ಮೇಲೆ ವಾಸ ಮಾಡುತ್ತ, ದಿನಾ ತಮ್ಮೊಳಗೆ ಹೊಡೆದಾಡಿಕೊಳ್ಳುತ್ತ, ಪರಸ್ಪರರ ನೆತ್ತರನ್ನು ನೋಡಿ ಸಂತೋಷಪಡುತ್ತಲಿದ್ದರು. ಎಂತಹ ಮಹರ್ಷಿಗಳಿಗಾದರೂ ಅಹಂಕಾರವು ಅಳಿಯಲಾರದೆಂಬುದು ಅದಕ್ಕೇ !

ಹೀಗೆ ಮಹರ್ಷಿಗಳಿಬ್ಬರು ಪರಸ್ಪರ ಹಿಂಸೆ ಮಾಡಿಕೊಂಡಿರುವುದನ್ನು ನೋಡಿ ಬ್ರಹ್ಮನಿಗೆ ಸಹಿಸಲಾಗಲಿಲ್ಲ. ಆವನು ಬಂದು ಅವರಿಬ್ಬರ ಶಾಪಗಳನ್ನೂ ತೀರಿಸಿ ಸಮಾಧಾನ ಪಡಿಸಿ ಕಳುಹಿಸಿಕೊಟ್ಟನು.

ಆದರೂ ವಸಿಷ್ಠನು ಕೋಪಬಿಡದೆ ನಿಮಿಯನ್ನು ಶಪಿಸಿ ಅವನಿಂದ ಬೇರೆ ಪ್ರತಿಶಾಪಹೊಂದಿದನು. ಅದುಹೇಗೆ ನಡೆಯಿತೆಂದರೆ,

ಇಕ್ಷ್ವಾಕು ರಾಜನ ಮಗನಾದವನು ನಿಮಿ. ಅವನು ತುಂಬಾ ಧರ್ಮಾತ್ಮನು. ಒಳ್ಳೆಯ ವರ್ತನೆಯುಳ್ಳವನು. ಅವನು ಬ್ರಾಹ್ಮಣರ ಸೌಕರ್ಯಕ್ಕಾಗಿ ಗೌತಮಾಶ್ರಮದ ಸಮೀಪದಲ್ಲಿ ಸುಭಿಕ್ಷವಾದ ಜಯಂತಪುರವೆಂಬ ಊರನ್ನು ನಿರ್ಮಿಸಿಕೊಟ್ಟನು.

ಅದುನಡೆದು ಸ್ವಲ್ಪ ಕಾಲವಾದ ಮೇಲೆ ನಿಮಿಗೆ ದೀರ್ಘಕಾಲದವರೆಗೆ ನಡೆಯುತಕ್ಕ ಒಂದು ಯಾಗವನ್ನು ಮಾಡಬೇಕೆಂದು ಇಚ್ಛೆಯುಂಟಾಯಿತು. ಅದಕ್ಕಾಗಿ ಅವನು ತನ್ನ ತಂದೆಯ ಅನುಮತಿಯನ್ನು ಪಡೆದು, ಮಹಾಮುನಿಗಳು ಹೇಳಿದ ಪ್ರಕಾರ ಅದಕ್ಕೆ ಬೇಕಾದ ಸಾಧನ ಸಾಮಗ್ರಿಗಳನ್ನು ಸೇರಿಸ ತೊಡಗಿದನು. ಭೃಗು, ಅಂಗಿರಸ, ಗೌತಮ, ಪುಲಸ್ತ್ಯ, ಋಚೀಕ, ಪುಲಹರಂತಹ ಮಹಾಮುನಿಗಳನ್ನು ಆಹ್ವಾನಿಸಿದನು. ತಮ್ಮ ಕುಲಗುರುವಾದ ವಸಿಷ್ಠನೊಂದಿಗೆ, "ಅಯ್ಯಾ, ನಾನು ಮಹಾದೇವಿಯನ್ನು ಕುರಿತು ಐದು ಸಾವಿರ ವರ್ಷಗಳವರೆಗೆ ನಡೆಯುವ ಯಜ್ಞಮಾಡಲು ಸಂಕಲ್ಪಿಸಿ ಎಲ್ಲಾ ಏರ್ಪಾಡು ಮಾಡಿದ್ದೇನೆ. ನೀವು ನನ್ನಿಂದ ಆ ಯಜ್ಞ ಮಾಡಿಸಬೇಕು" ಎಂದು ಕೇಳಿಕೊಂಡನು.



ಅದಕ್ಕೆ ವಸಿಷ್ಠನು, "ಇಂದ್ರನು ಕೂಡಾ ನನ್ನಿಂದ ಜಗದಂಬೆಯನ್ನು ಉದ್ದೇಶಿಸಿ ಯಜ್ಞ ಮಾಡಿಸಲು ಕರೆದಿದ್ದಾನೆ. ಅದು ಐನೂರು ವರ್ಷಗಳಲ್ಲಿ ಪೂರ್ಣವಾಗುತ್ತದೆ. ಅದನ್ನು ಮುಗಿಸಿ ಬಂದು ನಿನ್ನಿಂದ ಯಜ್ಞ ಮಾಡಿಸುತ್ತೇನೆ. ಅಷ್ಟರವರೆಗೆ ತಾಳಿಕೊಂಡಿರು" ಎಂದು ನಿಮಿಯೊಂದಿಗೆ ಹೇಳಿದನು.

ಎಲ್ಲರಿಗೂ ಆಹ್ವಾನ ಕಳುಹಿಸಿದ್ದಾಯಿತು. "ಋಷಿ ಮುನಿಗಳೆಲ್ಲರೂ ಬಂದು ಸೇರುತ್ತಿದ್ದಾರೆ. ನಮ್ಮ



ಸೂರ್ಯ ವಂಶಕ್ಕೆ ಪುರೋಹಿತರಾಗಿರುವ ನೀವೇ ಹೀಗೆ ಹೇಳುವುದು ನ್ಯಾಯವೇ? ಇಂದ್ರನಿಂದ ಬರುವ ಧನಲೋಭದಿಂದಲೇ ಹೀಗೆ ಮೋಸ ಮಾಡುವಿರಿ ಹೌದಾ? " ಎಂದನು ನಿಮಿ.

ಆದರೂ ವಸಿಷ್ಠನು ಲಕ್ಷ್ಯಮಾಡಲಿಲ್ಲ. ಇಂದ್ರನಿಂದ ಯಜ್ಞಮಾಡಿಸಲು ಹೊರಟೇ ಹೋದನು. ಆಗ ನಿಮಿ ಗೌತಮನನ್ನು ಮುಖ್ಯ ಪುರೋಹಿತನನ್ನಾಗಿಟ್ಟು ಕೊಂಡು ಅಂಬಾದೇವಿಯನ್ನು ಕುರಿತು ಜಯಪ್ರದ ವಾಗಿ ಯಜ್ಞವನ್ನು ಮಾಡುತ್ತ, ಎಲ್ಲರಿಗೂ ದಾನ ಧರ್ಮ ದಕ್ಷಿಣೆಗಳನ್ನು ಕೊಡುತ್ತಿದ್ದನು.

ಅಷ್ಟರೊಳಗೆ ವಸಿಷ್ಠನು ಇಂದ್ರನಿಂದ ಯಜ್ಞ ಮಾಡಿಸಿ ಮುಗಿಸಿ, ಪುಷ್ಕಲವಾಗಿ ಸಿಕ್ಕಿದ ದಕ್ಷಿಣೆ ಯನ್ನು ತೆಗೆದುಕೊಂಡು ಯಜ್ಞ ದೀಕ್ಷೆಯಲ್ಲಿರುವ ನಿಮಿಯನ್ನು ನೋಡಲು ಬಂದನು. ಆ ಸಮಯದಲ್ಲಿ ನಿಮಿ ವಿರಾಮ ವೇಳೆಯ ವಿಶ್ರಾಂತಿಯಲ್ಲಿ ನಿದ್ರಿಸಿ ಕೊಂಡಿದ್ದನು. ವಸಿಷ್ಠನಿಗೆ ನಿಮಿಯ ದರ್ಶನ ಸಿಗಲಿಲ್ಲ.

ವಸಿಷ್ಠನಿಗೆ ಬಹಳ ಕೋಪ ಬಂತು. ಕುಲಗುರುವೂ ಕುಲ ಪುರೋಹಿತನೂ ಆದ ತನ್ನನ್ನು ಅಲಕ್ಷ್ಯಪಡಿಸಿ, ತನ್ನ ಪದವಿಯನ್ನು ಇನ್ನೊಬ್ಬರಿಗೆ ನಿರ್ಭಯವಾಗಿ ಕೊಟ್ಟು ಯಜ್ಞಮಾಡಿಸುವುದು ಮಾತ್ರವಲ್ಲದೆ, ತಾನು ನೋಡಲು ಬಂದೆನೆಂದು ತಿಳಿದರೂ ನಿದ್ದೆಯ ನೆಪ ಹಿಡಿದು ನೋಡಲಾಗುವುದಿಲ್ಲವೆಂದು ಅವ ಮಾನಿಸುವನೆ? ಎಂದುಕೊಂಡು " ನಿಮಿಯ ದೇಹವು ನೆಲಕ್ಕೆ ಬೀಳಲಿ! ನಿಮಿ ವಿದೇಹನಾಗಿ ಹೋಗಲಿ! " ಎಂದು ಶಪಿಸಿಬಿಟ್ಟನು!

ವಸಿಷ್ಠನು ನಾಲ್ಕುಮಂದಿಗೆ ಕೇಳುವಂತೆ ಹೇಳಿದ ಶಾಪ ವಾಕ್ಯವನ್ನು ಕೇಳಿ, ಸೇವಕರು ಓಡಿ ಹೋಗಿ ನಿಮಿಯನ್ನು ಎಬ್ಬಿಸಿ ವಸಿಷ್ಠನ ಶಾಪವನ್ನು ಕುರಿತು ಹೇಳಿದರು. ನಿಮಿ ಎದ್ದು ಬಂದು ವಸಿಷ್ಠನನ್ನು ನೋಡಿ, " ವಸಿಷ್ಠರೇ! ನೀವು ಬ್ರಹ್ಮದೇವನಿಗೆ ಸಮೀಪ ಬಂಧುಗಳಾಗಿದ್ದು, ಪಾಪ ಭೀತಿ ಸ್ವಲ್ಪವೂ ಇಲ್ಲದೆ ನನ್ನನ್ನು ಶಪಿಸಿದಿರಾ ? ಧನ ಲೋಭದಿಂದ ನಿಮ್ಮ ನಂಬುಗೆಯ ಶಿಷ್ಯನಾದ ನನ್ನನ್ನು ಬಿಟ್ಟು ಹೊರಟುಹೋದವರು ನೀವು. ಧನವು ನಿಮಗೆ ನಾಚಿಗೆಯಿಲ್ಲದಂತೆ ಮಾಡಿತು. ನೀವು ಮಾಡಿದ ತಪ್ಪನ್ನು ನನ್ನ ತಲೆಗೆ ಕಟ್ಟಿ, ನನ್ನನ್ನು ಶಪಿಸಿದಿರಾ! ಇಷ್ಟೊಂದು ಕ್ರೋಧಮೂರ್ತಿಗಳಾದ ನಿಮ್ಮ ಶರೀರಕ್ಕೆ ನನ್ನ ಶರೀರಕ್ಕಾಗುವ ಗತಿಯೇ ಬರಲಿ! " ಎಂದು ಪ್ರತಿಶಾಪವಿತ್ತನು.

ವಸಿಷ್ಠನು ಬ್ರಹ್ಮನ ಬಳಿಗೆ ಹೋಗಿ, " ನಿಮಿ ಎಂಬ ರಾಜನು ನನ್ನ ಶರೀರವು ಬಿದ್ದು ಹೋಗುವಂತೆ ಶಪಿಸಿಬಿಟ್ಟನು. ನನ್ನ ಜ್ಞಾನವು ಬೇರೊಂದು ದೇಹ ದಲ್ಲಿ ನಿಂತಿರುವಂತಹ ದಾರಿಯನ್ನು ನೀನೇ ತೋರಿಸ ಬೇಕು " ಎಂದು ಬೇಡಿಕೊಂಡನು.

ಆದಕ್ಕೆ ಬ್ರಹ್ಮನು, " ಸರಿ, ನೀನು ಮಿತ್ರಾವರುಣ ದೇಹಾಂಶದವನಾಗಿ ಜ್ಞಾನವನ್ನು ದಕ್ಕಿಸಿಕೊಂಡಿರು " ಎಂದು ಅನುಗ್ರಹಿಸಿ ಕಳುಹಿಸಿದನು.

ವಸಿಷ್ಠನು ಬ್ರಹ್ಮನಿಗೆ ನಮಸ್ಕಾರಮಾಡಿ, ಅಲ್ಲಿಂದ ನೆಟ್ಟಗೆ ವರುಣ ಲೋಕಕ್ಕೆ ಹೋಗಿ, ತನ್ನ ಶರೀರವನ್ನು ಅಲ್ಲಿ ಬಿಟ್ಟುಕೊಟ್ಟು, ತನ್ನ ಪ್ರಾಣವನ್ನು ಮಿತ್ರಾವರುಣರೊಳಗೆ ಪ್ರವೇಶಗೊಳಿಸಿಕೊಂಡನು.

ಸ್ವಲ್ಪಕಾಲ ಕಳೆದ ಮೇಲೆ ಮಿತ್ರಾವರುಣರಿರುವಲ್ಲಿಗೆ ಊರ್ವಶಿ ಬಂದಳು. ಅವಳ ಸೌಂದರ್ಯವನ್ನು ನೋಡಿ ಮಿತ್ರಾವರುಣರು ಮೋಹವಶರಾಗಿ ಅವಳೊಂದಿಗೆ ಸ್ವಲ್ಪಕಾಲ ಸಂಸಾರ ನಡೆಯಿಸಿದರು. ಅದರ ಫಲವಾಗಿ ಊರ್ವಶಿ ಅಗಸ್ತ್ಯನನ್ನೂ, ವಸಿಷ್ಠನನ್ನೂ ಹಡೆದಳು. ಅಗಸ್ತ್ಯನು ಹುಟ್ಟಿದ ಕೂಡಲೇ ತಪಸ್ಸಿಗೆ ಹೊರಟುಹೋದನು. ವಸಿಷ್ಠನನ್ನು ಇಕ್ಷ್ವಾಕು ರಾಜನು ತನ್ನ ಗುರುವನ್ನಾಗಿ ಸ್ವೀಕರಿಸಿಕೊಂಡನು. ಹೀಗೆ ವಸಿಷ್ಠನ ಪುನರವತಾರವಾಯಿತು.

ಅತ್ತ ನಿಮಿ ಕೂಡಾ ಅಕಾಲ ಮರಣಕ್ಕೆ ತುತ್ತಾಗುವ ಸ್ಥಿತಿಯಲ್ಲಿಯೂ ಯಜ್ಞ ಕಾರ್ಯವನ್ನು ಹೇಗೋ ಮುಗಿಸಿದನು. ಯಜ್ಞಭೋಕ್ತರು ಅವನ ಬಳಿಗೆ ಬಂದು, "ರಾಜಾ, ನಿನ್ನ ಯಜ್ಞವು ನಮಗೆಲ್ಲಾ ಪೂರ್ತಿ ತೃಪ್ತಿಯನ್ನುಂಟುಮಾಡಿತು. ನಿನ್ನ ಇಚ್ಛೆ ಏನಾದರೂ ಇದ್ದರೆ ಹೇಳು. ತೀರಿಸುತ್ತೇವೆ. ಮುಖ್ಯವಾಗಿ ನಿನಗೆ ನರದೇಹ ಬೇಕೆ ? ಸುರ ದೇಹ ಬೇಕೇ? " ಎಂದು ಕೇಳಿದರು. "ಮಹಾತ್ಮರೇ, ಶರೀರವಿರುವಷ್ಟು ಕಾಲವೂ ಅದಕ್ಕೆ ಅಪಾಯವಿದ್ದೇ ಇರುತ್ತೆ. ನನಗೆ ಯಾವ ಶರೀರವೂ ಬೇಡ. ವಾಯು ರೂಪವನ್ನು ಅನುಗ್ರಹಿಸಿಕೊಡಿರಿ" ಎಂದನು ನಿಮಿ.

"ರಾಜಾ. ಅದು ನಮ್ಮ ಶಕ್ತಿಗೆ ಮೀರಿದೆ. ಅದಕ್ಕೊಂದು ದಾರಿ ಮಾತ್ರ ತೋರಿಸುತ್ತೇವೆ. ನೀನು ಜಗದಂಬೆಯನ್ನು ಪ್ರಾರ್ಥಿಸಿ ನಿನ್ನ ಇಚ್ಛೆಯನ್ನು ಕೇಳಿಕೋ. ಆ ಮಹಾ ತಾಯಿ ತೀರಿಸುತ್ತಾಳೆ" ಎಂದು ಮುನಿಗಳೂ ದೇವತೆಗಳೂ ನಿಮಿಗೆ ಹೇಳಿದರು.

ಅದರಂತೆ ನಿಮಿ ಜಗದಂಬೆಯನ್ನು ಪ್ರಾರ್ಥಿಸಲು ಈ ಮೊದಲೇ ಅವನ ಯಜ್ಞದಿಂದ ತೃಪ್ತಳಾದ ದೇವಿ ಪ್ರತ್ಯಕ್ಷಳಾಗಿ, "ನಿಮೀ! ನಿನ್ನ ಇಚ್ಛೆ ಕೈಗೂಡಿ ಶಾಶ್ವತವಾಗುವಿ. ನೀನು ಪ್ರಪಂಚದ ಸಮಸ್ತ ಭೂತಗಳ ಕಣ್ಣಿನಲ್ಲಿ ವಾಸವಾಗಿರುವಂತೆ ಮಾಡುತ್ತೇನೆ. ನಿನ್ನ ಮೂಲಕವಾಗಿ ಪ್ರಾಣಿಗಳಿಗೆ 'ನಿಮಿಷ' ವೆಂದು ಕಾಲಗಣನೆಯುಂಟಾಗಲಿ." ಎಂದು ಹೇಳಿದಳು.

ತರುವಾಯ ನಿಮಿ ದೇಹ ಬಿಟ್ಟು ವಿದೇಹನಾಗಿ ನಿಮಿಷ ಕಾರಣನಾದನು. ಮುನಿಗಳು ನಿಮಿಯ ದೇಹವನ್ನು ಮಥಿಸಿ ಜನಕನೆಂಬವನನ್ನು ಹುಟ್ಟಿಸಿದರು. ವಿದೇಹನಾದ ನಿಮಿಯ ಮಗನಾದುದರಿಂದ ಅವನು ವಿದೇಹನೆಂಬ ಹೆಸರಿಗೂ ಪಾತ್ರನಾದನು. ಅವನ ರಾಜಧಾನಿಯ ಹೆಸರು ಮಿಥಿಲೆ. ಗಂಗಾ ತೀರದಲ್ಲಿ ಈ ರಾಜ್ಯವಿದೆ. ಆ ರಾಜ್ಯದ ಹೆಸರೂ ವಿದೇಹವೆಂದಾಯಿತು.





# ದೇವೀಭಾಗವತ

ಹೈಹಯ ವಂಶದಲ್ಲಿ ಹುಟ್ಟಿದವರಲ್ಲಿ ಕಾರ್ತವೀರ್ಯ ಮಹಾರಾಜನು ತುಂಬಾ ಪ್ರಖ್ಯಾತನಾದವನು. ಅವನ ಶೌರ್ಯ ಪರಾಕ್ರಮಗಳಿಗೆ ಸಾಟಿಯಿರಲಿಲ್ಲ. ಅವನಿಗೆ ಸಾವಿರ ಕೈಗಳಿದ್ದುವು. ಅವನು ಮಾಡಿದ ಯಜ್ಞ ಯಾಗಗಳಿಗೆ ಲೆಕ್ಕವಿರಲಿಲ್ಲ. ಕೈಗಳಿಗೆ ಎಲುವೇ ಇಲ್ಲದವನಂತೆ ದಾನಗಳನ್ನೂ ದಕ್ಷಿಣೆಗಳನ್ನೂ ಕೊಡುತ್ತಿದ್ದನು. ದತ್ತಾತ್ರೇಯನ ಶಿಷ್ಯನಾಗಿ ವಿದ್ಯೆಗಳನ್ನು ಕಲಿತವನು. ಅವನ ಪುರೋಹಿತರಾಗಿರುವವರು ಭೃಗುಗಳು. ಆದುದರಿಂದ ಕಾರ್ತವೀರ್ಯನ ಯಜ್ಞ ಯಾಗಗಳಲ್ಲಿ ತುಂಬಾ ದಕ್ಷಿಣೆಗಳನ್ನು ತೆಗೆದುಕೊಳ್ಳುತ್ತಿದ್ದ ಭೃಗುಗಳು ಅಪಾರ ಧನವಂತರಾದರು.

ಕಾರ್ತವೀರ್ಯನು ಸತ್ತು ಹೋದ ಮೇಲೆ ಆತನ ಸಂತತಿಯವರಾದ ಹೈಹಯರು ದಟ್ಟದರಿದ್ರರಾಗಿ ಹೋದರು. ಅವರು ತಮ್ಮ ಪುರೋಹಿತರಾದ ಭೃಗುಗಳನ್ನೇ ಯಾಚಿಸಲು ಕೈ ನೀಡ ಬೇಕಾಯಿತು. ಹೈಹಯರಿಗೆ ತಮ್ಮ ಧನವನ್ನು ಕೊಡಲು ಭೃಗುಗಳಿಗೆ ಇಷ್ಟವಿಲ್ಲದೆ ಧನವನ್ನೆಲ್ಲ ಅಲ್ಲಿ ಇಲ್ಲಿ ಹುಗಿದಿಟ್ಟು, ಹೈಹಯರಾಜರ ಭಯದಿಂದ ಬೆಟ್ಟದ ಗುಹೆಗಳ ಕಡೆಗೆ ಓಡಿ ಹೋಗಿ ಅಡಗಿಕೊಂಡರು.

ಹೈಹಯರು ಬಂದು ಹುಡುಕುವಾಗ ಭೃಗು ಬ್ರಾಹ್ಮಣರ ಮನೆಗಳೆಲ್ಲಾ ಖಾಲಿ! ಅವರು ಮನೆಗಳನ್ನು ಅಗೆದು ನೋಡಲು, ಹುಗಿದಿಟ್ಟ ಧನವು ಹೊರ ಬಿದ್ದಿತು. ಅದನ್ನು ನೋಡಿ ಹೈಹಯರಿಗೆ ಭೃಗುಗಳ ಮೇಲೆ ಕೆಟ್ಟ ಕೋಪವು ಬಂದಿತು. ಬೆಟ್ಟದ ಗುಹೆಗಳಲ್ಲಿ ಅಡಗಿದವರನ್ನೆಲ್ಲಾ ಹುಡುಕಿ ಹಿಡಿದು ಕೊಂದರು. ಗರ್ಭಿಣಿಯರಾಗಿದ್ದವರನ್ನೂ ತಿವಿದು ಗರ್ಭ ನಾಶಮಾಡಿದರು.

ಇಂತಹ ದಾರುಣವಾದ ಹಿಂಸಾಕಾಂಡವನ್ನು ನೋಡಲಾಗದೆ, ಆ ಪ್ರಾಂತದಲ್ಲಿದ್ದ ಇತರ ಮುನಿಗಳು ಹೈಹಯರನ್ನು ನೋಡಿ, "ಇಷ್ಟೊಂದು ದುಷ್ಟತನವು ಒಳ್ಳೆಯದಲ್ಲ. ಬ್ರಾಹ್ಮಣ ಜಾತಿಯನ್ನೇ ಹೀಗೆ ನಿರ್ಮೂಲ ಮಾಡಬಹುದೇ ? ಹೆಂಗುಸರ ಗರ್ಭವನ್ನು ಕೂಡ ಭೇದಿಸುವುದೆಂದರೇನಿದು ? ರಾಜರು ಮಾಡುವಂಥ ಕೆಲಸವೇ ? ಇಂತಹ ಘೋರ ಪಾಪ

೨೦. ಲಕ್ಷ್ಮೀದೇವಿಗೆ ಶಾಪ



ಗಳಿಗೆ ತಕ್ಕ ಪ್ರತಿಫಲವು ಇಲ್ಲದೆ ಹೋಗುವುದೆಂದು ಕೊಂಡಿರಾ ? " ಎಂದು ಹೀಯಾಳಿಸಿದರು.

ಆ ಮುನಿಗಳ ಮಾತು ಕೇಳಿ ಹೈಹಯರು, "ನೀವು ಹೇಳುವುದು ನಿಮ್ಮ ಮಟ್ಟಿಗೆ ನಿಜ. ಏಕೆಂದರೆ ನೀವೆಲ್ಲಾ ಮಹಾತ್ಮರು. ಆದರೆ ಈ ಭೃಗು ಬ್ರಾಹ್ಮಣರು ನಮ್ಮ ಪೂರ್ವಿಕರಿಂದ ಅಪಾರ ಧನವನ್ನು ಪಡೆದುಕೊಂಡು, ನಮಗೆ ಸಿಕ್ಕಬಾರದೆಂಬ ದುರದ್ದೇಶದಿಂದ ಅಡಗಿಸಿಟ್ಟ ಕಳ್ಳರು. ಕಳ್ಳರನ್ನು ಕೊಲ್ಲುವುದು ಪಾಪವೇನಲ್ಲ. ಇವರು ಸಾಲವಾಗಿ ಕೊಡಾ ಹಣ ಕೊಡುವವರಲ್ಲದ ಪಾಪಿಗಳು. ಕಾರ್ತವೀರ್ಯ ಮಹಾರಾಜರು ಇವರಿಗೆ ದಾನ ದಕ್ಷಿಣೆ ಕೊಟ್ಟದ್ದು ಹುಗಿದಿಡಲಿಕ್ಕಾಗಿಯೇನು ? ಇಂಥವರನ್ನು ನೀವಾದರೂ ಮೆಚ್ಚುವಿರಾ? ಹೇಳಿರಿ. ಯಜ್ಞ ಮಾಡಿ ಸಂಪಾದಿಸುವ ಹಣವನ್ನು ಬ್ರಾಹ್ಮಣನು ತಾನು ಅನುಭವಿಸಬೇಕು. ದರಿದ್ರರಿಗೆ ದಾನ ಮಾಡಬೇಕು. ಹಾಗಿಲ್ಲದೆ ಹೋದರೆ ಧನವು ರಾಜರಿಗೋ ಕಳ್ಳರಿಗೋ ಹೋಗುತ್ತದೆ, ತಪ್ಪಿದರೆ ಬೆಂಕಿಯ ಪಾಲಾಗುತ್ತದೆ. ಹಾಗೇನೂ ಆಗದಂತೆ ಅಡಗಿಸಿಟ್ಟವನು ತಾನೂ ಅನುಭವಿಸದೆ, ಇತರಿಗೂ ಕೊಡದೆ ಲೋಭಿಯೆನಿಸುತ್ತಾನೆ. ಅಂಥವನಿಗೆ ನರಕವೇ ಗತಿ. ನಾವು ನಮ್ಮ ಪುರೋಹಿತರ ಹತ್ತಿರ ಸಾಲ ಕೇಳಿದೆವು. ನಮ್ಮ ಒಳಿತಿಗಾಗಿ ಕೇಳಿದುದಕ್ಕೆ ಇಲ್ಲವೆಂದರು. ನಾವು ಒಳ್ಳೆಯ ಸ್ಥಿತಿಗೆ ಬಂದರೆ ಅವರಿಗೆ ತಾನೇ ಲಾಭ ? ಅವರಿಗೆ ಅಂತಹ ಜ್ಞಾನವೇ ಇಲ್ಲದೆ ಹೋಯಿತು. ಇಂತಹ ನೀಚರನ್ನು ದಂಡಿಸಬೇಕಾದುದು ರಾಜಧರ್ಮವಲ್ಲವೇ ? ಆದುದರಿಂದ ನಾವು ಮಾಡುವ ಈ ಕೆಲಸವನ್ನು ನೋಡಿ ನೀವು ಕ್ಷಮಿಸಬೇಕು." ಎಂದು ಆ ಮುನಿಗಳನ್ನು ಸಹಾ ತಮ್ಮ ಅಭಿಪ್ರಾಯಕ್ಕೆ ಒಪ್ಪಿಸಿ, ತಮ್ಮ ಭೃಗು ವಂಶ ಸಂಹಾರ ಕಾರ್ಯವನ್ನು ಮುಂದುವರಿಸಿದರು.

ಇದನ್ನು ನೋಡಿ ಉಳಿದ ಸ್ತ್ರೀಯರೆಲ್ಲಾ ಹೆದರಿ ಹಿಮಾಲಯ ಪರ್ವತದ ಮೇಲೆ ಓಡಿ ಹೋದರು. ಧನಲೋಭಕ್ಕೆ ವಶರಾದ ಭೃಗು ಬ್ರಾಹ್ಮಣರು ಸತ್ತರು. ಧನಲೋಭವು ಅಂಟಿತೆಂದರೆ ಅದು ಎಂತಹ ಕಾರ್ಯವನ್ನಾದರೂ ಮಾಡಿಸುತ್ತದೆ. ಅದನ್ನು ಮೀರಿಸುವ ಶತ್ರುವೇ ಮಾನವರಿಗಿಲ್ಲ.

ಹೆದರಿ ಹಿಮಾಲಯಕ್ಕೆ ಓಡಿ ಹೋದ ಭೃಗು ಸ್ತ್ರೀಯರು ಮಣ್ಣಿನಿಂದ ಗೌರೀದೇವಿಯ ವಿಗ್ರಹವನ್ನು ಮಾಡಿ, ನದಿಯ ತೀರದಲ್ಲಿ ಪ್ರತಿಷ್ಠಿಸಿ, ಅದನ್ನು ಪೂಜಿಸುತ್ತಾ, ಮರಣವನ್ನು ಕಾಯುತ್ತಿದ್ದರು.

ಹೀಗಿರುವಾಗ ಒಂದು ದಿನ ರಾತ್ರಿ ಮಹಾದೇವಿ ಸುಂದರವಾದ ರೂಪದಲ್ಲಿ ಅವರ ಕನಸಿನಲ್ಲಿ ಕಂಡು ಬಂದು, "ನಿಮ್ಮ ಪೂಜಾ ವಿಧಿಗಳಿಗೆ ಮೆಚ್ಚಿದೆನು. ನಿಮ್ಮಲ್ಲಿ ಒಬ್ಬಳಿಗೆ ತೊಡೆಯಿಂದ ಒಬ್ಬ ಮಗನು ಹುಟ್ಟುತ್ತಾನೆ. ಅವನು ನನ್ನ ಅಂಶದಿಂದಲೇ ಹುಟ್ಟುವನು, ಅವನೇ ನಿಮ್ಮೆಲ್ಲರನ್ನೂ ಕಾಪಾಡುತ್ತಾನೆ." ಎಂದಳು. ನಿದ್ದೆಯಿಂದ ಎದ್ದು ಆ ಸ್ತ್ರೀಯರು ಕನಸನ್ನು

ನೆನೆದು ತುಂಬಾ ಸಂತೋಷಪಟ್ಟರು. ಅವರಲ್ಲಿ ಒಬ್ಬಳ ತೊಡೆಯಲ್ಲಿ ಗರ್ಭ ಲಕ್ಷಣ ತೋರಿತು. ಕ್ರಮೇಣ ಅವಳ ತೊಡೆಯಿಂದ ಪುತ್ರನೊಬ್ಬನು ಹೊರಬಿದ್ದನು, ಅವನ ತೇಜಸ್ಸು ಸೂರ್ಯ ಬಿಂಬದಂತಿದ್ದಿತು. ಆ ಸ್ತ್ರೀಯರನ್ನು ಹುಡುಕುತ್ತಾ ಅಲ್ಲಿಗೂ ಬಂದ ಹೈಹಯ ವೀರರು, ಆ ಹುಡುಗನನ್ನು ನೋಡಿದ ಮರುಕ್ಷಣದಲ್ಲಿ ಕುರುಡರಾಗಿ ಬಿಟ್ಟರು!

ಇದೆಲ್ಲವೂ ಬ್ರಾಹ್ಮಣರ ಪ್ರಭಾವವಾಗಿರಬೇಕೆಂದು ಹೈಹಯರಿಗೆ ಭಯವಾಯಿತು. ಅವರೆಲ್ಲರೂ ಆ ಹುಡುಗನ ತಾಯಿಗೇ ಶರಣಾಗತರಾಗಿ ಬೇಡುತ್ತ, "ಅಮ್ಮಾ, ನಿನ್ನನ್ನು ನೋಡಿದ ಕೂಡಲೇ ನಾವೆಲ್ಲಾ ಕುರುಡರಾದೆವು. ಅದೇನು ನಿನ್ನ ಮಹಿಮೆಯೋ ನಾವರಿಯೆವು! ನಮ್ಮ ಮೇಲೆ ಅನುಗ್ರಹ ತೋರಿ, ನಮಗೆ ಮತ್ತೆ ಕಣ್ಣು ಬರುವ ಹಾಗೆ ಮಾಡಮ್ಮಾ! ಕುರುಡರಾಗಿ ಬದುಕುವುದಕ್ಕಿಂತಲೂ ಸಾವೇ ಮೇಲು! ಇನ್ನೆಂದಿಗೂ ನಾವು ಇಂಥ ಕೆಟ್ಟ ಕೆಲಸ ಮಾಡಲಾರೆವು. ಭೃಗುವಂಶದವರಿಗೆ ವಿಧೇಯರಾಗಿರುತ್ತೇವೆ. ಗೌರವಿಸುತ್ತೇವೆ. ಬುದ್ಧಿ ಕೆಟ್ಟು ನಾವು ಮಾಡಿದ ದುಷ್ಟ ಕಾರ್ಯಗಳನ್ನು ಕ್ಷಮಿಸಿ ನಮಗೆ ನೇತ್ರ ದಾನ ನೀಡು ತಾಯೇ!" ಎಂದು ಹೇಳಿಕೊಂಡರು.

ಅವರು ದೀನರಾಗಿ ಹಾಗೆಲ್ಲಾ ಹೇಳಿದುದನ್ನು ಕೇಳಿ ಆ ಬ್ರಾಹ್ಮಣ ಸ್ತ್ರೀ ಆಶ್ಚರ್ಯ ಪಡುತ್ತ, "ನಿಮ್ಮ ಕಣ್ಣುಗಳು ಹಾಗೇಕಾಯಿತೆಂಬ ಸಂಗತಿ ಯಾವುದೂ ನಮಗೆ ಗೊತ್ತಿಲ್ಲವಲ್ಲಾ? ನನಗೆ ನಿಮ್ಮ ಮೇಲೆ ಯಾವ ಬಗೆಯ ಕೋಪವೂ ಇಲ್ಲ. ನೀವು ಯಾರೆಂಬುದೂ ನಾನು ಅರಿಯೆನು. ಈಗ ನಿಮ್ಮ ಮಾತುಗಳಿಂದಷ್ಟೇ ನಿಮ್ಮನ್ನು ತಿಳಿದೆನು. ನಿಮ್ಮ ಕಣ್ಣುಗಳನ್ನು ತೆಗೆದವನು ನನ್ನ ಮಗನೇ ಆಗಿರಬೇಕು. ಏಕೆಂದರೆ ನೀವೇ ಹೇಳಿದಂತೆ ನೀವು ತುಂಬಾ ಕೆಟ್ಟವರು, ಕ್ರೂರರು. ಹಣಕ್ಕಾಗಿ ಘೋರವಾದ ಹತ್ಯಾಕಾಂಡ ಮಾಡಿದಿರಿ. ಆ ಪಾಪವು ಸುಮ್ಮನೆ ಹೋದೀತೇ? ಗರ್ಭದಲ್ಲಿರುವ ಪಿಂಡಗಳನ್ನೂ, ಶಿಶುಗಳನ್ನೂ, ವೃದ್ಧರನ್ನೂ ಆಲೋಚನೆಯಿಲ್ಲದೆ ಕೊಂದಿರಲ್ಲಾ? ನಿಮ್ಮ ಮದ ಅಡಗಿಸಲಿಕ್ಕೇ ಜಗದಂಬೆಯ ದಯೆ





ಯಿಂದ ಇವನು ನನ್ನ ತೊಡೆಯಿಂದ ಹುಟ್ಟಿದ್ದಾನೆ. ತನ್ನ ತಂದೆಗಳೆಲ್ಲಾ ಸತ್ತು ಹೋದುದಕ್ಕೆ ಇವನು ತುಂಬಾ ಕೋಪದಲ್ಲಿದ್ದಾನೆ. ಇವನ ಹತ್ತಿರ ಕ್ಷಮೆ ಬೇಡಿ ಶಾಂತನಾಗುವಂತೆ ಮಾಡಿರಿ. ನಿಮಗೆ ಕಣ್ಣು ಬರುತ್ತದೆ." ಎಂದಳು.

ತೊಡೆ ಅಂದರೆ ಊರುವಿನಿಂದ ಹುಟ್ಟಿದ ಆ ಮಗನಿಗೆ ಔರ್ವನೆಂದು ಹೆಸರಾಗಿತ್ತು. ಹೈಹಯರು ಬಾಲ ಔರ್ವನನ್ನು ಬಗೆ ಬಗೆಯಾಗಿ ಪ್ರಾರ್ಥಿಸಿ ಕೊಂಡರು, ಆದರಿಂದ ಔರ್ವನು ಶಾಂತನಾಗಿ ಅವರನ್ನು ಕುರಿತು ಹೀಗೆಂದನು :

"ಮಹಾದೇವಿ ಮಾಡಿಕೊಂಡ ನಿರ್ಣಯಗಳು ತಪ್ಪಲು ಸಾಧ್ಯವಿಲ್ಲ, ಅವಳ ಇಚ್ಛಾನುಸಾರವಾಗಿ ನಡೆದುವುಗಳಿಗಾಗಿ ಜ್ಞಾನಿಯಾದವನು ಚಿಂತಿಸ ಲಾರನು. ಕೋಪಿಸಲಾರನು. ಇನ್ನು ಮೇಲೆ ಯಾವ ಬ್ರಾಹ್ಮಣರಿಗೂ ಋಷಿಮುನಿಗಳಿಗೂ ಮನಃಶಾಂತಿ ಕೆಡದಂತೆ ನೋಡಿಕೊಳ್ಳಿ. ಹೋಗಿ ಬನ್ನಿ"

ಆ ಕೂಡಲೇ ಹೈಹಯರಿಗೆ ದೃಷ್ಟಿ ಬಂದಿತು. ಸಂತೋಷದಿಂದ ಹೊರಟು ಹೋದರು. ಔರ್ವನನ್ನು ಅವನ ತಾಯಿ ತುಂಬ ಪ್ರೇಮದಿಂದ ಒಳ್ಳೆಯ ರೀತಿಯಲ್ಲಿ ಬೆಳೆಸುತ್ತಾ ಬಂದಳು.

ಹೈಹಯ ವಂಶದಂತೆಯೇ ಭರತವಂಶವೂ ಪ್ರಸಿದ್ಧ ವಾದುದು. ಭರತನೇ ಅದರ ಮೂಲ ಪುರುಷ. ಯಾದವವಂಶವೆಂಬ ಇನ್ನೊಂದು ಪ್ರಸಿದ್ಧ ವಂಶಕ್ಕೆ ಯದು ಎಂಬವನು ಮೂಲ ಪುರುಷ. ಹೈಹಯ ವಂಶವು ಹೇಗೆ ಏರ್ಪಟ್ಟಿತೆಂಬುದಕ್ಕೆ ಇನ್ನೊಂದು ಅದ್ಭುತ ಕಥೆಯಿದೆ.

ಪೂರ್ವದಲ್ಲಿ ಸೂರ್ಯನ ಮಗನಾದ ರೇವಂತ ನೆಂಬವನು, ಉಚ್ಚೈಃಶ್ರವವೆಂಬ ಕುದುರೆಯ ಮೇಲೇರಿಕೊಂಡು, ವಿಷ್ಣುವನ್ನು ನೋಡಬೇಕೆಂಬ ಆತುರದಲ್ಲಿ ವೈಕುಂಠಕ್ಕೆ ಹೋದನು. ಉಚ್ಚೈಃಶ್ರವವು ಸಮುದ್ರಮಥನ ಕಾಲದಲ್ಲಿ ಲಕ್ಷ್ಮಿಗಿಂತ ಮೊದಲು ಹುಟ್ಟಿದುದರಿಂದ ಲಕ್ಷ್ಮಿಗೆ ಅಣ್ಣನಾಗಬೇಕು. ವೈಕುಂಠ ದಲ್ಲಿ ವಿಷ್ಣುವಿನ ಪಕ್ಕದಲ್ಲಿದ್ದ ಲಕ್ಷ್ಮಿ ತನ್ನ ಅಣ್ಣ ಕುದುರೆ ಯನ್ನೂ, ಅದರ ಮೇಲೆ ಆರೋಹಿಸಿರುವ ಸುಂದರ ಪುರುಷನನ್ನೂ ನೋಡಿ ಸಮ್ಮೋಹಿತಳಾಗಿ ಒಂದೇ ಸಮನೆ ನೋಡ ತೊಡಗಿದಳು.

ಅದನ್ನು ನೋಡಿ ವಿಷ್ಣು ಲಕ್ಷ್ಮಿಯೊಂದಿಗೆ, "ಈಗ ಬಂದವನು ಮೂರುಲೋಕಗಳಲ್ಲಿಯೂ ಎಣೆಯಿಲ್ಲ ದಿರುವಂಥ ಸುಂದರನು. ಇವನನ್ನು ನೀನು ಬಲ್ಲೆಯಾ ಲಕ್ಷ್ಮೀ ? " ಎಂದು ಕೇಳಿದನು.

ಆದರೆ ರೇವಂತನ ಅಂದಚೆಂದಗಳನ್ನು ನೋಡುತ್ತ ಮೈಮರೆತ ಲಕ್ಷ್ಮಿಗೆ ಗಂಡನ ಪ್ರಶ್ನೆ ಕೇಳಿಸಲೇ ಇಲ್ಲ. ವಿಷ್ಣು ಅವಳ ಸ್ಥಿತಿಯನ್ನು ನೋಡಿ ಕೋಪಾವೇಶ ದಿಂದ ಹೀಗೆಂದನು :

"ಹಾಗೇನು ನೋಡುವಿ ? ಇಲ್ಲಿಗೆ ಬಂದವರನ್ನು ನೋಡಿ ನಿನ್ನ ಮನಸ್ಸು ವಿಚಲಿತವಾಗಿ ಹೋಯಿತು. ನೀನು ರತಿಯೆಂದೂ, ರಮೆಯೆಂದೂ ಚಂಚಲ

ಸ್ವಭಾವದಿಂದ ಅಪಕೀರ್ತಿಯ ಪಾಲಾಗಿ ಹೋಗು! ಭೂಲೋಕದಲ್ಲಿ ಹೆಣ್ಣು ಕುದುರೆಯಾಗಿ ಹುಟ್ಟು!"

ವಿಷ್ಣುವಿನ ಬಾಯಿಯಿಂದ ಹೊರಟ ಶಾಪ ವಾಕ್ಯವನ್ನು ಕೇಳಿ, ಲಕ್ಷ್ಮಿ ಹೆದರಿ ಅಳುತ್ತ, ವಿಷ್ಣುವಿನ ಕಾಲಿಗೆ ಬಿದ್ದು, "ನನ್ನನ್ನು ನಿರ್ದಯನಾಗಿ ಹೀಗೆ ಶಪಿಸಬಹುದೆ? ಈ ಒಂದು ಅಲ್ಪಕಾರಣದಿಂದ ನನ್ನ ಮೇಲೆ ಸಹಜವಾಗಿ ನಿನಗಿದ್ದ ಪ್ರೇಮವು ಬತ್ತಿ ಹೋಯಿತೆ? ಎಂದಿಗೂ ಕೋಪವನ್ನರಿಯದ ಬೆಣ್ಣೆಯಂತೆ ಮೃದುವಾದ ನಿನ್ನ ಸ್ವಭಾವ ಥಕ್ಕನೆ ಹೀಗೆ ಮಾರ್ಪಡಬಹುದೆ? ನೀನು ನನ್ನನ್ನು ಬಿಟ್ಟೇ ಬಿಟ್ಟರೆ, ನಾನು ಈಗಲೇ ಪ್ರಾಣಬಿಡುತ್ತೇನೆ. ಬೇಡ. ದಯ ಮಾಡಿ ಶಾಪಕ್ಕೆ ವಿಮೋಚನೆ ಕೊಡು" ಎಂದಳು.

ಲಕ್ಷ್ಮಿಯ ದುಃಖ ನೋಡಿ ವಿಷ್ಣುವಿನ ಮನಸ್ಸು ಕರಗಿತು. ಅವನು ಲಕ್ಷ್ಮಿಯೊಂದಿಗೆ, ನಿನ್ನ ಗರ್ಭದಲ್ಲಿ ನನ್ನನ್ನು ಹೋಲುವಂತಹ ಮಗನು ಹುಟ್ಟಿದ ಕೂಡಲೇ ನಿನಗೆ ಶಾಪವಿಮೋಚನೆಯಾಗುತ್ತದೆ. ನೀನು ನನ್ನ ಬಳಿಗೇ ಹಿಂದಿರುಗಿ ಬರುವಿ" ಎಂದನು.

ವಿಷ್ಣು ಕೋಪದಲ್ಲಿರುವ ಸಂಗತಿ ರೇವಂತನಿಗೂ ಗೊತ್ತಾಯಿತು. ಕೂಡಲೇ ಅವನು ಕುದುರೆಯಿಂದಿಳಿದು ವಿಷ್ಣುವಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಅಪ್ಪಣೆ ಪಡೆದುಕೊಂಡು ತನ್ನ ತಂದೆಯ ಬಳಿಗೆ ಹಿಂದಿರುಗಿ ನಡೆದ ಸಂಗತಿಯನ್ನು ಹೇಳಿದನು.

ಶಾಪಗ್ರಸ್ತಳಾದ ಲಕ್ಷ್ಮಿ ವಿಷ್ಣುವಿನಿಂದ ಅಪ್ಪಣೆ ಕೇಳಿಕೊಂಡು, ಸುವರ್ಣಾಕ್ಷವೆಂಬ ಸ್ಥಳಕ್ಕೆ ಹೋಗಿ, ಹೆಣ್ಣು ಕುದುರೆಯ ರೂಪತಾಳಿ ಶಿವನನ್ನು ಧ್ಯಾನಿಸುತ್ತ ತಪಸ್ಸಿನಲ್ಲಿದ್ದಳು. ಅಶ್ವಲಕ್ಷ್ಮಿಯ ತಪಸ್ಸಿಗೆ ಮೆಚ್ಚಿ ಶಿವನು ಪಾರ್ವತೀ ಸಮೇತ ವೃಷಭವಾಹನದ ಮೇಲೆ, ಪ್ರಮಥ ಗಣಗಳೊಂದಿಗೆ ಲಕ್ಷ್ಮಿಯ ಮುಂದೆ ಬಂದು ಹೀಗೆ ಹೇಳಿದನು:

"ಅಮ್ಮಾ! ಮಹಾಲಕ್ಷ್ಮೀ! ನೀನು ನನ್ನನ್ನು ಧ್ಯಾನಿಸಿ ಹೀಗೆ ತಪಸ್ಸುಮಾಡಲು ಕಾರಣವೇನು?




ಏನು ಬೇಕಾದರೂ ಕೊಡುವಂತಹ ಸಮರ್ಥನು ವಿಷ್ಣುತಾನೇ? ವಿವೇಕವಂತಳಾದವಳಿಗೆ ಗಂಡನಿಗಿಂತ ಹೆಚ್ಚಿನ ದೈವವಿರಲಾರದಷ್ಟೆ? ಅದರಲ್ಲಿಯೂ ನಿನ್ನ ಗಂಡ ಸಾಮಾನ್ಯದವನಲ್ಲವಷ್ಟೆ? ಹಾಗಿರುವಾಗ ನಾನು ನಿನಗೇನು ಸಹಾಯ ಮಾಡಬಲ್ಲೆನು?"

ಹೆಣ್ಣು ಕುದುರೆಯ ರೂಪದಲ್ಲಿರುವ ಲಕ್ಷ್ಮಿ ಶಿವನೊಂದಿಗೆ ಹೀಗೆಂದಳು:

"ನೀನು ಹೇಳಿದುದೆಲ್ಲವೂ ನಿಜವೇ ಆದರೂ ಆ ನನ್ನ ಗಂಡನೇ ನನ್ನನ್ನು ಶಪಿಸಿಬಿಟ್ಟನು. ಆ ಶಾಪವು ನಿನ್ನಿಂದ ಪರಿಹಾರವಾಗುವುದೆಂದು ನಂಬಿ ನಿನ್ನನ್ನು ಧ್ಯಾನ ಮಾಡುತ್ತಿದ್ದೇನೆ. ನನಗೆ ಮಗನು ಹುಟ್ಟಿಬಿಟ್ಟರೆ ಶಾಪವು ಹೋಗುತ್ತದೆ. ನನಗೆ ಮಗನು ಹುಟ್ಟುವ ಬಗೆ ಹೇಗೆ? ದಯಮಾಡಿ ನೀನೇ ಹೇಳು. ನನ್ನ ಗಂಡ ಎಲ್ಲಿಯೋ ವೈಕುಂಠದಲ್ಲಿ ಕುದುರೆಯಾಗುವಂತೆ ಶಪಿಸಿ ನನ್ನನ್ನು ಕಳುಹಿಸಿದ್ದಾನೆ. ನಾನೇನೋ ಭೂಮಿಯ ಈ ಅರಣ್ಯದಲ್ಲಿದ್ದೇನೆ. ನನಗೆ ಸಂತಾನವಾಗುವ



ಮಾರ್ಗ ಹೇಗೆ? ಎಲ್ಲಿದೆ? ನನ್ನ ತಪಸ್ಸಿಗೆ ನೀನು ನಿಜಕ್ಕೂ ತೃಪ್ತನಾಗಿದ್ದರೆ ನನ್ನ ಶಾಪ ತೀರಿಹೋಗುವಂತೆ ಮಾಡು. ನಿನಗೂ ನನ್ನ ಗಂಡನಿಗೂ ಭೇದವೇನಿಲ್ಲ. ನಿನ್ನನ್ನು ಮೆಚ್ಚಿಸಿದರೆ ನನ್ನ ಗಂಡನನ್ನು ಮೆಚ್ಚಿಸಿದ ಹಾಗೆಯೇ. ಆದುದರಿಂದ ನನ್ನ ಗಂಡನು ಹೇಗಾದರೂ ಇಲ್ಲಿಗೆ ಬಂದು ನನ್ನೊಂದಿಗಿರುವಂತೆ ನೀನೇ ಮಾಡಬೇಕು!"

ಆ ಮಾತಿಗೆ ಶಿವನು ತಲೆಯೊಲಿಯುತ್ತ, "ಅದುವೇ ಸಂಗತಿ? ಚಿಂತಿಸಬೇಡ. ನಿನ್ನ ಗಂಡ ಕುದುರೆಯ ರೂಪದಲ್ಲಿಯೇ ನಿನ್ನ ಬಳಿಗೆ ಬರುತ್ತಾನೆ. ಅವನು ಪ್ರಪಂಚವನ್ನೆಲ್ಲಾ ಆಳುವವನಲ್ಲವೆ? ಅವನಿಂದ ನಿನಗೆ ಹುಟ್ಟುವ ಮಗನೂ ಪ್ರಪಂಚವನ್ನು ಆಳುವವನಾಗುತ್ತಾನೆ. ಅವನಿಗೆ ಏಕವೀರನೆಂದು ಹೆಸರು ಬರುತ್ತದೆ. ಅವನಿಂದಲೇ ಹೈಹಯ ವಂಶವು ಪ್ರಾರಂಭವಾಗಿ ಭೂಮಿಯನ್ನಾಳುತ್ತದೆ. ಆಮೇಲೆ ನೀನೂ ನಿನ್ನ ಗಂಡನೂ ವೈಕುಂಠಕ್ಕೆ ಹೋಗಿ ಸುಖಸಂತೋಷವಾಗಿರುವಿರಿ. ನಿನಗೆ ಇಂತಹ ಕಷ್ಟಬರಲು ಕಾರಣವೇನಂದರೆ, ನೀನು ಪರಾಶಕ್ತಿಯನ್ನು ಆರಾಧಿಸಲಿಲ್ಲ. ಅವಳೇ ನಿನ್ನನ್ನು ಈ ಗತಿಗೆ ತಂದಳು. ಅವಳಿಂದಲೇ ನಿನಗೆ ಸಮ್ಮೋಹ ಕವಿಯಿತು" ಎಂದು ಹೇಳಿ ಶಿವನು ಹೊರಟುಹೋದನು.

ಶಿವನು ಕೈಲಾಸಕ್ಕೆ ಹೋದಕೂಡಲೇ, ಚಿತ್ರರೂಪನೆಂಬ ಪ್ರಮಥನನ್ನು ಕರೆದು, "ನೀನು ಈಗಲೇ ವೈಕುಂಠಕ್ಕೆ ಹೋಗಿ ವಿಷ್ಣುವಿನೊಂದಿಗೆ, ಅವನ ಹೆಂಡತಿಯ ಶೋಕನಿವಾರಣೆ ಮಾಡಬೇಕೆಂದು ನಾನು ಸ್ನೇಹದಿಂದ ಒತ್ತಾಯಿಸಿ ಹೇಳಿರುವುದಾಗಿ ಹೇಳು" ಎಂದು ಹೇಳಿ ಕಳುಹಿಸಿಕೊಟ್ಟನು.

ಚಿತ್ರರೂಪನು ವೈಕುಂಠಕ್ಕೆ ಹೋಗಿ ವಿಷ್ಣು ಮಂದಿರದ ದ್ವಾರಪಾಲಕರಾದ ಜಯವಿಜಯರೊಂದಿಗೆ ತಾನು ಬಂದ ಸಮಾಚಾರವನ್ನು ವಿಷ್ಣುವಿಗೆ ಹೇಳಿ ಕಳುಹಿಸಿದನು. ಜಯನು ಒಳಗೆ ಹೋಗಿ ವಿಷ್ಣುವಿನೊಂದಿಗೆ, "ಶಿವನು ಚಿತ್ರರೂಪನೆಂಬ ಪ್ರಮಥನನ್ನು ಕಳುಹಿಸಿದ್ದಾನೆ. ಚಿತ್ರರೂಪನನ್ನು ಒಳಗೆ ಕಳುಹಿಸಬಹುದೇ?" ಎಂದು ಕೇಳಿದನು. ಕೂಡಲೇ ಕಳುಹಿಸುವಂತೆ ವಿಷ್ಣುವಿನ ಅನುಜ್ಞೆಯಾಯಿತು.

ಚಿತ್ರರೂಪನು ಒಳಗೆ ಹೋಗಿ ವಿಷ್ಣುವಿಗೆ ನಮಸ್ಕಾರಮಾಡಿ, ಕುಶಲ ಮಾತುಗಳಾದ ಮೇಲೆ, "ದೇವದೇವಾ! ತಮ್ಮೊಂದಿಗೆ ಒಂದು ಮುಖ್ಯ ವಿಷಯವನ್ನು ಹೇಳಲು ನಮ್ಮೊಡೆಯನು ನನ್ನನ್ನು ಕಳುಹಿಸಿದ್ದಾನೆ. ಆತನು ತನ್ನ ಮಾತಿನಲ್ಲಿ ತಮ್ಮೊಂದಿಗೆ ಹೀಗೆ ಹೇಳಲು ಹೇಳಿದ್ದಾನೆ. 'ಮಹಾವಿಷ್ಣೂ, ನಿನ್ನ ಹೆಂಡತಿಯಾದ ಲಕ್ಷ್ಮೀದೇವಿ ಕುದುರೆಯ ರೂಪದಲ್ಲಿ ಕಾಳಿಂದೀ ತಮಸಾ ನದಿಗಳ ಸಂಗಮದ ಹತ್ತಿರ ಧ್ಯಾನನಿಷ್ಠೆಯಲ್ಲಿ ಕ್ಷೇಮವಾಗಿದ್ದಾಳೆ. ಅವಳು ತಪಸ್ಸಿನಿಂದ ನನ್ನನ್ನು ಮೆಚ್ಚಿಸಿದ್ದಾಳೆ. ಲಕ್ಷ್ಮಿಯನ್ನು ಎಲ್ಲಾ ದೇವತೆಗಳೂ ಪೂಜಿಸುವರೆಂಬುದು ನೀನು ಬಲ್ಲೆ.

ಅವಳ ಅನುಗ್ರಹವನ್ನು ಕಳೆದುಕೊಂಡ ಮಾನವರಂತೂ ಬದುಕಿರಲು ಸಾಧ್ಯವಿಲ್ಲ. ಅಂತಹ ಪತ್ನಿಯನ್ನು ದೂರಮಾಡಿಕೊಂಡು, ಲೋಕಕ್ಕೆ ಕೇಡಾಗುವಂತೆ ಮಾಡುವುದು ನಿನಗೂ ಶಾಂತಿ ಕೆಡುವ ಕಾರ್ಯ ವೆನಿಸುತ್ತದೆ. ಸಾಮಾನ್ಯ ಮನುಷ್ಯನೂ ಸಹ ಹೆಂಡತಿ ಯನ್ನು ಬಿಟ್ಟಿರಲಾರ. ಹಾಗಿರುವಾಗ ನಿಷ್ಕಾರಣ ವಾಗಿ, ಅಲ್ಪಾವೇಶದಿಂದ ನೀನಾದರೂ ಪತ್ನಿಯನ್ನು ಬಿಟ್ಟು ಹೇಗೆ ಇರುವಿಯೋ! ನನ್ನ ಮಾತನ್ನು ಅಲಕ್ಷ್ಯ ಮಾಡದೆ ಕೂಡಲೇಹೋಗಿ ಲಕ್ಷ್ಮಿಯನ್ನು ಸಮಾಧಾನ ಪಡಿಸಿ ಮೊದಲಿನಂತಿರು. ದಕ್ಷಯಜ್ಞದಲ್ಲಿ ಹೆಂಡತಿ ಯನ್ನು ಕಳೆದುಕೊಂಡಾಗಲೇ, ಭಾರ್ಯಾವಿಯೋಗ ವೆಂದರೆ ಹೇಗಿರುತ್ತದೆಂದು ನನಗೆ ಗೊತ್ತಾಗಿದೆ. ಆದುದರಿಂದ ಯಾರಿಗೆ ಹೆಂಡತಿಯ ವಿಯೋಗ ವಾದರೂ ನನಗೆ ಕಷ್ಟವಾಗಿರುತ್ತದೆ. ನಿನಗಂತೂ ಹೆಂಡತಿ ದೂರಹೋಗಿ ಬಹಳ ಕಾಲವಾಯಿತು. ಆದರಿಂದ ನೀನು ಸುಖವಾಗಿರುವಿಯೆಂದು ನಾನು ನಂಬಲಾರೆ. ಕೂಡಲೇ ಕುದುರೆಯ ರೂಪದಲ್ಲೇ ನಿನ್ನ ಪತ್ನಿಯ ಬಳಿಗೆ ಹೋಗು" ಎಂದು ಹೇಳಿದನು.

ವಿಷ್ಣು ತಲೆದೂಗಿ ಶಿವನ ಮಾತನ್ನು ಸ್ವೀಕರಿಸಿ ಪ್ರಮಥನನ್ನು ಕಳುಹಿಸಿಕೊಟ್ಟು, ಕೂಡಲೇ ಕುದುರೆಯ ರೂಪದಲ್ಲಿ ಹೋಗಿ ಲಕ್ಷ್ಮಿಯೊಂದಿಗೆ ವಿಹರಿಸಿದನು. ಅಶ್ವಲಕ್ಷ್ಮಿ ಒಬ್ಬ ಮಗನನ್ನು ಹಡೆದಳು.

ಆ ಮೇಲೆ ವಿಷ್ಣು ಲಕ್ಷ್ಮಿಯೊಂದಿಗೆ "ಇನ್ನು ನಾವು ವೈಕುಂಠಕ್ಕೆ ಹೋಗೋಣ, ಈ ಮಗನು ಇಲ್ಲಿಯೇ ಇರಲಿ. ನೀನು ಕುದರೆಯ ರೂಪವನ್ನು ಬಿಟ್ಟುಬಿಡು" ಎಂದನು. "ಇದೇನು ಮಾತು? ಯಾವಸ್ತ್ರೀಯೇ ಆದರೂ ತನ್ನ ಶಿಶುವನ್ನು ಅರಣ್ಯದ ಪಾಲುಮಾಡಲು ಒಪ್ಪುವಳೇನು? ಈ ನದಿಯ ತೀರದಲ್ಲಿ ಮಗುವನ್ನು ಬಿಟ್ಟರೆ ಯಾರು ಕಾಪಾಡುತ್ತಾರೆ?" ಎಂದು ಲಕ್ಷ್ಮಿ ಹೇಳುತ್ತಿರುವಾಗಲೇ ಅವಳ ಶಾಪ ಹೋಗಿ ದಿವ್ಯ ಶರೀರಿಣಿಯಾದಳು. ವಿಷ್ಣುವೂ ನಿಜರೂಪ ತಾಳಿದನು. ಅವರಿಗಾಗಿ ವಿಮಾನವೂ ಬಂದಿತು.

ಲಕ್ಷ್ಮಿ ತನ್ನ ಮಗನನ್ನು ಎತ್ತಿಕೊಂಡು, "ಇವನು ಎಲ್ಲಾ ವಿಧದಲ್ಲಿಯೂ ನಿನ್ನ ಹಾಗೆಯೇ ಇದ್ದಾನೆ. ಇವನನ್ನು ಇಲ್ಲಿ ಬಿಡಲಾರೆ. ಮೂವರೂ ಹೋಗೋಣ" ಎಂದಳು.

"ಲಕ್ಷ್ಮೀ, ಇವನಿಂದ ಒಂದು ಕಾರ್ಯವಾಗಲಿದೆ. ಯಯಾತಿರಾಜನಿಗೆ ತುರ್ವಸು ಎಂಬ ಮಗನಿದ್ದಾನೆ. ಅವನು ಸಂತಾನಕ್ಕಾಗಿ ತಪಸ್ಸು ಮಾಡುತ್ತಿದ್ದಾನೆ. ಅವನೇ ಈ ಮಗುವನ್ನು ಬೆಳೆಸುವ ಹಾಗೆ ಮಾಡು ತ್ತೇನೆ. ಆ ತುರ್ವಸು ಇಲ್ಲಿಗೆ ಬರುವವರೆಗೂ ಈ ಶಿಶುವಿಗೆ ಯಾವ ಭಯವೂ ಇಲ್ಲ." ಎಂದು ವಿಷ್ಣು ಲಕ್ಷ್ಮಿಯನ್ನು ನಂಬಿಸಿ, ಅವಳೊಂದಿಗೆ ದೇವ ವಿಮಾನ ದಲ್ಲಿ ವೈಕುಂಠಕ್ಕೆ ಹೊರಟುಹೋದನು.





# ದೇವೀ ಭಾಗವತ

**ಸಾಕ್ಷಾತ್** ತನ್ನ ಪತಿಯಿಂದಲೇ ಶಾಪಕ್ಕೊಳಗಾಗಿ ಹೆಣ್ಣು ಕುದುರೆಯ ರೂಪತಾಳಿದ ಲಕ್ಷ್ಮಿ ಶಿವನ ಅನುಸಂಧಾನದಿಂದ ವಿಷ್ಣುವಿನ ಅನುಗ್ರಹಕ್ಕೆ ಪಾತ್ರಳಾಗಿ ಗಂಡು ಮಗುವನ್ನು ಹೆತ್ತು ಮಗುವನ್ನು ನದೀತೀರದ ಅರಣ್ಯದಲ್ಲಿ ಬಿಟ್ಟು ವೈಕುಂಠಕ್ಕೆ ಹೋದ ಮೇಲೆ, ವಿಷ್ಣು ಹೇಳಿದಂತೆ ಕೂಡಲೇ ನಡೆಯತೊಡಗಿತು. ಲಕ್ಷ್ಮೀನಾರಾಯಣರು ಹೋದ ಸ್ವಲ್ಪ ಹೊತ್ತಿಗೆಲ್ಲಾ ಚಂಪಕನೆಂಬ ವಿದ್ಯಾಧರನು ಮದಾಲಸೆ ಎಂಬ ತನ್ನ ಹೆಂಡತಿಯೊಂದಿಗೆ ಆ ದಾರಿಯಾಗಿ ಬಂದು, ಅಸಾಧಾರಣವಾದ ತೇಜಸ್ಸಿನಿಂದ ಬೆಳಗುವ ಆ ಶಿಶುವನ್ನು ನೋಡಿ, ವಿಮಾನದಿಂದ ಇಳಿದು ಆ ಮಗುವನ್ನು ಎತ್ತಿ ಮದಾಲಸೆಯ ಕೈಗೆ ಕೊಟ್ಟನು. ಅವಳು ಆತ್ಮಾನಂದದಿಂದ ಆ ಮಗುವಿನ ನೆತ್ತಿಯನ್ನು ಮೂಸಿ, ಎದೆಗೊತ್ತಿಕೊಂಡು ತನ್ನ ಗಂಡನೊಂದಿಗೆ "ಇದು ಸಾಮಾನ್ಯರ ಶಿಶುವಿನಂತಿಲ್ಲ. ಯಾರ ಮಗು ? ಹೇಗೆ ಸಿಕ್ಕಿದ ? ಹೆತ್ತವಳು ಅರಣ್ಯದಲ್ಲಿ ಬಿಟ್ಟುಹೋದಳೇಕೆ ? ಅವಳಿಗೆ ಮನಸ್ಸಾದರೂ ಹೇಗೆ ಬಂತು ?" ಎಂದಳು.

"ಈ ಮಗುವಿನ ಸಮಾಚಾರ ಸಾವಿರ ಕಣ್ಣುಗಳ ಇಂದ್ರನನ್ನು ಕೇಳಿದರೆ ಗೊತ್ತಾಗುತ್ತದೆ. ಅವನು ಅನುಮತಿ ಕೊಟ್ಟರೆ ನಾವು ಇವನನ್ನು ಬೆಳೆಸೋಣ" ಎಂದು ಹೆಂಡತಿಗೆ ಹೇಳಿ ಚಂಪಕನು ಇಂದ್ರನ ಬಳಿಗೆ ಹೋದನು.

ಅವನು ಇಂದ್ರನಿಗೆ ಆ ಮಗುವನ್ನು ತೋರಿಸಿ, "ಇದು ಯಾರ ಮಗುವೋ ಗೊತ್ತಾಗಲಿಲ್ಲ. ತಮಸಾ ನದಿಯ ತೀರದಲ್ಲಿ ಅನಾಥವಾಗಿ ಮಲಗಿತ್ತು. ಯಾರೋ ಇವನನ್ನು ಹಡೆದು ಅಲ್ಲಿ ಬಿಸುಟುಹೋದರೆಂದು ಕಾಣುತ್ತದೆ. ನಿಮ್ಮ ಅನುಮತಿಯಾದರೆ ಇವನನ್ನು ಬೆಳೆಸಿಕೊಳ್ಳಬೇಕೆಂದಿದ್ದೇನೆ. ಅಪ್ಪಣೆಯೆ ?" ಎಂದು ಕೇಳಿದನು.

ಇಂದ್ರನು ಚಂಪಕನನ್ನು ನೋಡಿ, "ಇವನು ನಿನ್ನ ಮನೆಯಲ್ಲಿ ಬೆಳೆಯತಕ್ಕವನಲ್ಲ. ಲಕ್ಷ್ಮೀನಾರಾಯಣರು ಕುದುರೆಯ ರೂಪದಲ್ಲಿರುವಾಗ

೨೧. ಹೈಹಯನ ಕಥೆ



ಜನ್ಮವೆತ್ತಿದವನು ಇವನು. ಹೈಹಯನೆಂಬ ಹೆಸರಿನಿಂದಿರುವ ಈ ಮಗುವನ್ನು ಯಯಾತಿಯ ಮಗನಾದ ತುರ್ವಸುವಿಗಾಗಿ ವಿಷ್ಣು ಅಲ್ಲಿ ಇರಿಸಿದ್ದಾನೆ. ವಿಷ್ಣುವಿನ ಪ್ರೇರಣೆಯಿಂದ ಇನ್ನು ಸ್ವಲ್ಪ ಹೊತ್ತಿಗೆ ತುರ್ವಸು ಅಲ್ಲಿಗೆ ಬರುತ್ತಾನೆ. ಆದುದರಿಂದ ನೀನು ಈ ಕಂದನನ್ನು ಬೇಗನೇ ಅಲ್ಲಿಬಿಟ್ಟು ಹೋಗಿಬಿಡು. ಇವನಿಗೆ ಏಕವೀರನೆಂಬ ಹೆಸರು ಬರುತ್ತದೆ" ಎಂದನು.

ಇಂದ್ರನ ಮಾತು ಕೇಳಿ ಚಂಪಕನು ಕೂಡಲೇ ಆ ಶಿಶುವನ್ನು ಎತ್ತಿಕೊಂಡು ಹೋಗಿ, ಎಲ್ಲಿ ದೊರಕಿದನೋ ಅಲ್ಲಿಯೇ ಇಟ್ಟು ತನ್ನ ದಾರಿ ಹಿಡಿದು ಹೊರಟುಹೋದನು.

ಈ ನಡುವೆ ವಿಷ್ಣು ಯಯಾತಿಯ ಮಗನಾದ ತುರ್ವಸುವಿನ ಮುಂದೆ ಪ್ರತ್ಯಕ್ಷನಾದನು. ಎಂತೆಂತಹ ದೊಡ್ಡ ಪುಣ್ಯಾತ್ಮರಿಗೆ ಕೂಡಾ ದರ್ಶನ ದೊರೆಯದ ವಿಷ್ಣುಮೂರ್ತಿಯ ದಿವ್ಯದರ್ಶನವು ತನಗಾದುದನ್ನು ನೋಡಿ, ತುರ್ವಸುವಿಗಾದ ಆನಂದಕ್ಕೆ ಪಾರವಿಲ್ಲದೆ ಹೋಯಿತು. ಇದಿರಿನಲ್ಲಿ ನಿಂತ ತನ್ನ ಆರಾಧ್ಯದೇವನನ್ನು ಬಗೆಬಗೆಯಾಗಿ ಸ್ತುತಿಸಿದನು. "ಏನು ನಿನ್ನ ಕೋರಿಕೆ?" ಎಂದು ವಿಷ್ಣು ಅವನನ್ನು ಕೇಳಿದನು.

"ಒಬ್ಬ ಪುತ್ರನನ್ನು ಕರುಣಿಸು ದೇವಾ" ಎಂದನು ತುರ್ವಸು.

"ಆಕೋ ನೋಡು. ನಿನಗಾಗಿಯೇ ನಾನೂ ಲಕ್ಷ್ಮಿಯೂ ಒಬ್ಬ ಪುತ್ರನನ್ನು ಪಡೆದಿದ್ದೇವೆ. ಅವನು ತಮಸಾ ಕಾಳಿಂದೀ ನದಿಗಳ ಸಂಗಮದ ಹತ್ತಿರ ಇದ್ದಾನೆ. ಹೋಗಿ ತಂದು ಬೆಳೆಸಿಕೋ" ಎಂದು ಹೇಳಿ ವಿಷ್ಣು ಮಾಯವಾದನು.

ತುರ್ವಸು ಅತ್ಯಾನಂದದಿಂದ ವಿಷ್ಣು ಹೇಳಿದ ಗುರುತಿನ ಸ್ಥಳಕ್ಕೆ ಹೋದನು. ಅಲ್ಲಿ ಹಸುರು ಹುಲ್ಲು ಚಿಗುರುಗಳ ಮೇಲೆ ಮಲಗಿ, ನಗುಮೊಗದಿಂದ ಕಾಲಿನ ಹೆಬ್ಬೆರಳನ್ನು ಬಾಯಿಗಿಟ್ಟುಕೊಂಡು ಆಡಿಕೊಂಡಿರುವ ಮಗುವನ್ನು ನೋಡಿ, ಅದರ ಅಂದ ಚೆಂದಗಳಿಗೆ ಆಶ್ಚರ್ಯಪಡುತ್ತಾ, ಬಾಚಿ ತನ್ನ ಕೈಯಲ್ಲಿ ಎತ್ತಿಕೊಂಡು, "ಹೇ! ವಿಷ್ಣು ಪ್ರಸಾದರೂಪನೇ! ನನ್ನ ಮುದ್ದು ಕಂದಾ! ವಿಷ್ಣುಮೂರ್ತಿಯನ್ನು ತಪಸ್ಸಿನಿಂದ ಮೆಚ್ಚಿಸಿ ನಿನ್ನನ್ನು ಪಡೆದೆ. ನೀನೇ ಇನ್ನು ನನ್ನ ವಂಶವನ್ನು ನಿಲ್ಲಿಸು!" ಎಂದು ಮುದ್ದಿಸಿ ಆನಂದೋತ್ಸಾಹದಲ್ಲಿ ಮುಳುಗಿ ತೇಲುತ್ತ, ತನ್ನ ನಗರಕ್ಕೆ ಹೋದನು.

ಆಮೇಲೆ ರಾಜಭವನವೆಲ್ಲಾ ಉತ್ಸವದ ಸಂಭ್ರಮಗಳಿಂದ ತುಂಬಿಹೋಯಿತು. ಹರಿವರ್ಮನೆಂಬ ನಾಮಾಂತರವುಳ್ಳ ತುರ್ವಸು ರಾಜನು, ತನ್ನ ಕೈಯಲ್ಲಿರುವ ಶಿಶುವನ್ನು ಹೆಂಡತಿಯ ಕೈಗೆ ಕೊಟ್ಟು, ಅದು ತನಗೆ ಸಿಕ್ಕಿದ ರೀತಿಯನ್ನೆಲ್ಲಾ ಅವಳಿಗೆ ಹೇಳಿದನು. ಆಮೇಲೆ ಬಹು ವೈಭವದಿಂದ ನಾಮಕರಣ ಮಹೋತ್ಸವವು ನಡೆಯಿತು.

"ಏಕವೀರ" ಎಂದು ಹೆಸರಿಟ್ಟರು. ಅವನು ದಿನದಿಂದ ದಿನಕ್ಕೆ ಬೆಳೆಯುತ್ತಿರಲು, ಆರನೇ ತಿಂಗಳಿನಲ್ಲಿ ಅನ್ನಪ್ರಾಶನ ನಡೆಯಿತು. ಮೂರು ವರ್ಷ ತುಂಬಲು ಚೌಲ ನೆರವೇರಿತು. ಹನ್ನೊಂದನೆಯ ವಯಸ್ಸಿನಲ್ಲಿ ಉಪನಯನವಾಗಿ ವೇದ ಧನುರ್ವೇದಗಳ ಅಭ್ಯಾಸಕ್ಕೆ ತೊಡಗಿದನು.

ಅವನಿಗೆ ಎಳೆ ಮೀಸೆ ಮೂಡಿ ಯುಕ್ತವಯಸ್ಸು ಬಂದ ಕೂಡಲೇ ಹರಿವರ್ಮ ತುರ್ವಸು ಅವನಿಗೆ ಪಟ್ಟಾಭಿಷೇಕವನ್ನು ಮಾಡಿ, ತಾನು ಹೆಂಡತಿಯೊಂದಿಗೆ ವಾನಪ್ರಸ್ಥವನ್ನು ಸ್ವೀಕರಿಸಿ ಅರಣ್ಯಕ್ಕೆ ಹೋಗಿ ಪಾರ್ವತಿಯನ್ನು ಕುರಿತು ತಪಸ್ಸು ಮಾಡಲು ತೊಡಗಿದನು. ಮುಂದೆ ಕಾಲಕ್ರಮದಲ್ಲಿ ಆ ರಾಜದಂಪತಿಗಳು ಒಟ್ಟಿಗೇ ಸ್ವರ್ಗಸ್ಥರಾದರು. ಈ ಸಮಾಚಾರವು ಏಕವೀರನಿಗೆ ಗೊತ್ತಾಯಿತು. ಅವನು ಅವರಿಗೆ ಶಾಸ್ತ್ರೀಯವಾಗಿ ಉತ್ತರಕ್ರಿಯೆಗಳನ್ನು ಮಾಡಿದನು.

ಒಂದಾನೊಂದು ದಿನ ಏಕವೀರನು ತನ್ನ ಪರಿವಾರವನ್ನು ಕರೆದುಕೊಂಡು ಗಂಗಾತೀರದಲ್ಲಿ ವಿಹರಿಸಲು ಹೊರಟನು. ಅಲ್ಲಿ ಋಷಿಗಳ ಆಶ್ರಮಗಳು ಸುಂದರವಾದ ಗಿಡಮರ ಬಳ್ಳಿಗಳಿಂದಲೂ, ಬಗೆಬಗೆಯ ಪಕ್ಷಿಗಳ ಕಲಕಲರವಗಳಿಂದಲೂ, ಮನೋರಂಜಕವಾಗಿದ್ದುವು. ಅಲ್ಲಿಯ ಪ್ರಕೃತಿ ಸೌಂದರ್ಯವನ್ನು ನೋಡಿ ಸಂತೋಷಿಸುತ್ತ ನದೀತೀರದಲ್ಲಿ ನಡೆಯುತ್ತಿದ್ದಾಗ ಒಂದು ವಿಚಿತ್ರ ದೃಶ್ಯವು ಅವನನ್ನು ಚಕಿತಗೊಳಿಸಿತು. ಸ್ತ್ರೀಯೊಬ್ಬಳು, ಅಕ್ಕಪಕ್ಕದಲ್ಲಿ ಯಾರೂ ಇಲ್ಲದೆ ಕೇವಲ ಏಕಾಂಗಿಯಾಗಿ ಏನೋ ಚಿಂತಿಸಿಕೊಂಡಿರುವಂತೆ ಕಾಣುತ್ತಿತ್ತು. ಆ ಪ್ರಾಂತದಲ್ಲಿ ಗಂಗಾನದಿ ಒಂದು ಕೊಳವನ್ನುಂಟುಮಾಡಿತ್ತು. ಆ ಗಂಗಾ ಸರೋವರದಲ್ಲಿ ನೂರು ದಳಗಳಿರುವ ಒಂದು ಪದ್ಮಪುಷ್ಪವು ಕಾಣುತ್ತಿತ್ತು. ಆ ಪದ್ಮದ ದಕ್ಷಿಣ ದಿಕ್ಕಿನ ತೀರದಲ್ಲಿ



ಅದನ್ನು ನೋಡುತ್ತಾ ಅವಳು ನಿಂತಿದ್ದಳು. ಏಕವೀರನು ಅವಳ ಬಳಿಗೆ ಹೋಗಿ, "ಯಾರು ನೀನು ? ಏನೋ ಚಿಂತೆಯಲ್ಲಿರುವಿಯಲ್ಲಾ ? ನೀನು ಮಾನವಿಯೋ ? ದೇವತೆಯೋ ? ಏನು ನಿನ್ನ ಹೆಸರು ? ಯಾರು ನಿನ್ನ ತಂದೆ ? ಈ ನಿರ್ಜನ ಪ್ರದೇಶದಲ್ಲಿ ನಿನ್ನನ್ನು ಬಿಟ್ಟುಹೋದವರಾರು ? ಯಾರು ನಿನ್ನ ಗಂಡ ? ನಿನ್ನ ದುಃಖಕ್ಕೆ ಕಾರಣವೇನೆಂದು ಹೇಳಿದರೆ ಅದನ್ನು ನಿವಾರಿಸಲು ನಾನು ಪ್ರಯತ್ನಪಡುತ್ತೇನೆ. ನಿನ್ನ ದುಃಖಕ್ಕೆ ಕಾರಣರಾದವರು ಮಾನವರಾದರೂ, ದಾನವರಾದರೂ, ದೇವತೆಗಳೇ ಆದರೂ ನಾನು ನೋಡಿಕೊಳ್ಳುತ್ತೇನೆ. ನಿಃಶಂಕೆಯಿಂದ ಹೇಳು" ಎಂದನು. ಅವಳು ಹೀಗೆ ಹೇಳಲು ತೊಡಗಿದಳು :

"ಯಾವುದೋ ಒಂದು ಕಾರಣವಿಲ್ಲದೆ ಯಾರಿಗೂ ಏನೂ ಆಗದು. ಏನೋ ಒಂದು ಕಷ್ಟವು ಬಾರದೆ ಯಾರಿಗೂ ದುಃಖವು ಬಾರದು. ನಿನ್ನ ದೇಶವೇ



ಅಲ್ಲದ ಒಂದು ದೇಶವಿದೆ. ಅದಕ್ಕೆ ರಭ್ಯನೆಂಬವನು ರಾಜ. ಅವನು ತುಂಬಾ ಪುಣ್ಯಾತ್ಮನಾದ ರಾಜ. ರುಕ್ಮರೇಖೆ ಎಂಬವಳು ಅವನ ಹೆಂಡತಿ. ಆ ರಾಜ ದಂಪತಿಗಳಿಗೆ ಸಂತಾನವಿಲ್ಲದೆಯೇ ಕಾಲ ಕಳೆಯುತ್ತಿದ್ದಿತು. ಅವಳು ಗಂಡನೊಂದಿಗೆ, 'ಮಕ್ಕಳಿಲ್ಲದ ಬಾಳುವೆಗಿಂತ ಹೀನವಾದುದು ಹೆಂಗುಸಿಗೆ ಬೇರೊಂದಿಲ್ಲವಪ್ಪೇ' ಎಂದು ಗಳಗಳ ಅತ್ತಳು. ಆಗ ಆ ರಾಜನು ಬ್ರಾಹ್ಮಣರನ್ನು ನಿಯೋಜಿಸಿ ಸಂತಾನಕ್ಕಾಗಿಯೇ ಒಂದು ಯಜ್ಞ ಮಾಡಿಸಿದನು. ಆ ಯಜ್ಞದ ಅಗ್ನಿಕುಂಡದಿಂದ ಬಂಗಾರದ ಬೊಂಬೆಯಂತಹ ಹೆಣ್ಣು ಮಗುವೊಂದು ಹುಟ್ಟಿ ಬಂದಳು. ಯಜ್ಞದ ಹೋತಾರನಾದ ಮುಖ್ಯ ಪುರೋಹಿತನು ರಾಜನಿಗೆ ಅವಳನ್ನು ತೋರಿಸುತ್ತ 'ಈ ಬಾಲೆ ಏಕಾವಳಿ ಹಾರದೊಂದಿಗೆ ಹುಟ್ಟಿದ್ದಾಳೆ. ಅಗ್ನಿಪುತ್ರಿಯಾದ ಇವಳಿಗೆ ಏಕಾವಳಿ ಎಂತಲೇ ಹೆಸರು. ಇಂದಿನಿಂದ ಇವಳನ್ನು ಪುತ್ರನೆಂದೇ ತಿಳಿದು, ಗಂಡುಮಗನ ಹಾಗೆಯೇ ಬೆಳೆಯಿಸಿಕೋ. ಇವಳೇ ನಿನಗೆ ವಿಷ್ಣುಕೊಟ್ಟ ಪ್ರಸಾದ !' ಎಂದನು.

ಆಮಾತು ಕೇಳಿ ರಭ್ಯನು ತುಂಬಾ ಸಂತೋಷಪಟ್ಟು ಆ ಬಾಲೆಯನ್ನು ತನ್ನ ಹೆಂಡತಿಯಾದ ರುಕ್ಮರೇಖೆಗೆ ಒಪ್ಪಿಸಿದನು. ಅವಳು ಕೂಡಾ ತಾನು ಸ್ವತಃ ಮಗನನ್ನು ಹಡೆದೆನೆಂಬಷ್ಟು ಸಂತೋಷಪಟ್ಟಳು. ಅವರ ಪೋಷಣೆಯಲ್ಲಿ ಆ ಬಾಲೆ ಅವರ ಮಗನ ಹಾಗೆಯೇ ಬೆಳೆಯುತ್ತಾ ಬಂದಳು. ಆ ರಾಜನ ಮಂತ್ರಿಗೆ ಒಬ್ಬಳು ಮಗಳಿದ್ದಾಳೆ. ಅವಳೇ ನಾನು. ನನ್ನ ಹೆಸರು ಯಶೋವತಿ. ನಾವಿಬ್ಬರೂ ಒಂದೇ ವಯಸ್ಸಿನವರಾದುದರಿಂದ ರಾಜನು ನನ್ನನ್ನು ತನ್ನ ಮಗಳಿಗೆ ಪ್ರಿಯ ಸಖಿಯಾಗಿ ಇರಿಸಿದನು. ನಾವಿಬ್ಬರೂ ತುಂಬಾ ಪ್ರೇಮದಿಂದ ಪ್ರತಿಯೊಂದರಲ್ಲಿ ಕೂಡಿಯೇ ಇರುವೆವು. ರಾಜಕುಮಾರಿ ಏಕಾವಳಿಗೆ ಪದ್ಮಪುಷ್ಪಗಳೆಂದರೆ ತುಂಬಾ ಇಷ್ಟ. ಆದುದರಿಂದ ಅವಳು ದಿನಾ ನನ್ನನ್ನೂ ಇತರ ಗೆಳತಿಯರನ್ನೂ ಕರೆದುಕೊಂಡು ಗಂಗಾನದಿ ಕೊಳಕಟ್ಟಿಕೊಂಡಿರುವ ಕಮಲ ಸರೋವರಗಳಿಗೆ ಹೋಗುವಳು. ಪದ್ಮಗಳಿರುವ ಗಂಗಾ ಸರೋವರಗಳಲ್ಲಿ ಜಲಕ್ರೀಡೆಯಾಡುವಳು. ಗಂಗಾನದಿಯಲ್ಲಿ ಈಜುತ್ತಾ ಅಕ್ಕಪಕ್ಕದ ಸರೋವರಗಳಿಗೆ ಹೋಗುವಳು. ಅಷ್ಟು ದೂರ ಹೋಗಬಾರದೆಂದು ನಾನು ಎಷ್ಟು ಹೇಳಿದರೂ ಕೇಳುತ್ತಿದ್ದಿಲ್ಲ. ಆದುದರಿಂದ ನಾನು ಅವಳಿಗಿರುವ ಈ ಪದ್ಮ ಮೋಹವನ್ನು ಕುರಿತು ಅವಳ ತಂದೆಗೆ ಹೇಳಿದೆನು. ಆಗ ರಭ್ಯ ಮಹಾರಾಜನು ತನ್ನ ನಗರದೊಳಗೆ ಕಮಲ ಪುಷ್ಪಗಳಿರುವ ಅನೇಕ ಸರೋವರಗಳನ್ನು ನಿರ್ಮಿಸಿ ತನ್ನ ಕುಮಾರಿಯೊಂದಿಗೆ 'ಅಮ್ಮಾ ನಿನಗೆ ಪದ್ಮ ಜಲದಲ್ಲಿ ಕ್ರೀಡಿಸಬೇಕೆಂದು ತೋರಿದರೆ ಇವುಗಳಲ್ಲಿಯೇ ನೀರಾಡಿಕೊಂಡಿರು. ಮತ್ತೆಲ್ಲಿಗೂ ಹೋಗಬೇಡ' ಎಂದನು.

ಆದರೆ ಅವಳು ದೂರ ಪ್ರದೇಶಗಳಿಗೆ ಹೋಗುವುದನ್ನು ಬಿಡಲೇ ಇಲ್ಲ. ಆದುದರಿಂದ ರಾಜನು ಅವಳಿಗಾಗಿ ಆಯುಧಪಾಣಿಗಳಾದ ಭಟರ ರಕ್ಷಣೆಯ ಏರ್ಪಾಡು ಮಾಡಿದನು. ಅವಳು ದಿನಾ ತಂದೆಯೊಡನೆ ಹೇಳಿ, ನನ್ನನ್ನೂ ಇತರ ಗೆಳತಿಯರನ್ನೂ ಕರೆದುಕೊಂಡು ಗಂಗಾನದಿಗೆ ಬರುವಳು. ಹೀಗೆಯೇ ಒಂದುದಿನ ಬೆಳಿಗ್ಗೆ ಎಂದಿನಂತೆ ರಾಜಕುಮಾರಿಯೂ ನಾವೂ ಇಲ್ಲಿಗೆ ಬಂದೆವು. ಆಗ ಇಲ್ಲಿ ನಮಗಿಂತ ಮೊದಲೇ ರತೀದೇವಿ ಅಪ್ಸರಸಿಯರೊಂದಿಗೆ ಜಲಕ್ರೀಡೆಯಾಡಿಕೊಂಡಿದ್ದಳು. ನನ್ನ ಸಖಿ ಅವರೊಂದಿಗೆ ಕೂಡಿ ಆಡತೊಡಗಿದಳು.

ಆ ಸಮಯದಲ್ಲಿ ಕಾಲಕೇತು ಎಂಬ ಕೆಟ್ಟ ರಾಕ್ಷಸನು, ರಾಕ್ಷಸ ಪರಿವಾರದೊಂದಿಗೆ ಈ ದಾರಿಯಾಗಿ ಬಂದು, ನನ್ನ ಸಖಿಯಾದ ಏಕಾವಳಿಯ ಸೌಂದರ್ಯಾತಿಶಯವನ್ನು ನೋಡಿ, ಅವಳನ್ನು ಎತ್ತಿಕೊಂಡು ಹೋಗುವ ಉದ್ದೇಶದಿಂದ ಸಮೀಪಿಸಿದನು. ನಾನೇ ಮೊದಲು ಆ ರಾಕ್ಷಸನನ್ನು ನೋಡಿ 'ರಾಕ್ಷಸ ! ರಾಕ್ಷಸ !' ಎಂದು ಗಟ್ಟಿಯಾಗಿ ಕೂಗಿದೆ. ಆಗ ಸಖಿ ಏಕಾವಳಿ ತಿರುಗಿ ನೋಡಿ ಹೆದರಿ ಓಡುತ್ತಾ ಬಂದು ನಮ್ಮ ಎಲ್ಲಾ ಗೆಳತಿಯರ ಗುಂಪಿನೊಳಗೆ ತೂರಿಕೊಂಡಳು. ರಾಜಭಟರು ರಾಕ್ಷಸನನ್ನು ಇದಿರಿಸಿದರು. ರಾಕ್ಷಸನು ತನ್ನ ಗದೆಯಿಂದ ರಾಜಭಟರನ್ನೆಲ್ಲ ಹೊಡೆದೋಡಿಸಿ, ಜಗನ್ಮೋಹಿನಿಯಾದ ನನ್ನ ಸಖಿ ಏಕಾವಳಿಯನ್ನು ಎತ್ತಿಕೊಂಡು ಹೊರಟೇ ಬಿಟ್ಟನು. ನನ್ನ ಸಖಿ ಭೀತಿಯಿಂದ ರೋದಿಸತೊಡಗಿದಳು. ನಾನು ಏನೂ ತೋರದವಳಾಗಿ ಆ ರಾಕ್ಷಸನೊಂದಿಗೆ 'ಅವಳನ್ನು ಬಿಟ್ಟುಬಿಡು, ನನ್ನನ್ನು ಎತ್ತಿಕೊಂಡು ಹೋಗು' ಎಂದು ಮೊರೆಯಿಡುತ್ತಾ ಹಿಂದೆಯೇ ಹೋದೆ. ಅವನು ನನ್ನ ಮಾತನ್ನು ಕೇಳದೆ ಅವಳನ್ನು ಹೊತ್ತುಕೊಂಡು ಹೋಗುತ್ತಲೇ ಇದ್ದ. ನಾನು ಕೂಡಾ ಅವನ ಹಿಂದೆಯೇ ಹೋದೆ. ನನ್ನನ್ನು ನೋಡಿ ಏಕಾವಳಿ ಸ್ವಲ್ಪ ಸಮಾಧಾನಪಟ್ಟುಕೊಂಡಳು. ಅವಳು ನನ್ನನ್ನು ಕರೆದು ಆಲಿಂಗಿ





ಕೊಂಡು ಆಳುವುದನ್ನು ನೋಡಿ, ಕಾಲಕೇತು ದೂರದಲ್ಲಿರುವ ತನ್ನ ನಗರದ ವೈಭವಗಳನ್ನು ನನಗೆ ವರ್ಣಿಸುತ್ತ, 'ನೋಡಿದೆಯಾ ! ನನ್ನ ನಗರ ಸ್ವರ್ಗಕ್ಕೆ ಸಮಾನವಾಗಿದೆ. ನೀನು ಇವಳ ಪ್ರಿಯಸಖಿ ನಿಜವಾದರೆ ಇವಳಿಗೆ ಧೈರ್ಯವಾಗುವ ಹಾಗೆ ಹೇಳು. ನಾನು ಇವಳಿಗೆ ದಾಸನಾಗಿರುತ್ತೇನೆ. ನೀವಿಬ್ಬರೂ ಚಿಂತೆಬಿಟ್ಟು ಸಂತೋಷವಾಗಿರಿ' ಎಂದು ನನ್ನೊಂದಿಗೆ ಹೇಳಿ, ನನ್ನನ್ನು ಸಹಾ ಏಕಾವಳಿಯೊಂದಿಗೆ ರಥದಲ್ಲಿ ಕೂಡಿಸಿಕೊಂಡು ವೇಗವಾಗಿ ತನ್ನ ನಗರವನ್ನು ಸೇರಿದನು. ಅಲ್ಲಿ ಒಂದು ಬಿಳೀ ಬಣ್ಣದ ಮನೆ ನಮಗಾಗಿ ಸಿದ್ಧವಾಯಿತು. ಆ ಮನೆಯ ಸುತ್ತಲೂ ಬಿಚ್ಚುಗತ್ತಿಯ ರಾಕ್ಷಸರು ಕಾವಲಿದ್ದರು.

ಮಾರಣೇ ದಿನ ಆ ರಾಕ್ಷಸನು ಅಲ್ಲಿಗೆ ಬಂದು, ನನ್ನೊಂದಿಗೆ, 'ಹೇಗಾದರೂ ನಿನ್ನ ಸಖಿ ನನ್ನನ್ನು ಮದುವೆಯಾಗುವಂತೆ ಮಾಡಿಬಿಡು. ನನ್ನ ರಾಜ್ಯಕ್ಕೆ ಅವಳೇ ಅಧಿಕಾರಿಣಿ ಎಂದು ಹೇಳು. ನಾನು ಅವಳಿಗೆ ಸೇವಕನಾಗಿದ್ದು ಅವಳೇನು ಹೇಳಿದರೂ ಕೇಳುತ್ತೇನೆನ್ನು. ಏನು ಕೇಳಿದರೂ ಕೊಡುತ್ತೇನೆನ್ನು' ಎಂದನು.

ಅದಕ್ಕೆ ನಾನು 'ಮಹಾರಾಕ್ಷಸಾ. ನೀನು ಹೇಳಿದಂತೆ ನಡೆಸುವ ಸಾಮರ್ಥ್ಯ ನನಗಂತೂ ಇಲ್ಲ. ನೀನೇ ಅವಳೊಂದಿಗೆ ಮಾತಾಡಿಕೋ' ಎಂದು ಹೇಳಿದೆ. ಕಾಲಕೇತು ನನ್ನ ಸಖಿಯನ್ನು ನೋಡಿ, 'ನೋಡು ನಿನ್ನ ಈ ಪರಮದಾಸನನ್ನು. ನನ್ನನ್ನು ಅನುಗ್ರಹಿಸು. ನಿನ್ನ ಯೌವನವು ಶಾಶ್ವತವೇನಲ್ಲವಷ್ಟೆ ?' ಎಂದನು.

ಅದಕ್ಕೆ ನನ್ನ ಸಖಿ, 'ನನ್ನ ತಂದೆ ನನ್ನನ್ನು ಒಬ್ಬ ರಾಜಕುಮಾರನಿಗೆ ಕೊಡಬೇಕೆಂದು ಹೇಳಿಕೊಂಡಿದ್ದಾರೆ. ಅವನ ಹೆಸರು ಹೈಹಯನಂತೆ. ನಾನು ಆತನನ್ನೇ ವರಿಸಿಕೊಂಡವಳು. ಅಂದ ಮೇಲೆ ನಾನು ಇನ್ನೊಬ್ಬನ ಪತ್ನಿಯಾಗಲು ಹೇಗೆ ಸಾಧ್ಯ ? ಕನ್ಯೆಯರು ತಾಯಿತಂದೆಯರು ಎತ್ತಿಕೊಡುವವನ್ನೇ ಮದುವೆಯಾಗಬೇಕೇ ಹೊರತು ಸ್ವತಂತ್ರಳಾಗಿರಲು ಸಾಧ್ಯವಿಲ್ಲವಷ್ಟೆ ? ಎಂದಳು.

ಆದರೂ ಆ ದುಷ್ಟನು ತನ್ನ ಹಟಬಿಡಲಿಲ್ಲ. ಅವನ ನಗರವು ಪಾತಾಳ ಗರ್ಭದಲ್ಲಿ ರಾಕ್ಷಸರ ಬಲವಾದ ರಕ್ಷಣೆಯಲ್ಲಿ ಇರುವಂಥಾದ್ದು. ಅಲ್ಲಿಗೆ ಹೋಗಲು ಯಾರಿಗೂ ಸಾಧ್ಯವಿಲ್ಲ."

ಯಶೋವತಿ ಹೇಳಿದ ಈ ಸಮಾಚಾರವನ್ನೆಲ್ಲಾ ಕೇಳಿ ಏಕವೀರನು, "ಹೌದು. ಆ ರಾಕ್ಷಸನು ನಿನ್ನನ್ನೂ ನಿನ್ನ ಸಖಿಯನ್ನೂ ಪಾತಾಳದ ನಗರದಲ್ಲಿ ಇರಿಸಿದನೆಂದು ಹೇಳಿದಿಯಲ್ಲಾ ? ನೀನು ಮಾತ್ರ ಇಲ್ಲಿಗೆ ಹೇಗೆ ಬಂದೆ ? ಹೈಹಯನನ್ನು ನಿನ್ನ ಸಖಿ ಪ್ರೇಮಿಸಿದ ಸಮಾಚಾರ ಹೇಳಿದೆ. ನನ್ನ ಹೊರತು ಹೈಹಯನೆಂಬವನು ಪ್ರಪಂಚದಲ್ಲಿ ಇನ್ನೊಬ್ಬನಿಲ್ಲ. ನಿನ್ನ ರಾಜನು ಆ ಹುಡುಗಿಯನ್ನು ನನಗಾಗಿಯೇ

ವ್ಯಾಸಲಿರಿಸಿದ ಹಾಗೆ ಹೇಳುವೆಯಲ್ಲಾ? ಯಾವುದನ್ನೂ ಮುಚ್ಚುಮರೆ ಮಾಡದೆ ಹೇಳು. ಅದೆಲ್ಲಾ ನಿಜವಾದ ಪಕ್ಷದಲ್ಲಿ ಆ ರಾಕ್ಷಸನನ್ನು ಕೊಂದು ನಿನ್ನ ಸಖಿಯನ್ನು ಬಿಡಿಸಿ ತರುತ್ತೇನೆ. ಅಲ್ಲಿಗೆ ಹೋಗುವ ದಾರಿ ಹೇಳು. ಅಸಲು, ತನ್ನ ಮಗಳನ್ನು ರಾಕ್ಷಸನು ಕದ್ದುಕೊಂಡು ಹೋದ ಸಂಗತಿ ಅವಳ ತಂದೆಗೆ ಗೊತ್ತಿದೆಯೇ? ಗೊತ್ತಿದ್ದರೆ ಹುಡುಕುವ ಪ್ರಯತ್ನ ಮಾಡದೆ ಸುಮ್ಮನಿರುತ್ತಾನೆಯೆ? ಆತನು ಅಷ್ಟೊಂದು ಅಸಮರ್ಥನಾದ ರಾಜನೇ?" ಎಂದನು.

ಯಶೋವತಿ ಹೀಗೆಂದಳು: "ನಾನು ಚಿಕ್ಕವಳಾಗಿರುವಾಗ ಒಬ್ಬ ಸಿದ್ಧಪುರುಷನು ನನಗೆ ಒಂದು ಮಂತ್ರವನ್ನು ಉಪದೇಶಿಸಿದನು. ನಾನು ಆ ರಾಕ್ಷಸನ ನಗರದೊಳಗಿರುವಾಗ ಆ ಮಂತ್ರವು ನನ್ನ ನೆನಪಿಗೆ ಬಂದಿತು. ಆ ಮಂತ್ರದಿಂದ ಮಹಾದೇವಿಯನ್ನು ಧ್ಯಾನಿಸಿದರೆ ಒಳಿತಾಗುತ್ತದೆಂದು ತಿಳಿದಿದ್ದುದರಿಂದ ಅದನ್ನು ಜಪಿಸಿ ಧ್ಯಾನಮಾಡಿದೆ. ಆಗ ಕೆಂಪಗಿನ ಬಟ್ಟೆಗಳನ್ನು ಧರಿಸಿಕೊಂಡ ಮಹಾದೇವಿ ನನ್ನ ಕನಸಿನಲ್ಲಿ ಕಾಣಿಸಿ, 'ಯಶೋವತೀ, ನೀನು ಕೂಡಲೇ ಎದ್ದು ಗಂಗಾನದಿಯ ತೀರಕ್ಕೆ ಹೋಗು. ನಿನಗೆ ರಾಕ್ಷಸನ ಭಯವೇ ಬೇಡ. ಅಲ್ಲಿಗೆ ನನ್ನ ಭಕ್ತನಾದ ಹೈಹಯನು ಬರುತ್ತಾನೆ. ಅವನು ನಿನ್ನನ್ನು ನೋಡಿ, ರಾಕ್ಷಸನನ್ನು ಕೊಂದು ಏಕಾವಳಿಯನ್ನು ಬಿಡಿಸಿಕೊಳ್ಳುತ್ತಾನೆ. ಆಮೇಲೆ ಅವರಿಬ್ಬರಿಗೆ ಮದುವೆ ಮಾಡಿಸಿಬಿಡು' ಎಂದು ಹೇಳಿ ಅಂತರ್ಧಾನಳಾದಳು.

"ನಾನು ಧ್ಯಾನನಿದ್ರೆಯಿಂದೆದ್ದು ಏಕಾವಳಿಗೆ ಈ ಸಂಗತಿಯನ್ನು ಹೇಳಿದೆ. ಅವಳು ತುಂಬಾ ಸಂತೋಷಪಟ್ಟಳು. ನಾನು ಆ ಪರಾಶಕ್ತಿಯ ದಯೆಯಿಂದ ಹೀಗೆ ಇಲ್ಲಿಗೆ ಬರಲು ಸಾಧ್ಯವಾಯಿತು" ಎಂದಳು.




"ಸರಿ. ನನ್ನ ವಿಷಯ ಹೇಳಿಬಿಡುತ್ತೇನೆ. ಲಕ್ಷ್ಮೀದೇವಿಯೇ ನನ್ನನ್ನು ಹಡೆದ ತಾಯಿ. ಏಕವೀರನೆಂದು ನನ್ನ ಹೆಸರು. ನಿನ್ನ ಸಖಿಯ ಅಂದಚೆಂದಗಳನ್ನು ಕುರಿತು ನಿನ್ನ ಬಾಯಿಯಿಂದ ಕೇಳಿದಾಗಲೇ ನನಗೆ ಅವಳ ಮೇಲೆ ಮೋಹ ಉಂಟಾಯಿತು. ಅವಳು ನನ್ನನ್ನೇ ಪ್ರೇಮಿಸಿರುವಳೆಂದು ತಿಳಿದು ನಾನು ಅವಳ ದಾಸನಾಗಿ ಹೋದೆ. ನಿನ್ನ ಋಣವನ್ನು ಹೇಗೆ ತಾನೇ ತೀರಿಸಲಿ? ಅದಿರಲಿ, ಈ ನಿನ್ನ ಸಖಿ ಇರುವಲ್ಲಿಗೆ ಹೇಗೆ ಹೋಗಲಿ?" ಎಂದು ಕೇಳಿದನು ಏಕವೀರ.

"ರಾಜಾ, ನಿನಗೆ ಆ ದೇವಿಯ ದಿವ್ಯ ಮಂತ್ರವನ್ನು ಉಪದೇಶಿಸುತ್ತೇನೆ. ಅದರ ಸಹಾಯದಿಂದ ರಾಕ್ಷಸ ನಗರಕ್ಕೆ ಹೋಗಿ ಕಾಲಕೇತು ರಾಕ್ಷಸನನ್ನು ಕೊಂದು ರಾಜಕುಮಾರಿಯನ್ನು ಕರೆದುಕೊಂಡು ಬಾ" ಎಂದು ಯಶೋವತಿ "ತ್ರಿಲೋಕ ತಿಲಕ" ಎಂಬ ದಿವ್ಯ ಮಂತ್ರವನ್ನು ಅವನಿಗೆ ಉಪದೇಶ

ಮಾಡಿದಳು. ಅದರ ಸಹಾಯದಿಂದ ಭೂಮಿ ಬಾಯಿ ತೆರೆಯಲು, ಏಕವೀರನು ಯಶೋವತಿಯನ್ನೂ, ತನ್ನ ಸೈನ್ಯವನ್ನೂ ಕರೆದುಕೊಂಡು ಕಾಲಕೇತು ರಾಕ್ಷಸನ ನಗರಕ್ಕೆ ಹೋದನು. ದೊಡ್ಡದೊಂದು ಸೇನೆ ತನ್ನ ಮೇಲೆ ಏರಿಬರುವ ಸಮಾಚಾರ ಕಾಲಕೇತುವಿಗೆ ಗೊತ್ತಾಯಿತು.

ಆ ಸುದ್ದಿ ಕೇಳಿದ ಕೂಡಲೇ ಕಾಲಕೇತುವಿಗೆ ಮಹಾ ಕೋಪ ಉಂಟಾಯಿತು. ಅವನು ಏಕಾವಳಿಯ ಬಳಿಗೆ ಹೋಗಿ, "ಏನೇ, ನನ್ನ ಮೇಲೆ ಸೇನೆಯೊಂದಿಗೆ ಬರುವವನು ನಿನ್ನ ತಂದೆಯಾದ ಪಕ್ಷದಲ್ಲಿ, ಇದಿರಾಗಿ ಹೋಗಿ ಸುಸ್ವಾಗತ ಹೇಳಿ ಬರಮಾಡಿಕೊಳ್ಳುತ್ತೇನೆ. ಇನೊಬ್ಬನಾದ ಪಕ್ಷದಲ್ಲಿ ತತ್‌ಕ್ಷಣವೇ ಕೊಂದು ಬಿಡುತ್ತೇನೆ. ಹೇಳು, ಬರುವವನು ಯಾರು ?" ಎಂದನು.

"ನಿನ್ನ ನಿರ್ಬಂಧದಲ್ಲಿರುವ ನನಗೆ ಬರುವವರು ಯಾರೆಂದು ಹೇಗೆ ತಿಳಿಯುತ್ತದೆ ? ಸಾಮಾನ್ಯದವರಂತೂ ಇಲ್ಲಿಗೆ ಬರಲಾರರು. ನನ್ನ ತಂದೆಯೋ ಬಂಧುವೋ ಅಲ್ಲವೆಂದು ನಿಶ್ಚಯವಾಗಿ ಹೇಳಬಹುದು. ಯಾವನೇ ಆದರೂ ಬಲಶಾಲಿಯೇ ಆಗಿದ್ದಾನು. ಏಕೆ ಬರುವನೋ ಏನೋ ?" ಎಂದಳು ಏಕಾವಳಿ. ಅಷ್ಟರಲ್ಲಿ ದೂತರು ಬಂದು ಯುದ್ಧಕ್ಕೆ ಸಿದ್ಧನಾಗುವಂತೆ ಕಾಲಕೇತುವನ್ನು ಎಚ್ಚರಿಸಿದರು. ಕೂಡಲೇ ಕಾಲಕೇತು ರಥದ ಮೇಲೇರಿ ಯುದ್ಧರಂಗಕ್ಕೆ ಹೋದನು.

ಏಕವೀರನು ಕುದುರೆಯ ಮೇಲೆ ಕುಳಿತುಕೊಂಡು, ಎಂಟು ಸುತ್ತಲೂ ಒಮ್ಮೆಗೇ ಕಾಣಿಸುವಷ್ಟು ವೇಗದಿಂದ ಅವನೊಂದಿಗೆ ಯುದ್ಧಮಾಡಿದನು. ಸ್ವಲ್ಪಹೊತ್ತು ಯುದ್ಧವು ಘನ ಘೋರವಾಗಿ, ಏಕವೀರನ ಕೈಯ ಪೆಟ್ಟಿನಿಂದ ಕಾಲಕೇತು ರಾಕ್ಷಸನು ಸತ್ತು ಬಿದ್ದನು. ಅವನ ಸೇನೆಗಳು ದಿಕ್ಕಾಪಾಲು ಓಡಿದುವು.

ಯಶೋವತಿ ಓಡಿಹೋಗಿ ಏಕಾವಳಿಗೆ ಈ ವಾರ್ತೆಯನ್ನು ಹೇಳಿದಳು. ಆವರಿಬ್ಬರೂ ಕೂಡಿ ಏಕವೀರನ ಶಿಬಿರಕ್ಕೆ ಬಂದರು. ಅನಂತರ ಏಕವೀರನು ಅವರನ್ನೆಲ್ಲಾ ಕರೆದುಕೊಂಡು ಏಕಾವಳಿಯ ತಂದೆಯ ನಗರಕ್ಕೆ ಹೊರಟನು. ಅಲ್ಲಿ ಏಕಾವಳೀ ಏಕವೀರರ ವಿವಾಹವು ಅತಿವೈಭವದಲ್ಲಿ ನಡೆಯಿತು. ಅಲ್ಲಿಂದ ಏಕವೀರನು ತನ್ನ ಮಡದಿಯನ್ನು ಕರೆದುಕೊಂಡು ತನ್ನ ನಗರಕ್ಕೆ ಬಂದು ಸುಖವಾಗಿ ರಾಜ್ಯವಾಳಿಕೊಂಡಿದ್ದನು.

ಏಕವೀರನ ಮಗನ ಹೆಸರು ಕೃತವೀರ್ಯ. ಕೃತವೀರ್ಯನ ಮಗನೇ ಕಾರ್ತವೀರ್ಯ. ಈರೀತಿಯಾಗಿ ಹೈಹಯ ವಂಶವು ತುಂಬ ಪ್ರಸಿದ್ಧಿಯಾಗಿ ವರ್ಧಿಸಿದೆ.





# ದೇವೀಭಾಗವತ

ಒಂದಾನೊಂದು ದಿನ ನಾರದ ಮುನಿ ಲೋಕ ಸಂಚಾರ ಮಾಡುತ್ತ, ವ್ಯಾಸಮುನಿಯ ಆಶ್ರಮಕ್ಕೆ ಬಂದನು. ಎಲ್ಲಿಗೆಂದರಲ್ಲಿಗೆ ಆಕಸ್ಮಿಕವಾಗಿ ಆಗಮಿಸುವವನಾದ ನಾರದನನ್ನು ನೋಡಿ, ವ್ಯಾಸನು ಭಕ್ತಿಪೂರ್ವಕವಾಗಿ ಅರ್ಘ್ಯಪಾದ್ಯಾದಿಗಳನ್ನಿತ್ತು ಗೌರವಿಸಿ ಕುಳಿತುಕೊಳ್ಳಿಸಿ, ಕುಶಲಮಾತುಗಳನ್ನಾಡಿದನು. ಬಳಿಕ ವ್ಯಾಸನು ತನ್ನ ಚಿಂತೆಯನ್ನು ಕುರಿತು ಹೇಳಲು ತೊಡಗಿ, " ನಾರದ ಮಹಾತ್ಮಾ, ಸಂಸಾರದಲ್ಲಿ ಸುಖವೆಂಬುದು ಸ್ವಲ್ಪ ಕೂಡಾ ಇಲ್ಲವೇನು ? " ಎಂದು ಪ್ರಶ್ನಿಸಿದನು. ಹಾಗೆಯೇ ತನ್ನ ಅನುಭವವನ್ನೆಲ್ಲಾ ಒಂದೊಂದಾಗಿ ನಾರದನ ಮುಂದೆ ತೋಡಿಕೊಂಡು, ತನ್ನ ಪ್ರಶ್ನೆಯ ಕಾರಣವನ್ನೂ ವಿವರಿಸಿದನು.

ವ್ಯಾಸನು ಹುಟ್ಟಿದ ಕೂಡಲೇ ತಾಯಿಬಿಟ್ಟು ಹೋಗಿಬಿಟ್ಟಳು. ಅವನು ತಪಸ್ಸು ಮಾಡಿಕೊಂಡೇ ಶಿವನ ದಯದಿಂದ ಮಗನನ್ನು ಸಂಪಾದಿಸಿಕೊಂಡರೂ, ಆ ಮಗನು ತಂದೆಯನ್ನು ದುಃಖದಲ್ಲಿ ಮುಳುಗಿಸಿ ತನ್ನ ಪಾಡಿಗೆ ಹೊರಟುಹೋದನು. ಈ ವಿಧವಾಗಿ ಹಿಂದಿನವರಿಂದಲೂ ಮುಂದಿನವರಿಂದಲೂ ವಿಸರ್ಜಿಸಲ್ಪಟ್ಟು ವಿರಕ್ತನಾಗಿ ಹೋದ ವ್ಯಾಸನಿಗೆ ಸಂಸಾರ ಬಂಧನದಲ್ಲಿ ಸಿಕ್ಕಿಕೊಳ್ಳುವ ಅಗತ್ಯ ಬಂದಿತು. ಆತನನ್ನು ಹಡೆದ ತಾಯಿಯಾದ ಸತ್ಯವತಿ ಶಂತನುವನ್ನು ಮದುವೆಯಾಗಿ ಮಕ್ಕಳನ್ನು ಪಡೆದು ಆ ಮೇಲೆ ಮೊದಲು ಗಂಡನನ್ನೂ, ಅನಂತರ ತನ್ನ ಮಕ್ಕಳನ್ನೂ ಕಳೆದುಕೊಂಡಳು. ಆ ಸಂದರ್ಭದಲ್ಲಿ ಅವಳ ಅಪೇಕ್ಷೆಯಂತೆ ವ್ಯಾಸನು ಅವಳ ಸೊಸೆಯಂದಿರ ಹೊಟ್ಟೆಯಲ್ಲಿ ಮಕ್ಕಳಾಗುವಂತೆ ಮಾಡಿದನು. ಆ ಪುತ್ರರಲ್ಲಿ ಒಬ್ಬನು ಕುರುಡ ಧೃತರಾಷ್ಟ್ರ; ಇನ್ನೊಬ್ಬ ಬಿಳಿಚಿಗಟ್ಟಿದ ಪಾಂಡು. ಮೂರನೆಯ ವಿದುರನು ಹುಟ್ಟಿದ್ದು ದಾಸಿಯ ಹೊಟ್ಟೆಯಲ್ಲಿ. ಆ ಮೂವರು ಮಕ್ಕಳೂ ವ್ಯಾಸನ ಪುತ್ರರೇ ಆದರೂ, ವ್ಯಾಸನಿಗೆ ಪಿಂಡಪ್ರದಾನ ಮಾಡಲು ಅವರು ಮೂವರೂ ಉಪಯೋಗಕ್ಕೆ ಬರುವವರಲ್ಲ !

ಆ ಮೇಲೆ ವ್ಯಾಸನ ಸಂತತಿಯವರಾದ ಧೃತರಾಷ್ಟ್ರನೂ, ಪಾಂಡುವೂ ಇನ್ನೊಂದು ಬಗೆಯವರನ್ನು

೩೩. ನಾರದ ಸಂಸಾರ



ಪಡೆದರು. ಆ ದಾಯಾದಿಗಳ ಜಗಳದಲ್ಲಿ ವ್ಯಾಸನು ಆಗಾಗ ತಲೆದೂರಿಸಬೇಕಾಗಿಬಂತು. ಪಾಂಡುಪುತ್ರರು ಅರಣ್ಯವಾಸ ಮಾಡುತ್ತ ನಾನಾಕಷ್ಟಗಳಿಗೆ ಗುರಿಯಾಗುವುದನ್ನು ನೋಡಬೇಕಾಯಿತು.

ಈ ವಿಧವಾಗಿ ವ್ಯಾಸನು ಸುಖದುಃಖಗಳ ಮಧ್ಯೆ ತಾನು ಹೇಗೆ ನಜ್ಜುಗುಜ್ಜಾದೆನೆಂಬುದನ್ನು ಹೇಳಿ, "ನಾರದ ಮಹಾತ್ಮಾ, ಹೀಗೆ ಲೋಕದಲ್ಲಿ ತಂದೆ ಮಕ್ಕಳು, ಮೊಮ್ಮಕ್ಕಳು ಎಂಬ ಭ್ರಾಂತಿಯಿಂದ ನಿವಾರಣೆಯಾಗಲು ಸಾಧ್ಯವೇ ಇಲ್ಲವೆ? ಈ ಸಂಸಾರದಲ್ಲಿ ಸಿಕ್ಕಿಕೊಳ್ಳದಿದ್ದರೆ ಪ್ರಪಂಚವೇ ನಡೆಯದೆಂಬುದೇನೋ ನಿಜವಾದರೂ ಸಂಸಾರದಲ್ಲಿ ಸಿಕ್ಕಿದವನ ಮನಸ್ಸಿಗೆ ಸುಖ ಹೇಗೆ ಬರುತ್ತದೆ? ನೀನಾದರೂ ಸ್ವಲ್ಪ ದಯಮಾಡಿ ಹೇಳಬಲ್ಲೆಯಾ?" ಎಂದು ಕೇಳಿದನು.

ಅದಕ್ಕೆ ನಾರದನು ಮುಗುಳು ನಗುತ್ತ, "ಮಾಯಾ ಮೋಹಗಳಿಂದ ಸಂಸಾರದಲ್ಲಿ ಸಿಕ್ಕಿಕೊಳ್ಳುವುದೇ ಮನಸ್ಸಿಗೊಂದು ಸುಖ. ಸಂಸಾರದಲ್ಲಿ ಸಿಕ್ಕಿ ಮೋಹಪರವಶನಾಗದ ಪ್ರಾಣಿ ಯಾರಿದ್ದಾರೆ? ಎಲ್ಲಿದ್ದಾರೆ? ಹರಿಹರಬ್ರಹ್ಮಾದಿಗಳು ಕೂಡ ಮೋಹದಲ್ಲಿ ಬಿದ್ದುದರಿಂದಲೇ ನನ್ನನ್ನು ನೋಡಿ ದೊಡ್ಡ ಜ್ಞಾನಿ ಎಂದು ಮೆಚ್ಚಿಕೊಳ್ಳುತ್ತಾರೆ. ಅಂತಲೇ ನೀವುಕೂಡಾ ನನ್ನನ್ನು ಕೇಳುವಿರಿ. ಆದರೆ ಅದು ನಿಜವಲ್ಲ. ಒಂದೆರಡು ಸಾರಿ ನಾನು ಕೂಡಾ ಮೋಹದಲ್ಲಿ ಬಿದ್ದು ಹೆಂಡತಿಗಾಗಿ ಎಂತಹ ಪಾಡುಪಟ್ಟಿದ್ದೇನೆ ಗೊತ್ತಾ? ಅದನ್ನು ಕೇಳಿದರೆ ಏನು ಹೇಳುವಿರೋ?" ಎಂದು ತಾನು ಅನುಭವಿಸಿದ ಸಂಸಾರದ ವಿಷಯವನ್ನು ಕುರಿತು ವ್ಯಾಸನಿಗೆ ವಿವರಿಸಿ ಹೇಳಿದನು:

ಒಂದುಸಾರಿ ನಾರದನೂ, ಅವನ ಸೋದರಳಿಯನಾದ ಪರ್ವತನೂ ಭೂಲೋಕ ಸಂಚಾರ ಮಾಡುತ್ತ ಪುಣ್ಯಕ್ಷೇತ್ರಗಳನ್ನೂ, ಋಷ್ಯಾಶ್ರಮಗಳನ್ನೂ ನೋಡುತ್ತ ತಿರುಗುತ್ತಿದ್ದರು. ಆಗ ಅವರು ತಮ್ಮೊಳಗೆ ತಾವು ಒಂದು ನಿರ್ಣಯ ಮಾಡಿಕೊಂಡಿದ್ದರು. ಅದೇನೆಂದರೆ, ತಮ್ಮ ಮನಸ್ಸಿನೊಳಗೆ ನಡೆಯುವ ಆಲೋಚನೆಗಳನ್ನು ಮುಚ್ಚಿಟ್ಟುಕೊಳ್ಳದೆ ಒಬ್ಬರು ಇನ್ನೊಬ್ಬರೊಂದಿಗೆ ಹೇಳಲೇಬೇಕು. ಇಬ್ಬರೊಳಗೆ ಯಾವ ಮುಚ್ಚುಮರೆಯೂ ಇರಕೂಡದು.

ಆ ರೀತಿಯಾಗಿ ಅವರು ಸಂಚಾರ ಮಾಡಿಕೊಂಡಿರುವಾಗ ಬಿಸಿಲು ಕಾಲವು ಹೋಗಿ ಮಳೆಗಾಲವು ಪ್ರಾರಂಭವಾಯಿತು. ನಾಲ್ಕು ತಿಂಗಳವರೆಗೆ ನಡೆಯುವ ಮಳೆಗಾಲವನ್ನು ಕಳೆಯಲು ಎಲ್ಲೋ ಒಂದು ಜಾಗದಲ್ಲಿ ಇದ್ದುಬಿಡಬೇಕಾಗಿತ್ತು. ಆಗ ಅವರು ಒಂದು ನಗರವನ್ನು ತಲಪಿದ್ದರು. ಅಲ್ಲಿ ಸಂಜಯನೆಂಬವನು ರಾಜನಾಗಿದ್ದನು.

ಚಾತುರ್ಮಾಸ್ಯ ಕಳೆಯಲು ಆ ರಾಜನ ಮನೆಯೇ ಒಳ್ಳೆಯದೆನಿಸಿತು ಅವರಿಗೆ. ರಾಜನೊಂದಿಗೆ ತಮ್ಮ ಸಂಗತಿಯನ್ನು ಹೇಳಿಕೊಂಡ ಕೂಡಲೇ ರಾಜನು ಸಂತೋಷದಿಂದ ಅವರು ಅಲ್ಲಿ ತಂಗಲು ಒಪ್ಪಿ

ಕೊಂಡನು. ತಾವು ಭಿಕ್ಷಾಟನೆಯಿಂದ ದಿನಗಳೆಯುತ್ತೇವೆಂದರೂ ರಾಜನು ಅವರಿಗೆ ಒತ್ತಾಯಪೂರ್ವಕ ಎಲ್ಲಾ ಸೌಕರ್ಯಗಳನ್ನೂ ಒದಗಿಸಿದನು. ರಾಜನ ಉಪಚಾರಗಳು ಅವರಿಗೆ ಹಿತವೆನಿಸಿತು. ರಾಜನ ಮನೆಯಲ್ಲಿ ಅವರು ಸುಖವಾಗಿರ ತೊಡಗಿದರು. ರಾಜನ ಮಗಳು ಮದಯಂತಿ ತಾನೇ ಸ್ವತಃ ಅವರಿಗೆ ಪರಿಚರ್ಯೆಗಳನ್ನು ಮಾಡ ತೊಡಗಿದಳು. ಅವರ ಸ್ನಾನಕ್ಕೂ, ಭೋಜನಕ್ಕೂ, ಮಲಗಲಿಕ್ಕೂ ಅವಳು ಸೊಗಸಾದ ಏರ್ಪಾಡುಗಳನ್ನು ಬಹಳ ಶ್ರದ್ಧೆಯಿಂದ ಇಬ್ಬರೊಳಗೆ ಸ್ವಲ್ಪವೂ ಪಕ್ಷಪಾತವಿಲ್ಲದಂತೆ ಮಾಡುತ್ತಿದ್ದಳು. ಅರಮನೆಯಲ್ಲಿ ಅವರಿಗೆ ವೇದಾಧ್ಯಯನಗಳಿಂದಲೂ, ಗಾನ ವಿನೋದಗಳಿಂದಲೂ ಒಳ್ಳೆಯ ರೀತಿಯಲ್ಲಿ ಕಾಲಕ್ಷೇಪವಾಗುತ್ತಿತ್ತು.



ಕ್ರಮವಾಗಿ ಅದರಲ್ಲಿ ವ್ಯತ್ಯಾಸವಾಗ ತೊಡಗಿತು. ಮೆಲ್ಲಮೆಲ್ಲನೆ ಮದಯಂತಿಗೆ ನಾರದನ ಮೇಲೆ ವಿಶೇಷ ಶ್ರದ್ಧೆ ಬರತೊಡಗಿ ಮೋಹಕ್ಕೆ ತಿರುಗಿತು. ಆತನ ವೀಣಾನಾದವೂ, ಸಾಮವೇದದ ಗಾನವೂ ಅವಳನ್ನು ತುಂಬಾ ಆಕರ್ಷಿಸಿದುವು. ಪ್ರೇಮಪೂರಿತವಾದ ಅವಳ ಸೇವಾ ಶುಶ್ರೂಷೆಗಳು ನಾರದನನ್ನು ಕೂಡಾ ಬಲವಾಗಿ ಆಕರ್ಷಣೆಮಾಡಿದುವು. ಅವಳು ಸಹಜವಾಗಿಯೇ ಇಬ್ಬರಿಗೂ ಒದಗಿಸುವ ಸೌಕರ್ಯಗಳಲ್ಲಿ ನಾರದನ ಮೇಲೆಯೇ ಹೆಚ್ಚಿನ ಪಕ್ಷಪಾತ ತೋರಿಸ ತೊಡಗಿದಳು. ಸ್ನಾನಮಾಡಲು ನಾರದನಿಗೆ ಸುವಾಸನೆಯ ಬಿಸಿ ನೀರಾದರೆ, ಪರ್ವತನಿಗೆ ಬರಿ ತಣ್ಣೀರೇ ಗತಿಯಾಯಿತು. ಊಟದಲ್ಲಿ ನಾರದನಿಗೆ ಗಟ್ಟಿ ಮೊಸರು ಬಿದ್ದರೆ, ಪರ್ವತನಿಗೆ ಮಜ್ಜಿಗೆಯೇ. ಮಲಗಲು ಹಾಸಿಗೆಗಳು ಕೂಡಾ ಇಬ್ಬರಿಗೂ ಒಂದೇ ವಿಧವಾಗಿರುತ್ತಿದ್ದಿಲ್ಲ. ಅವಳು ನಾರದನ ಕಡೆಗೆ ನೋಡುವ ನೋಟವೋ ಹೇಳ ತೀರದು! ಇದೆಲ್ಲಾ ಬೂದಿಯೊಳಗಿನ ಬೆಂಕಿಯ ಹಾಗೆ ಎಷ್ಟು ದಿನ ಮುಚ್ಚುಮರೆಯಾಗಿರಲು ಸಾಧ್ಯ?

ಹೀಗೆ ನಾರದ ಪರ್ವತರಿಗೆ ಮದಯಂತಿ ಮಾಡುವ ಪರಿಚರ್ಯೆಗಳಲ್ಲಿ ಎಷ್ಟೋ ವ್ಯತ್ಯಾಸಗಳು ಹೆಡೆಯೆತ್ತಿ ಕಾಣುತ್ತಿರಲು, ಪರ್ವತನು ನಾರದನೊಂದಿಗೆ ಏಕಾಂತದಲ್ಲಿ, "ಈ ರಾಜಕುಮಾರಿಯ ರೀತಿ ನೀತಿ ಪ್ರವರ್ತನೆಗಳನ್ನು ನೋಡಿದರೆ ನಿನ್ನನ್ನು ವರಿಸಿದವಳ ಹಾಗೆ ಕಾಣುತ್ತದಲ್ಲಾ? ನಿನಗೆ ಕೂಡಾ ಅವಳ ಮೇಲೆ ಮೋಹ ಬಂದ ಹಾಗಿದೆ. ಹೀಗಿರುವಾಗ ನಮ್ಮೊಳಗೆ ರಹಸ್ಯ ಮುಚ್ಚಿಟ್ಟುಕೊಳ್ಳಬಾರದೆಂಬ ನಿಯಮವನ್ನು ಮರೆತೆಯೇನು? ಮುಚ್ಚುಮರೆ ಸಾಕು, ನಿಜ ಹೇಳಿಬಿಡು! ನೀನು ಹೇಳಿದ ಮಾತಿನಂತೆ ನಡೆದಿಲ್ಲ, ಹೌದಾ?" ಎಂದನು.

ನಾರದನು ಸ್ವಲ್ಪ ನಾಚಿಕೊಂಡವನಾಗಿ, "ಪರ್ವತ ಮುನೀಂದ್ರಾ! ಅಡಗಿಸಿಡಲು ಏನಿದೆ? ರಾಜಕುಮಾರಿ ನನ್ನನ್ನು ಮೆಚ್ಚಿದ್ದಾಳೆ. ನಾನೂ ಅವಳನ್ನು ಪ್ರೇಮಿಸುತ್ತೇನೆ. ಇನ್ನೇನಿದೆ? ಈಗ ನಿಜ ಹೇಳಿಬಿಟ್ಟಿದ್ದೇನೆ. ಆಯಿತಷ್ಟೆ?" ಎಂದನು.



ಆ ಮಾತು ಕೇಳಿ ಪರ್ವತನು ಕೋಪದಿಂದ, "ನಾನು ಕೇಳಿದ ಮೇಲೆ ಹೇಳಿ, ಆಯಿತಷ್ಟೇ ಅನ್ನುವಿಯಾ? ನಿಯಮ ತಪ್ಪಿ ನನ್ನನ್ನು ಮೋಸ ಪಡಿಸಿದ ನಿನ್ನ ಮೋರೆ ವಾನರಮುಖವಾಗಲಿ!" ಎಂದು ಶಪಿಸಿದನು.

ನಾರದನಿಗೂ ಕೋಪ ಉಕ್ಕಿತು. "ಈ ಒಂದು ಸಣ್ಣ ತಪ್ಪಿಗೆ ನನ್ನನ್ನು ಶಪಿಸಿದ ನಿನಗೆ ಸ್ವರ್ಗಕ್ಕೇರುವ ಶಕ್ತಿ ಹೋಗಲಿ. ಭೂಮಿಯಲ್ಲೇ ಸುತ್ತಿಕೊಂಡಿರು!" ಎಂದು ಇದಿರು ಶಾಪವಿತ್ತನು.

ಹೀಗೆ ಶಾಪ ಪಡೆದ ಪರ್ವತನು ಅಲ್ಲಿ ನಿಲ್ಲದೆ ಸಟಕ್ಕನೆ ಹೊರಟುಹೋದನು. ನಾರದನಿಗೆ ಕೋತಿಯ ಮುಖವೂ ಉಂಟಾಯಿತು.

ಆದರೂ ಮದಯಂತಿಯ ನಡೆವಳಿಕೆಯಲ್ಲಿ ಏನೂ ಹೆಚ್ಚು ಕಡಿಮೆಯಾಗಲಿಲ್ಲ. ಶಾಪದ ವಿಷಯ ತಿಳಿದು ಅನುತಾಪಗೊಂಡು ನಾರದನ ಮೇಲೆ ಇನ್ನಿಷ್ಟು ಪ್ರೇಮವೇ ಉಕ್ಕಿತು ಅವಳಲ್ಲಿ. ಅವಳು ನಾರದನ ವೀಣಾಗಾನವನ್ನು ಕೇಳಿ ಆನಂದಿಸುತ್ತ, ಅವನಿಗೆ ಆದರದಿಂದ ಶುಶ್ರೂಷೆಗಳನ್ನು ಮಾಡುತ್ತಲೇ ಇದ್ದಳು. ತನ್ನ ಸೋದರಳಿಯನಾದ ಪರ್ವತನು ಹೊರಟು ಹೋದುದಕ್ಕೆ ನಾರದನಿಗೆ ತುಂಬಾ ಖೇದವೆನಿಸಿತು.

ಹೀಗಿರುವಾಗ ಸಂಜಯರಾಜನು ತನ್ನ ಕುಮಾರಿಗೆ ಸ್ವಯಂವರ ಮಾಡಬೇಕೆಂದು ನಿಶ್ಚಯಿಸಿ, ತನ್ನ ಮಂತ್ರಿಯೊಂದಿಗೆ, "ಮಗಳಿಗೆ ಮದುವೆಮಾಡಬೇಕು. ಅವಳ ಸೌಂದರ್ಯಕ್ಕೆ ತಕ್ಕ ಸೌಂದರ್ಯವೂ ಗುಣವೂ, ಕುಲವೂ ಕೂಡಿದವರನ್ನು ಹುಡುಕಿರಿ" ಎಂದನು.

"ಮಹಾರಾಜರೇ. ನೀವು ಹೇಳುವಂತಹ ವರಂದಿರು ಅನೇಕಮಂದಿ ಇರುತ್ತಾರೆ. ಅವರಲ್ಲಿ ನಿಮಗೆ ಹಿಡಿಸಿದ ವರನಾರೆಂಬುದನ್ನು ನೀವೇ ನಿರ್ಣಯಿಸುವುದು ಒಳ್ಳೆಯದು." ಎಂದನು ಮಂತ್ರಿ.

ಮಂತ್ರಿಯ ಮಾತು ನಿಜವೇ. ತನಗೆ ಗೊತ್ತಿರುವ ವರಂದಿರು ಮಂತ್ರಿಗೂ ಗೊತ್ತಿದೆ. ಅವರಲ್ಲಿ ಯಾವನು ಯೋಗ್ಯನು?

ಹೀಗೆ ರಾಜನು ಮದುವೆಯ ಪ್ರಯತ್ನದಲ್ಲಿರುವುದು ಮದಯಂತಿಗೆ ತಿಳಿಯಿತು. ಮದಯಂತಿ ತನ್ನ ದಾದಿಯ ಮೂಲಕ, ತಾನು ನಾರದನನ್ನು ವರಿಸಿದ್ದೇನೆಂದೂ, ಇನ್ನೊಬ್ಬನನ್ನು ಮದುವೆಯಾಗಲಾರೆನೆಂದೂ, ವರಾನ್ವೇಷಣೆಯ ಶ್ರಮ ಬೇಡವೆಂದೂ ತಂದೆಗೆ ತಿಳಿಯಪಡಿಸಿದಳು.

ಮದಯಂತಿಯ ದಾದಿ ಹೋಗಿ ಸಂಜಯರಾಜನ ಹತ್ತಿರ ಆ ಸಂಗತಿಯನ್ನು ಹೇಳಿದಾಗ ಆತನ ಪತ್ನಿ ಕೈಕೇಯಿ ಕೂಡಾ ಅಲ್ಲಿದ್ದಳು. ರಾಜನು ಅವಳನ್ನು ನೋಡಿ, "ನಮ್ಮ ಹುಡುಗಿ ಆ ಕೋತಿ ಮೋರೆಯವನನ್ನು ಹೇಗೆ ವರಿಸಿದಳು? ಅವನು ನಮ್ಮ ಮಗಳಿಗೆ ಯಾವ ರೀತಿಯಲ್ಲಿ ತಕ್ಕವನಾಗಬಲ್ಲನು? ಅವನಿಗೆ ಮಗಳನ್ನು ಕೊಡುವುದಾದರೂ ಹೇಗೆ? ಬುದ್ಧಿಯಿಲ್ಲದೆ ಸಣ್ಣ ಹುಡುಗಿ ತಪ್ಪು ನಿರ್ಣಯಮಾಡಿಬಿಟ್ಟರೆ ಅದನ್ನು ಸರಿತಿದ್ದಬೇಕಾದುದು ನಮ್ಮ ಕರ್ತವ್ಯ.

ಅವನೊಬ್ಬ ತಿರುಗೊಳಿಯಾದ ಭಿಕ್ಷುಕನೆಂಬುದನ್ನು ಮಗಳ ಮನಸ್ಸಿಗೆ ತಿಳಿಯುವಂತೆ ಹೇಳು. ಅವಳಿಗೆ ಹಿಡಿದ ಹುಚ್ಚನ್ನು ಬಿಡಿಸು" ಎಂದನು.

ಕೈಕೇಯಿ ಏಕಾಂತದಲ್ಲಿ ತನ್ನ ಮಗಳನ್ನು ನೋಡಿ, "ಅಮ್ಮಾ, ನೀನು ಜಗಜಗಿಸುವ ಮೃದು ಕೋಮಲ ಶರೀರದವಳು. ಆ ತಿರುಗೊಳಿ ನಾರದ ಧೂಳು ಮಣ್ಣು ಬಡೆದ ಮೊರಟು ಶರೀರದವನು. ನಿನ್ನ ಮುಖವೆಷ್ಟು ಸುಂದರ! ಅವನದು ಸಾಕ್ಷಾತ್ ಕೋತಿಮೂತಿ! ಅಂಥವನನ್ನು ಹೇಗಮ್ಮಾ ಮೆಚ್ಚಿದೆ? ಅದು ಹೋಗಲಿ. ಅವನು ಯಾವಾಗಲೂ ತಿರುಗಾಡುತ್ತಾ ಭಿಕ್ಷೆಯೆತ್ತಿ ಬದುಕಿಕೊಂಡಿರುತ್ತಾನೆ. ಇಂಥವನನ್ನೋ ನೀನು ವರಿಸುವುದು? ನಿನ್ನ ಈ ಬುದ್ಧಿಯಿಲ್ಲದ ಕೆಲಸ ನೋಡಿ ಅಪ್ಪ ಬಹಳ ನೊಂದುಕೊಂಡಿದ್ದಾರೆ ಗೊತ್ತಾ? ಯಾರಾದರೂ ಎಳೆಯ ವೀಳ್ಯದೆಲೆಯನ್ನು ತೆಗೆದುಕೊಂಡು ಹೋಗಿ ಒಂಟೆಗೆ ತಿನ್ನಿಸುವರೇ? ನಿನ್ನನ್ನು ಆ ನಾರದನಿಗೆ ಕೊಟ್ಟು ಮದುವೆ ಮಾಡಿದರೆ ನಮ್ಮನ್ನು ನೋಡಿ ಎಲ್ಲರೂ ನಗಲಾರರೇ? ನಿನಗೆ ಹುಚ್ಚು ಹಿಡಿಯಿತೇನೋ ಎಂದು ಅನುಮಾನಿಸುವ ಕಾರ್ಯಮಾಡಬೇಡ. ಬಿಡಮ್ಮಾ ಈ ಯೋಚನೆ" ಎಂದು ಬಗೆಬಗೆಯಾಗಿ ಬೋಧಿಸಿದಳು.

ಆದರೆ ಸಂಗೀತ ವ್ಯಾಮೋಹ ತುಂಬಿದವಳಾದ ಮದಯಂತಿ, ತನ್ನ ಮನಸ್ಸನ್ನು ಸ್ವಲ್ಪವೂ ಚಂಚಲಗೊಳಿಸದೆ, "ಅಮ್ಮಾ, ಮನುಷ್ಯನು ಕೇವಲ ಶುಂಠನಾಗಿದ್ದರೆ ಅವನ ಮುಖವೂ ಮೂಗೂ ಚೆನ್ನಾಗಿದ್ದು, ದೊಡ್ಡ ರಾಜ್ಯವೂ ಧನವೂ ಬೇಕಾದಷ್ಟಿದ್ದು ಏನು ಲಾಭ ಹೇಳು? ಈ ನಾರದನಂತಹ ಸಂಗೀತ ಪ್ರವೀಣನಿಗೆ ಮುಖವೂ, ರಾಜ್ಯವೂ, ಧನವೂ ಏತಕ್ಕೆ ಬೇಕು? ಈತನ ಗಾನರಸ ಹರಡಿಬಿಟ್ಟರೆ ಜಿಂಕೆಗಳೂ, ಪಕ್ಷಿಗಳೂ ಪರವಶವಾಗುತ್ತವೆ. ಇವನಂತಹ ಗಾಯಕನು ಮೂರು ಲೋಕಗಳಲ್ಲಿಯೂ ಇನ್ನೊಬ್ಬ



ನಿಲ್ಲ. ರಸಜ್ಞತೆ ಇಲ್ಲದವನನ್ನು ಮದುವೆಮಾಡಿಕೊಂಡರೆ ಪ್ರತಿಕ್ಷಣವೂ ಸಾವಿಗೆ ಸಮಾನವಾಗಿರುತ್ತೆ. ರಸಜ್ಞನಾದವನ ಪತ್ನಿಯಾದರೆ ಜೀವಿತವಷ್ಟೂ ಆನಂದವೇ! ಸರ್ವಜ್ಞಾನಿಯಾದವನು ಸಾಧಾರಣ ಮನುಷ್ಯನಾದರೂ ದೇವತೆಗಳಿಗೆ ಸಮಾನನಲ್ಲವೇನಮ್ಮಾ? ಪಶುಪಕ್ಷಿಗಳನ್ನು ಕೂಡಾ ಆನಂದದಲ್ಲಿ ಓಲಾಡಿಸುವಂತಹ ಸಂಗೀತವನ್ನು ಆಸ್ವಾದಿಸುವುದೆಂದರೆ ಯಾರಿಗೆತಾನೇ ಬೇಡಾದೀತು? ಇದನ್ನು ಹಿರಿಯರು ಅನಾದರಿಸುವರಾದರೆ ಅವರ ಜನ್ಮ ಎಂತಹ ಜನ್ಮವೋ? ನಾರದನ ಶಕ್ತಿ ಅಪ್ಪನಿಗೆ ತಿಳಿಯದು. ಶಾಪದಿಂದ ಅವನಿಗೆ ವಾನರ ಮುಖವು ಬರುವುದಕ್ಕೆ ಮೊದಲು, ಅವನು ಚೆನ್ನಾಗಿರಲಿಲ್ಲವೇ? ದೇವತೆಗಳಿಗೆ ಸಮಾನನಾಗಿರಲಿಲ್ಲವೆ? ಆಗಿನಿಂದಲೇ ನಾನು ಅವನನ್ನು ಪ್ರೇಮಿಸಿಕೊಂಡು ಬಂದಿದ್ದೇನಮ್ಮಾ. ಈಗ ಕೋತಿಯ ಮುಖವಾದರೇನು? ಆತನ ಶಾಪದಲ್ಲಿ ನಾನೂ ಸಹ ಭಾಗಿನಿಯೆಂದೇ ತಿಳಿದಿದ್ದೇನೆ.



ಆತನೇ ನನ್ನ ಪ್ರಿಯನೂ ಪತಿಯೂ ಎಲ್ಲವೂ! ಕಿನ್ನರರ ಮುಖವು ಕುದುರೆಗಳ ಮುಖಗಳಾಗಿಲ್ಲವೆ? ಅದಕ್ಕಾಗಿ ಅವರ ಗಾನವನ್ನು ಆದರಿಸದಿರುವವರು ಯಾರಾದರೂ ಇದ್ದಾರೆಯೇ? ವಿದ್ಯೆಗಳೇನೂ ಇಲ್ಲದವನಿಗೆ ಸುಂದರವಾದ ಮುಖವೇತಕ್ಕೆ? ನಾರದ ನನ್ನು ಹೊರತು ನವ ಮನ್ಮಥನನ್ನಾದರೂ ನಾನು ಮದುವೆಯಾಗಲಾರೆ. ನನ್ನನ್ನು ಅವನಿಗೇ ಕೊಟ್ಟು ಮದುವೆ ಮಾಡಿಸು ಅಮ್ಮಾ. ಇದೇ ನನ್ನ ನಿರ್ಧಾರ! ಅದಕ್ಕೆ ತಂದೆಯನ್ನು ಒಪ್ಪಿಸುವುದು ನಿನ್ನದೇ ಭಾರ." ಎಂದಳು.

ಇಷ್ಟಾದ ಮೇಲೆ, ಕೈಕೇಯಿ ಏನೂ ಹೇಳಲು ತೋರದೆ ಗಂಡನ ಬಳಿಗೆ ಹೋಗಿ, ಕುಮಾರಿಯ ನಿಶ್ಚಯವನ್ನು ತಿಳಿಸಿದಳು. ರಾಜನು ಮತ್ತೇನೂ ಅಭ್ಯಂತರ ಹೇಳದೆ ಮದುವೆಯ ಪ್ರಯತ್ನಕ್ಕೆ ಪ್ರಾರಂಭಿಸಿದನು. ಒಂದು ಶುಭದಿನದಲ್ಲಿ ನಾರದ ಮದಯಂತಿಯರ ಮದುವೆಯೂ ಆಯಿತು.

ನಾರದನು ಮಾವಯ್ಯನ ಮನೆಯಲ್ಲಿಯೇ ಸಂತೋಷವಾಗಿದ್ದನು. ಹೆಂಡತಿ ಸಮೀಪವಿರುವಾಗ ಲೆಲ್ಲಾ ಅವನಿಗೆ ತನ್ನ ಕೋತಿ ಮುಖವನ್ನು ನೆನೆದು ತುಂಬಾ ವ್ಯಥೆಯಾಗುತ್ತಿತ್ತು. ಆದರೆ ಮದಯಂತಿ ಅದಕ್ಕಾಗಿ ಸ್ವಲ್ಪವೂ ಚಿಂತಿಸುತ್ತಿರಲಿಲ್ಲ.

ಸ್ವಲ್ಪ ಕಾಲ ಕಳೆಯಿತು. ಅಷ್ಟರಲ್ಲಿ ಪರ್ವತ ಮುನಿ ಎಲ್ಲೆಲ್ಲೋ ತಿರುಗಿ ನಾರದನನ್ನು ನೋಡಲು ಬಂದನು. ಅವನು ತನ್ನಿಂದ ತನ್ನ ಸೋದರ ಮಾವನ ಮುಖ ಕೋತಿಯಂತಾದುದನ್ನು ನೆನೆದು ನೊಂದು ಕೊಂಡು, "ರಾಜಕುಮಾರಿಗಾಗಿ ನನ್ನ ಶಾಪವನ್ನು ಹಿಂದೆಗೆದುಕೊಳ್ಳುತ್ತೇನೆ. ನಿನ್ನ ಮುಖ ಮೊದಲಿ ನಂತಾಗಲಿ!" ಎಂದನು.

"ನಾನು ಕೂಡಾ ಹಿಂದುಮುಂದು ಯೋಚನೆ ಯಿಲ್ಲದೆ ನಿನ್ನನ್ನು ಶಪಿಸಿಬಿಟ್ಟೆನು. ನನ್ನ ಶಾಪವನ್ನೂ ಹಿಂದೆಗೆದುಕೊಳ್ಳುತ್ತೇನೆ. ನೀನು ಎಂದಿನಂತ ಸ್ವರ್ಗಕ್ಕೆ ಹೋಗು" ಎಂದು ನಾರದನು ಪರ್ವತನಿಗೆ ಹೇಳಿದನು.

ನಾರದನು ಎಂದಿನಂತಾದುದನ್ನು ನೋಡಿ ಮದಯಂತಿ ಆನಂದದಿಂದ ತಾಯಿಯ ಬಳಿಗೆ ಹೋಗಿ ತನ್ನ ಗಂಡನ ಮುಖವು ಸರಿಯಾಯಿತೆಂದು ಹೇಳಿದಳು. ಅವಳು ಈ ಮಾತನ್ನು ರಾಜನೊಂದಿಗೆ ಹೇಳಿ ಅವನನ್ನೂ ಸಂತೋಷಪಡಿಸಿದಳು.

ಈ ವಿಧವಾಗಿ ನಾರದನು ಸಂಸಾರದ ಮಾಯೆ ಯಲ್ಲಿ ಸಿಕ್ಕಿ, ಸುಖದುಃಖ, ಕೋಪ, ತಾಪಗಳಿಗೆ ಗುರಿ ಯಾದನು. ನಾರದನು ವ್ಯಾಸನೊಂದಿಗೆ ತನ್ನ ಇನ್ನೊಂದು ಅನುಭವವನ್ನು ಕೂಡಾ ಹೇಳಿದನು. ಅದೇನೆಂದರೆ,

ಒಂದು ಸಾರಿ ನಾರದನು ಪಾಲ್ಗಡಲಿನಲ್ಲಿರುವ ಶ್ವೇತದ್ವೀಪಕ್ಕೆ ಹೋಗಿ ಮಹಾವಿಷ್ಣುವಿನ ದರ್ಶನ ಮಾಡಿದನು. ನಾರದನನ್ನು ನೋಡಿದ ಕೂಡಲೇ ಲಕ್ಷ್ಮೀದೇವಿ ತಟ್ಟನೆದ್ದು ಒಳಗೆ ಹೊರಟುಹೋದಳು. ಇದನ್ನು ನೋಡಿ ನಾರದನು ನೊಂದುಕೊಂಡು

ವಿಷ್ಣುವಿನೊಂದಿಗೆ "ನಾನೇನು ಪರಕೀಯನೆ? ದುಷ್ಟನೇ? ತಪಸ್ವಿಯಾದ ನನ್ನನ್ನು ನೋಡಿ ಲಕ್ಷ್ಮೀ ದೇವಿ ಹಾಗೇಕೆ ಹೋಗಬೇಕು? ಇದೇನಾದರೂ ಮರ್ಯಾದೆಯಾಗಿರುತ್ತದೆಯೇ?" ಎಂದು ಪ್ರಶ್ನೆ ಮಾಡಿದನು.

ಆತಿಶಯವನ್ನು ನೋಡಿದವನಂತೆ ನಾರದನು ಹೀಗೆ ಕೇಳಿದುದಕ್ಕೆ ವಿಷ್ಣು ಕೋಪಿಸದೆ, "ಆದರಲ್ಲಿ ಅಂತಹ ಆತಿಶಯವೇನಿದೆ? ಗಂಡನ ಹೊರತು ಬೇರೆಯವರ ಇದಿರಿನಲ್ಲಿ ಇರಬಾರದೆಂಬುದು ಸ್ತ್ರೀಧರ್ಮ. ಎಂತೆಂತಹ ತಪಸ್ವಿಗಳು ಕೂಡಾ ಇಂದ್ರಿಯಗಳಿಗೆ ಅಧೀನರೇ ಅಲ್ಲವೇನು? ಅವುಗಳನ್ನು ದೂರಪಡಿಸಲು ಎಂತೆಂತಹ ಮಹಾಮಹಿಮರಿಗೂ ಸಹ ಸಾಧ್ಯವಾಗಿಲ್ಲ. ಹೆಚ್ಚೇಕೆ? ನಾವು ತ್ರಿಮೂರ್ತಿಗಳೂ ಸಹ ಮಾಯಕ್ಕೆ ಒಳಪಟ್ಟವರೇ!" ಎಂದನು.

ನಾರದನಿಗೆ ಆಶ್ಚರ್ಯವಾಯಿತು. "ಮಾಯದ ಬಲವು ಅಷ್ಟರಮಟ್ಟಿಗಿದೆಯೆ?" ಎಂದನು.

"ನಿನಗೆ ಗೊತ್ತಿಲ್ಲವೆಂದಾಯಿತು. ನೋಡಬೇಕೆಂದಿದ್ದರೆ ನನ್ನೊಂದಿಗೆ ಬಾ, ತೋರಿಸುತ್ತೇನೆ. ನೋಡಿದ ಮೇಲೆ ದುಃಖಪಡಬಾರದು" ಎಂದು ಹೇಳಿ ವಿಷ್ಣು ಗರುತ್ಮಂತನನ್ನು ಕರೆದನು. ನಾರದನನ್ನೂ ತನ್ನೊಂದಿಗೆ ಗರುತ್ಮಂತನ ಮೇಲೆ ಕೂಡಿಸಿಕೊಂಡು ವಿಷ್ಣು ಎಲ್ಲಿಗೋ ಹೊರಟನು. ಕಾನ್ಯಕುಬ್ಜವೆಂಬ ಊರಿನ ಸಮೀಪದಲ್ಲಿದ್ದ ಸುಂದರವಾದೊಂದು ಕೊಳದ ಸಮೀಪದಲ್ಲಿ ವಿಷ್ಣು ನಾರದರು ಕೆಳಗಿಳಿದರು. ಸರೋವರದಲ್ಲಿ ಸುಂದರವಾದ ತಾಮರೆ ಹೂವುಗಳೂ ಅರಳಿದ್ದುವು. ನೀರು ಸ್ಫಟಿಕದಂತೆ ನಿರ್ಮಲವಾಗಿತ್ತು.

ವಿಷ್ಣು ನಾರದನ ಕಿರುಬೆರಳನ್ನು ಹಿಡಿದುಕೊಂಡು, "ಇದರಲ್ಲಿ ಸ್ನಾನಮಾಡು. ಆ ಮೇಲೆ ಕಾನ್ಯಕುಬ್ಜ ನಗರಕ್ಕೆ ಹೋಗೋಣ." ಎಂದನು.

ನಾರದನು ತನ್ನ ವೀಣೆಯನ್ನೂ, ಕೃಷ್ಣಾಜಿನವನ್ನೂ ಒಂದು ಕಡೆಯಲ್ಲಿಟ್ಟು, ಕೊಳದಲ್ಲಿಳಿದು



ಮುಳುಗಿ ಏಳುವಾಗ ಅವನು ಹೆಣ್ಣಾಗಿ ಮಾರ್ಪಟ್ಟಿದ್ದನು. ತಾನು ಹೊಸತಾಗಿ ಹೆಣ್ಣಾದೆನೆಂಬ ಸಂಗತಿಯನ್ನು ತಿಳಿಯದೆ ನಾರದನು ಉತ್ಸಾಹದಿಂದ ಜಲಕ್ರೀಡೆಯಾಡಿದನು. ಅವನ ವೀಣೆಯನ್ನೂ ಕೃಷ್ಣಾಜಿನವನ್ನೂ ತೆಗೆದುಕೊಂಡು ವಿಷ್ಣು ಗರುತ್ಮಂತನ ಮೇಲೇರಿ ಹೊರಟುಹೋಗಿಬಿಟ್ಟನು.

ನಾರದನು ಸ್ತ್ರೀರೂಪದಲ್ಲಿ ಕೊಳದಿಂದ ಮೇಲೆ ಬಂದಾಗಲೂ ತನ್ನ ವೀಣೆ ವಿಷ್ಣು ಮುಂತಾದ ನೆನಪೇ ಅವನಿಗಿಲ್ಲ. ಆಗ ರಥದ ಮೇಲೆ ಕಾಲಧ್ವಜನೆಂಬ ರಾಜನು, ಆನೆ ಕುದುರೆ ಕಾಲಾಳುಗಳ ಗುಂಪಿನೊಂದಿಗೆ ಅಲ್ಲಿಗೆ ಬಂದು, ನಾರದನನ್ನು ಅತ್ಯಾಸಕ್ತಿಯಿಂದ ನೋಡುತ್ತ, "ನೀನು ಯಾವ ನದೀ ಸುಂದರಿ? ಅಥವಾ ದೇವಸುಂದರಿಯೋ? ನಾಗಸುಂದರಿಯೋ? ಇಲ್ಲಿ ಒಬ್ಬಳೇ ಇರಲು ಕಾರಣವೇನು?" ಎಂದು ಕೇಳಿದನು. ನಾರದನು ಲಜ್ಜಿತನಾಗಿ ಸುಮ್ಮನಿದ್ದನು. "ನೀನು ಯಾರೇ ಆಗಿರು. ನನಗೆ ತಕ್ಕ ಮಹಿಮೆ

ಯುಳ್ಳವಳೇ. ನನ್ನನ್ನು ಮದುವೆಯಾಗುವೆಯಾ?" ಎಂದು ಕೇಳಿದನು ರಾಜ. ಅದಕ್ಕೆ ನಾರದನು ತಲೆ ಯೊಲಿಯಲು ಇಬ್ಬರೂ ಮದುವೆ ಮಾಡಿಕೊಂಡರು.

ನಾರದನಲ್ಲಿ ಪುರುಷಭಾವವಿರಲೇ ಇಲ್ಲ. ಬ್ರಹ್ಮ ಜ್ಞಾನ ಅದಕ್ಕಿಂತ ಮೇಲೆ ಇಲ್ಲ. ತನ್ನ ಸೌಂದರ್ಯಕ್ಕೆ ಯಾರೂ ಈಡು ಜೋಡು ಇಲ್ಲವೆಂಬ ಗರ್ವಕೂಡಾ ಅವನಿಗೆ ಬಂತು. ನಾರದನು ಹನ್ನೆರಡು ವರ್ಷ ಆ ರಾಜನೊಂದಿಗಿದ್ದು, ಆ ಮೇಲೆ ಗರ್ಭಧರಿಸಿ, ಪುತ್ರ ನನ್ನು ಹೆತ್ತನು. ಮಗನಿಗೆ ವೀರವರ್ಮನೆಂದು ಹೆಸರಿಟ್ಟರು. ಆ ಮೇಲೆ ನಾರದನು ವರಿಸೆಯಾಗಿ ಪುತ್ರರನ್ನೇ ಹೆತ್ತನು. ಅವನಿಗೆ ಹನ್ನೆರಡು ಮಂದಿ ಮಕ್ಕಳಾದರು. ಆ ಮಕ್ಕಳು ದೊಡ್ಡವರಾಗಿ ಮದುವೆ ಮಾಡಿಕೊಂಡು ತಾವೂ ಮಕ್ಕಳ ತಂದೆಯಾದರು. ವಂಶವು ವಿಸ್ತರಿಸಿಕೊಂಡು ಹೋಯಿತು.

ಮತ್ತೆ ಸ್ವಲ್ಪ ಕಾಲಕಳೆಯಲು ಕಾನ್ಯಕುಬ್ಜ ನಗರದ ಮೇಲೆ ಶತ್ರುಗಳು ದಂಡೆತ್ತಿ ಯುದ್ಧಕ್ಕೆ ಬಂದರು. ಆ ಯುದ್ಧದಲ್ಲಿ ನಾರದನು ಹಡೆದ ಪುತ್ರರೂ, ಅವರ ಕುಮಾರರೂ ಎಲ್ಲರೂ ಸತ್ತರು. ನಾರದನಿಗೆ ತೀರದ ಗರ್ಭಶೋಕವೇ ಸಂಪ್ರಾಪ್ತವಾಯಿತು. ರಾಜನೂ ದುಃಖಿಸಿದನು.

ಆ ಸಮಯದಲ್ಲಿ ವಿಷ್ಣು ಮುದುಕ ಬ್ರಾಹ್ಮಣನ ರೂಪದಲ್ಲಿ ಬಂದು ನಾರದನ ಕಿವಿಗೆ ಬೀಳುವಂತೆ, "ಯಾರು ಪುತ್ರರು? ಯಾರು ಬಂಧುಗಳು? ಅಸಲು ನೀನು ಯಾರು? ಎಲ್ಲಿಂದ ಬಂದೆ? ಕಾಲವಶ ದಿಂದ ಎಲ್ಲವೂ ಆಗುತ್ತವೆ, ಹೋಗುತ್ತವೆ. ಮೊದಲು ಸ್ನಾನಮಾಡಿ ಕಾಲನಾದ ಯಮನಿಗೆ ತರ್ಪಣ ಬಿಡು." ಎಂದು ಹೇಳಿದನು.

ಅವನು ನಾರದನನ್ನು ಮಾತ್ರ ತನ್ನೊಂದಿಗೆ ಪುರುಷ ತೀರ್ಥವೆಂಬ ಸರಸ್ಸಿಗೆ ಕರೆದುಕೊಂಡು ಹೋಗಿ ಅದರಲ್ಲಿ ಇಳಿದು ಸ್ನಾನಮಾಡಲು ಹೇಳಿದನು ಅದರಲ್ಲಿ ಮುಳುಗಿದ ಕೂಡಲೇ ನಾರದನ ಸ್ತ್ರೀ ರೂಪವು ಹೋಗಿ ಮೊದಲಿನ ನಾರದನೇ ಆದನು. ತೀರದಲ್ಲಿ ವೀಣೆಯನ್ನೂ, ಕೃಷ್ಣಾ ಜಿನವನ್ನೂ ಹಿಡಿದು ಕೊಂಡು ನಿಂತ ವಿಷ್ಣು, ನಾರದನನ್ನು ನೋಡಿ, "ಎಷ್ಟು ಹೊತ್ತು ನಾರದಾ? ಬೇಗ ಬಾ!" ಎಂದನು.

ಆಗ ನಾರದನಿಗೆ ತಾನು ಸ್ತ್ರೀಯಾಗಿದ್ದೆನೆಂಬ ವಿಷಯವಷ್ಟೂ ಮರೆತು ಹೋಗಿತ್ತು. ತನ್ನ ಸುಂದರ ಪತ್ನಿ ತನ್ನೊಂದಿಗೆ ಏನೂ ಹೇಳದೆ ಯಾವ ನೊಂದಿಗೋ, ಪುರುಷನಾಗಿ ಹೋದನೆಂಬ ಸಂಗತಿ ತಿಳಿದು ತಾಲಧ್ವಜರಾಜನು ತುಂಬಾ ದುಃಖಿಸಿದನು. ವಿಷ್ಣು ಆ ರಾಜನಿಗೆ ವೇದಾಂತವನ್ನು ಬೋಧಿಸಿ ಕಳುಹಿಸಿ ಕೊಟ್ಟನು. ಮಾಯೆಯ ಕೈಯಲ್ಲಿ ಮನುಷ್ಯನು ಹೇಗೆ ಕೀಲುಬೊಂಬೆಯಾಗುವನೆಂದು ನಾರದನಿಗೆ ವಿಷ್ಣುವಿನಿಂದ ಗೊತ್ತಾಯಿತು.





# ದೇವೀಭಾಗವತ

ಶರ್ಯಾತಿ ಎಂಬ ಮಹಾರಾಜನಿಗೆ ಸಾವಿರಾರು ಪತ್ನಿಯರಿದ್ದರೂ ಸುಕನ್ಯೆಯೊಬ್ಬಳೇ ಮಗಳು. ಆದುದರಿಂದ ಎಲ್ಲಾ ತಾಯಂದಿರೂ ಸೇರಿ ಸುಕನ್ಯೆಯನ್ನು ಅತ್ಯಂತ ಮಮತೆಯಿಂದ ಬೆಳೆಯಿಸಿದರು. ಅವಳೂ ಭಯವರಿಯದೆ ಬೆಳೆದು ದೊಡ್ಡವಳಾದಳು.

ರಾಜಧಾನಿಯ ಹೊರಗೆ ಸುಂದರವಾದೊಂದು ತಟಾಕವಿದ್ದಿತು. ಆ ತಟಾಕಕ್ಕೆ ಸಮೀಪವಿರುವ ವನದಲ್ಲಿ ಭೃಗುವಂಶದವನಾದ ಚ್ಯವನನೆಂಬ ಮುನಿ, ಅಂಬಾದೇವಿಯನ್ನು ಕುರಿತು ತಪಸ್ಸು ಮಾಡಿಕೊಂಡಿದ್ದನು. ಅವನು ತಪಸ್ಸಿನಲ್ಲಿ ಎಷ್ಟರಮಟ್ಟಿಗೆ ಮಗ್ನನಾಗಿದ್ದನೆಂದರೆ, ಅವನ ಸುತ್ತಲೂ ಹುತ್ತ ವೆದ್ದಿತ್ತು. ಆ ಹುತ್ತವನ್ನು ಅಲ್ಲಲ್ಲಿ ಬಳ್ಳಿಗಳು ಸುತ್ತಿದ್ದುವು.

ಒಂದುದಿನ ಆ ತಟಾಕ ತೀರದ ವನ ಪ್ರಾಂತಕ್ಕೆ ಶರ್ಯಾತಿರಾಜನು ತನ್ನ ಪತ್ನಿಯರೊಂದಿಗೆ ವಿಹಾರ ಮಾಡಲು ಬಂದನು. ಅವರೊಂದಿಗೆ ಬಂದಿದ್ದ ಸುಕನ್ಯೆ ಹೂಗಳನ್ನಾರಿಸುತ್ತ, ಪಾತರಗಿತ್ತಿಯಹಾಗೆ ಅತ್ತಿತ್ತ ಓಡುತ್ತ, ಹಾರಿ ಕುಣಿದು ಹೂಗಳನ್ನು ಕೊಯ್ಯುತ್ತ ತನ್ನ ಗೆಳತಿಯರೊಂದಿಗೆ ತಿರುಗಾಡುತ್ತಿದ್ದಳು. ಹೀಗೆ ಸ್ವೇಚ್ಛೆಯಾಗಿ ತಿರುಗಾಡುತ್ತ ಹೋಗಲು, ಅವಳ ಕಣ್ಣಿಗೆ ಚ್ಯವನನ ಹುತ್ತವು ಕಂಡಿತು. ಸುಕನ್ಯೆ ಹುಡುಗಾಟವಾಗಿ ಆ ಹುತ್ತವನ್ನು ಬಗ್ಗಿ ಬಗ್ಗಿ ನೋಡಿದಳು. ಆಗ ಎರಡು ವಸ್ತುಗಳು ಥಳಥಳ ಹೊಳೆಯುವುದನ್ನು ಕಂಡಳು. ಕೂಡಲೇ ಉದ್ದವಾದ ಮುಳ್ಳಿನಿಂದ ಅವುಗಳನ್ನು ಚುಚ್ಚಲು ನೋಡಿದಳು.

ಅದನ್ನು ನೋಡಿ ಹುತ್ತದೊಳಗಿನ ಚ್ಯವನನು "ಲೇ ಹುಡುಗೀ ! ಈ ಹುತ್ತದ ಬಳಿಯಿಂದ ದೂರಹೋಗು. ನಾನು ತಪಸ್ಸಿನಲ್ಲಿದ್ದೇನೆ!" ಎಂದನು.

ಈ ಮಾತು ಎಲ್ಲಿಂದ ಬರುವುದೆಂದು ತಿಳಿಯದೆ, ಹುತ್ತದಾಚೆಗೆ ಯಾರೋ ಇರಬಹುದೆಂದುಕೊಂಡು, ಸುಕನ್ಯೆ ಆಟದ ಆತುರದಲ್ಲಿ ಆ ಮುಳ್ಳಿನಿಂದ ಚ್ಯವನನ ಎರಡು ಕಣ್ಣುಗಳನ್ನೂ ಚುಚ್ಚಿದಳು. ಚುಚ್ಚಿದ

೨೩. ಚ್ಯವನನ ಕಥೆ



ಕೂಡಲೇ ಚುಚ್ಚಬಾರದಿತ್ತು ಎಂದುಕೊಂಡು ಆಚೆಗೆ ಓಡಿಹೋಗಿ ಅದನ್ನು ಮರೆತು ಕ್ರೀಡೋತ್ಸಾಹದಲ್ಲಿ ಮಗ್ನಳಾಗಿ ಬಿಟ್ಟಳು.

ಚ್ಯವನನು ಕಣ್ಣುಗಳ ನೋವನ್ನು ತಾಳಲಾರದೆ ರೋದಿಸಲು ಪ್ರಾರಂಭಿಸಿದನು. ಅದೇ ಸಮಯದಲ್ಲಿ ರಾಜನಿಗೂ ಅವನ ಪರಿವಾರದವರಿಗೂ ಮಲ ಮೂತ್ರಗಳು ಸ್ತಂಭಿಸಿ ಹೋದುವು. ಇದ್ದಕ್ಕಿದ್ದ ಹಾಗೆ ಎಲ್ಲರಿಗೂ ಒಂದೇಸಾರಿ ಶಾಪ ತಗಲಿದ ಹಾಗೆ ಹೀಗಾದುದನ್ನು ನೋಡಿ, ಆಶ್ಚರ್ಯ ಪಡುತ್ತ ಶರ್ಯಾತಿ ರಾಜನು ನಗರಕ್ಕೆ ಹೋದ ಮೇಲೆ ತನ್ನ ಸೈನಿಕರನ್ನು ನೋಡಿ, "ನನಗೇನೋ ಅನುಮಾನವಾಗಿದೆ. ನಮ್ಮ ನಗರದ ಹೊರಗೆ ವನದಲ್ಲಿ ಚ್ಯವನನೆಂಬ ಋಷಿ ತಪಸ್ಸಿನಲ್ಲಿದ್ದಾನೆ. ನಿಮ್ಮಲ್ಲಿ ಯಾರೂ ಅವನಿಗೆ ಉಪದ್ರ ಕೊಡಲಿಲ್ಲವಷ್ಟೆ? ಯಾವುದಕ್ಕೂ ನೀವು ಹೋಗಿ ಸ್ವಲ್ಪ ನೋಡಿ ವಿಚಾರಿಸಿಬನ್ನಿ!" ಎಂದನು.

ಆ ಸೈನಿಕರು ವನಕ್ಕೆ ಹೋದ ಸೈನಿಕರನ್ನೆಲ್ಲಾ ವಿಚಾರಿಸಿದರು. ರಾಜನೂ ಸ್ವತಃ ವಿಚಾರಿಸಿದನು. ಎಲ್ಲರೂ ನಮಗೇನೂ ತಿಳಿಯದೆಂದು ಹೇಳಿದರು. ರಾಜನು ಅವರ ಮಾತುಗಳನ್ನು ನಂಬದೆ ನಿಜ ಹೇಳುವಂತೆ ಅವರನ್ನು ಹಿಂಸಿಸ ತೊಡಗಿದನು.

ಆ ಗಲಾಟೆ ಸುಕನ್ಯೆಗೆ ತಿಳಿಯಿತು. ಅವಳು ತಂದೆಯ ಬಳಿಗೆ ಓಡಿಬಂದು, "ಅಪ್ಪಾ, ನಾನು ವನದಲ್ಲಿ ವಿಹರಿಸಿಕೊಂಡಿದ್ದಾಗ ಅಲ್ಲೊಂದು ಹುತ್ತವನ್ನು ನೋಡಿದೆ. ಅದರಲ್ಲಿ ಎರಡು ರಂಧ್ರಗಳು ಹೊಳೆಯುವುದನ್ನು ನೋಡಿ ಆಟದ ಬುದ್ಧಿಯಿಂದ ಮುಳ್ಳುಕಡ್ಡಿಯಿಂದ ತಿವಿದೆ. ಆ ರಂಧ್ರಗಳಿಂದ ನೀರಿಳಿಯುವುದನ್ನೂ, ಏನೋ ಹೀನವಾದ ಆರ್ತನಾದ ಹೊರಟುದನ್ನೂ ನೋಡಿ, ಏನೋ ಎಂಥದೋ ಎಂದು ಆಶ್ಚರ್ಯಪಡುತ್ತ ಅಲ್ಲಿಂದು ಓಡಿ ಬಂದುಬಿಟ್ಟೆ. ನಾನು ಯಾವುದನ್ನು ತಿವಿದೆನೋ ನನಗೆ ಗೊತ್ತಿಲ್ಲ ಅಪ್ಪಾ!" ಎಂದಳು.

ಮಹಾಮುನಿಗೆ ನಡೆದ ಅಪಚಾರವು ಇದೇ ಆಗಿರಬೇಕು ಎಂದುಕೊಂಡು, ರಾಜನು ಕೂಡಲೇ ಚ್ಯವನನಿರುವ ಸ್ಥಳಕ್ಕೆ ಹೋಗಿ ಹುತ್ತವನ್ನು ತೊಲಗಿಸಿ, ಕಣ್ಣು ಕಾಣದೆ ಸಂಕಟಪಡುತ್ತಿರುವ ಮುನಿಯ ಮುಂದೆ ಸಾಷ್ಟಾಂಗ ಪ್ರಣಾಮ ಮಾಡಿ, "ಮಹಾತ್ಮಾ! ತಿಳಿಯದೆ ನನ್ನ ಮಗಳು ನಿನಗೆ ಮಾಡಿದ ಹಾನಿಗೆ ಕೋಪ ಮಾಡಬಾರದು. ನಿಮ್ಮಂಥಾ ತಾಪಸಿಗಳು ಕೋಪದಿಂದ ಶಾಪ ಕೊಡಬಾರದು" ಎಂದು ಬೇಡಿಕೊಂಡನು.

ಆ ಮಾತು ಕೇಳಿ ಚ್ಯವನನು, "ರಾಜಾ! ನನ್ನ ಮನಸ್ಸಿನಲ್ಲಿ ಸ್ವಲ್ಪವೂ ಕೋಪವಿಲ್ಲ. ನಿನ್ನ ಮಗಳು ನನ್ನ ಕಣ್ಣುಗಳನ್ನು ತಿವಿದ ಕಾರಣದಿಂದ ಶಾಪ ತಗಲಿದ ಹಾಗೆ ನಿನಗೆ ಸಂಕಟ ಉಂಟಾಗಿರಬಹುದು. ಅಷ್ಟೇಹೊರತು ನಾನು ಶಾಪ ಕೊಡಲಿಲ್ಲಪ್ಪಾ. ಯಾರಿಗೂ ಯಾವ ಬಗೆಯ ಹಾನಿಯನ್ನೂ

ಮಾಡದೆ ತಪಸ್ಸು ಮಾಡಿಕೊಂಡಿರುವವರಿಗೆ ಕೇಡು ಮಾಡಿದರೆ ಸುಮ್ಮನೆ ಬಿಡುತ್ತದೆಯೇ ? ಈಶ್ವರನಿಗೆ ಕೋಪ ಬಾರದಿರುವುದೇ ? ನಾನೋ ಮುದುಕ. ಈಗ ಕುರುಡನಾಗಿ ಹೋಗಿದ್ದೇನೆ. ಯಾರೂ ದಿಕ್ಕಿಲ್ಲದ ನನಗೆ, ಇನ್ನು ಯಾರು ಪರಿಚರ್ಯೆ ಮಾಡಿಯಾರು ?" ಎಂದು ಹೇಳಿ ದುಃಖಿಸಿದನು.

"ಮಹಾಮುನೀ ! ನಿನಗೆ ಎಷ್ಟು ಮಂದಿ ಸೇವಕರನ್ನಾದರೂ ನಾನು ಕಳುಹಿಸುತ್ತೇನೆ. ಅವರು ನಿನಗೆ ಎಲ್ಲಾ ವಿಧದ ಸೇವೆಗಳನ್ನೂ ಮಾಡುತ್ತಾರೆ. ಕೋಪಮಾತ್ರ ಇಟ್ಟುಕೊಳ್ಳಬೇಡ. ದಯೆದೋರು" ಎಂದನು ರಾಜ.

ಅದಕ್ಕೆ ಮುನಿ, "ನಾನೇನು ದಯ ಮಾಡೇನು ? ಕುರುಡನಾಗಿ ಹೋದವನು. ನನಗಿನ್ನು ನೇಮನಿಷ್ಠೆಗಳು ಹೇಗೆ ಸಾಗುತ್ತವೆ ? ಓ ರಾಜಾ ! ನನಗೆ ಸೇವೆ ಮಾಡಲು ನಿನ್ನ ಆ ಮಗಳನ್ನೇ ನನಗೆ ಕೊಟ್ಟು ಮದುವೆ ಮಾಡಿಬಿಡು. ನಾನು ಮುನಿಯಾಗಿರುವುದರಿಂದ ಏನೂ ಸಂಕೋಚ ಬೇಡ. ಇದರಿಂದ ತಪ್ಪು ಮಾಡಿದವರಿಗೆ ಪ್ರಾಯಶ್ಚಿತ್ತವಾದ ಹಾಗಾಗಿ ಎಲ್ಲಾ ಒಳ್ಳೆಯದಾಗುತ್ತದೆಂದು ನಂಬು. ನನಗೂ ಶಾಂತಿಯುಂಟಾಗಿ ಅದರ ಪ್ರತಿಫಲಿತ ನಿಮಗೂ ಉಂಟಾಗುತ್ತದೆ" ಎಂದನು.

ಈ ಮಾತು ಕೇಳಿ ರಾಜನು ವಿಚಾರಗ್ರಸ್ತನಾದನು. ಆಗಲೇ ಏನೂ ಉತ್ತರ ಕೊಡಲಾಗದೆ ಹೋದನು. ಮುದುಕನೂ, ಕುರುಡನೂ, ಮೊರಟನೂ ಆಗಿರುವ ಚ್ಯವನನು ಅತಿ ಕೋಮಲೆಯಾಗಿ ಬೆಳೆದ ತನ್ನ ಕುಮಾರಿ ಸುಕನ್ಯೆಗೆ ಏನು ಸಂತೋಷ ಪಡಿಸುವನು ? ಇಂತಹ ಗಂಡನೊಂದಿಗೆ ಸುಕನ್ಯೆಯಾದರೂ ಹೇಗೆ ಬಾಳುವೆ ನಡೆಸುವಳು, ಮಹಾರಾಜನ ಸುಪ್ಪತ್ತಿಗೆಯಲ್ಲಿ ಮಲಗುವ ತನ್ನ ಮಗಳು ? ಆಟವು ಎಂಥ ಪೇಚಾಟವಾಯಿತು!



ಈ ಬಗೆಯ ಆಲೋಚನೆಯಿಂದ ಚ್ಯವನನಿಗೆ ತನ್ನ ಮಗಳನ್ನು ಮದುವೆ ಮಾಡಿಕೊಡಲು ಇಷ್ಟವಿಲ್ಲದೆ ಶರ್ಯಾತಿ ಮನೆಗೆ ಹಿಂದಿರುಗಿ ತನ್ನ ಮಂತ್ರಿಗಳೊಂದಿಗೆ, "ನೋಡಿದಿರಾ ! ಪರಿಸ್ಥಿತಿ ಎಲ್ಲಿಯ ವರೆಗೆ ಬಂದಿತು ! ನಾನು ನನ್ನ ಕುಮಾರಿಯನ್ನು ಆ ಮುನಿಗೆ ಕೊಡಬೇಕು. ಇಲ್ಲದಿದ್ದರೆ ಮಲಮೂತ್ರ ಸ್ತಂಭನೆಯಿಂದ ನಾವು ಹೀಗೆಯೇ ಕಷ್ಟಪಡಬೇಕು !" ಎಂದನು.

ಅದಕ್ಕೆ ಮಂತ್ರಿಗಳು "ಮಹಾರಾಜಾ ! ಸುಕೋಮಲೆಯಾದ ಸುಕನ್ಯೆಯನ್ನು ಕಾಡಿನಲ್ಲಿ ವಾಸಮಾಡುವ ಮುನಿಗೆ ಕೊಡಲೇ ಬಾರದು. ನಾವು ಉದರ ಬಾಧೆಯಿಂದ ಸತ್ತರೂ ಚಿಂತೆಯಿಲ್ಲ" ಎಂದರು.

ಸುಕನ್ಯೆಯನ್ನು ತಕ್ಕ ವರನಿಗೆ ಕೊಟ್ಟು ರಾಜ್ಯವನ್ನೂ ಅವರಿಗೆ ಒಪ್ಪಿಸಿ ಎಲ್ಲರೂ ಉದರ ಬಾಧೆಯನ್ನು ಅನುಭವಿಸುವುದೆಂದು ಮಾತಾಡಿಕೊಳ್ಳುವಾಗ ಸುಕನ್ಯೆ ಅಲ್ಲಿಗೆ ಬಂದು, "ಅಪ್ಪಾ



ನನಗಾಗಿ ನೀವೆಲ್ಲಾ ಇಂಥ ವಿಪರೀತ ಆಲೋಚನೆಗೆ ಹೋಗಬಾರದು. ನಾನು ಮಾಡಿದ ತಪ್ಪಿನಿಂದಲೇ ಆ ಮುನಿಯ ಕಣ್ಣುಗಳು ಹೋದುವು. ನಾನು ಆತನನ್ನೇ ಮದುವೆಯಾಗುವೆನು. ಆತನ ದಯೆಯನ್ನು ಸಂಪಾದಿಸುವೆನು. ನೀವೆಲ್ಲ ಸುಖವಾಗಿರುವುದೇ ನನ್ನ ಸುಖ !" ಎಂದಳು.

ಅದನ್ನು ಕೇಳಿ ರಾಜನು, "ಅಯ್ಯೋ ! ಆ ಕುರುಡ ಮುದುಕ ಚ್ಯವನನಿಗೆ ನೀನು ಪರಿಚರ್ಯೆ ಮಾಡಿಕೊಂಡಿರಲು ಸಾಧ್ಯವೆ ? ನಮ್ಮ ಸುಖಕ್ಕಾಗಿ ನಿನ್ನನ್ನು ಅವನಿಗೆ ಬಲಿ ಕೊಡಲೇ ? ನಿನ್ನ ಕೈಯಿಂದ ಅರಣ್ಯದಲ್ಲಿ ಮುದಿಗಂಡನಿಗೆ ಸೇವೆ ಮಾಡಲು ಬಿಟ್ಟರೆ ನನಗೆ ಒಳ್ಳೆಯ ಗತಿಯುಂಟಾದೀತೆ ? ಅಮ್ಮಾ, ನಾನೂ ನನ್ನ ರಾಜ್ಯವೂ ಏನಾದರೂ ಆಗಲಿ, ನನ್ನ ಕೈಯಿಂದ ನಿನ್ನನ್ನು ಆ ಕಣ್ಣಿಲ್ಲದ ಮುದುಕನಿಗೆ ಕೊಡಲಾರೆ" ಎಂದನು. ಅದಕ್ಕೆ ಸುಕನ್ಯೆ, "ನಿಮ್ಮ ಮಾತು ಸಮ್ಮವಾಗಿಲ್ಲ ಅಪ್ಪಾ. ಈ ಮುನಿಯನ್ನು ಸಾಮಾನ್ಯನೆನ್ನಬೇಡಿ, ಲೋಕೋತ್ತರನು ! ಮುದುಕನಾದ್ದರೇನು ? ಮಹಾ ತಪಸ್ವಿ. ಆತನ ಸೇವೆಯಿಂದ ನನಗೆ ಒಳಿತೇ ಆಗುತ್ತದೆ. ನನ್ನ ಮೂಲಕವಾಗಿ ನೀವೆಲ್ಲಾ ಚೆನ್ನಾಗಿರುವಿರಾದರೆ ಅದಕ್ಕಿಂತ ಹೆಚ್ಚಿನ ಸುಖ ನನಗೇನೂ ಬೇಡ" ಎಂದಳು.

ಅವಳ ದೃಢಸಂಕಲ್ಪವನ್ನು ನೋಡಿ ರಾಜನೂ ಮಂತ್ರಿಗಳೂ ಅತ್ಯಾಶ್ಚರ್ಯಪಟ್ಟರು. ತರುವಾಯ ಶರ್ಯಾತಿ ಸುಕನ್ಯೆಯನ್ನು ಕರೆದುಕೊಂಡು ಚ್ಯವನ ಮುನಿಯ ಬಳಿಗೆ ಹೋಗಿ ನಮಸ್ಕಾರಮಾಡಿ, "ನನ್ನ ಕುಮಾರಿ ಸುಕನ್ಯೆಯನ್ನು ನಿನಗೆ ಕೊಟ್ಟು ವಿವಾಹ ಮಾಡುತ್ತೇನೆ. ಅನುಗ್ರಹಿಸಿ ಅವಳನ್ನು ಗ್ರಹಿಸು" ಎಂದನು.

ಆಮೇಲೆ ಸುಕನ್ಯೆಯ ಮದುವೆ ಚ್ಯವನನೊಂದಿಗೆ ಶಾಸ್ತ್ರೋಕ್ತವಾಗಿ ನಡೆಯಿತು. ಆ ಕೂಡಲೇ ರಾಜನಿಗೂ ಸೈನಿಕರಿಗೂ ಬಂದಿದ್ದ ಉದರವ್ಯಾಧಿ ಕಡಮೆಯಾಯಿತು. ತಂದೆ ಹಿಂದಿರುಗಿ ಹೋಗುವಾಗ ಸುಕನ್ಯೆ ತನ್ನ ನಗಗಳನ್ನೂ, ಪಟ್ಟೆ ಸೀರೆಗಳನ್ನೂ ತಂದೆಗೆ ಕೊಟ್ಟು, ತನಗೆ ಚರ್ಮವನ್ನೂ ನಾರು ಸೀರೆಗಳನ್ನೂ ಪಡೆದುಕೊಂಡಳು.

ಹೀಗೆ ಮುನಿಪತ್ನಿಯಾದ ರಾಜಕುಮಾರಿ ಸುಕನ್ಯೆ ಹೊಸ ಜೀವಿತವನ್ನು ಪ್ರಾರಂಭಿಸಿದಳು. ಅವಳು ಕಾಡಿನೊಳಗೆ ತಿರುಗಾಡುವಳು ; ಗಡ್ಡೆ ಗೆಣಸು ಫಲಗಳನ್ನು ತರುವಳು ; ಅಗ್ನಿಗಾಗಿ ಒಣಗಿದ ಸಮಿಧೆಗಳನ್ನು ಆರಿಸಿಕೊಂಡು ಬರುವಳು ; ಎಳ್ಳು ದರ್ಭೆಗಳನ್ನು ಸೇರಿಸಿಡುವಳು ; ತೊಳೆದ ಕಮಂಡಲುವಿನಲ್ಲಿ ನೀರು ತುಂಬಿಸಿಡುವಳು ; ಗಂಡನನ್ನು ಬಿಸಿನೀರಿನಲ್ಲಿ ಸ್ನಾನಮಾಡಿಸುವಳು ; ಕೃಷ್ಣಾಜಿನವನ್ನು ಹರಡಿ ಗಂಡನ ನಿತ್ಯಕರ್ಮಗಳಿಗೆ ಅನುವುಮಾಡಿಡುವಳು ; ನಿತ್ಯಕರ್ಮಗಳಾದ ಮೇಲೆ ಅವನ ಕೈಹಿಡಿದು ತಂದು ಕೂಡಿಸಿ, ಭೋಜನ



ಮಾಡಿಸುವಳು ; ಭೋಜನಾನಂತರ ಅವನ ಕೈಯನ್ನೂ, ಕಾಲುಗಳನ್ನೂ ತೊಳೆಯುವಳು ; ಆಮೇಲೆ ತಾನು ಊಟಮಾಡಿ, ಗಂಡನ ಕಾಲು ಒಸುಕುವಳು ; ಗಂಡನು ಎಲ್ಲಿಗಾದರೂ ಹೋಗುವಾಗ ಕೈಹಿಡಿದು ನಡೆಸಿಕೊಂಡು ಹೋಗುವಳು. ಹೀಗೆಲ್ಲಾ ಸುಕನ್ಯೆ ಗಂಡನನ್ನು ಭಕ್ತಿಯಿಂದ ಸೇವಿಸುತ್ತ ಕಾಲ ಕಳೆಯುತ್ತಿದ್ದಳು.

ಒಂದುದಿನ ಸುಕನ್ಯೆ ಕೆರೆಯಲ್ಲಿ ಸ್ನಾನಮಾಡಿ ಬರುತ್ತಿದ್ದಾಗ, ಜಂಟಿಗಳಾದ ಅಶ್ವಿನೀ ದೇವತೆಗಳು ಅವಳನ್ನು ನೋಡಿ, ಅವಳ ಸೌಂದರ್ಯಕ್ಕೆ ಆಶ್ಚರ್ಯ ಪಡುತ್ತ, ಅವಳ ಬಳಿಗೆ ಬಂದು, "ಸ್ವಲ್ಪ ನಿಲ್ಲಮ್ಮ. ನಾವು ಅಶ್ವಿನೀ ಕುಮಾರರು. ನೀನು ಎಲ್ಲಿಂದ ಬರುತ್ತಿರುವಿ ? ಎಲ್ಲಿಗೆ ಹೋಗುತ್ತಿರುವಿ? ನಿನ್ನ ಗಂಡ ಯಾರು ? ತಂದೆ ಯಾರು ? ನೀನು ರಾಜಕುಮಾರಿಯಾ ? ಅಲ್ಲ ಅಪ್ಸರೆಯಾ ? ನಾವು ಸುಮ್ಮನೆ ಹೊಗಳುವವರಲ್ಲ" ಎಂದರು.

ಅವರ ಮಾತು ಕೇಳಿ ಸುಕನ್ಯೆ ನಸುನಾಚಿ. ನಾನು ಶರ್ಯಾತಿ. ರಾಜನ ಮಗಳು. ಗೌರವಶಾಲಿಯಾದ ಚ್ಯವನ ಮುನಿಯ ಪತ್ನಿ. ಆತನು ವೃದ್ಧನಾಗಿಯೂ ಕುರುಡನಾಗಿಯೂ ಇದ್ದಾನೆ. ಆತನಿಗೆ ಸೇವೆ ಮಾಡುತ್ತಾ ನಾನಿದ್ದೇನೆ. ನಾನು ಕೇಳಿಕೊಂಡ ಮೇರೆಗೇ ನನ್ನ ತಂದೆ ನನ್ನನ್ನು ಈ ಮಹಾಮುನಿಗೆ ಕೊಟ್ಟು ಮದುವೆ ಮಾಡಿದ್ದಾರೆ. ಅಲ್ಲಿ ಕಾಣುವುದೇ ನಮ್ಮ ಆಶ್ರಮ. ನೀವು ತುಂಬಾ ಒಳ್ಳೆಯವರಾಗಿದ್ದೀರಿ. ನಮ್ಮ ಆಶ್ರಮಕ್ಕೆ ದಯಮಾಡಿರಿ" ಎಂದಳು.

ಅವಳ ಮಾತು ಕೇಳಿ ಅಶ್ವಿನೀದೇವತೆಗಳು, "ಮುದುಕನೂ ಕುರುಡನೂ ಆದವನಿಗೆ ನಿನ್ನನ್ನು ನಿನ್ನ ತಂದೆ ಹೇಗೆ ಕೊಟ್ಟನು ? ನಿನ್ನಂಥಾ ದಿವ್ಯಸುಂದರಿ ದೇವಲೋಕದಲ್ಲಿಯೂ ಇಲ್ಲ. ಕುರುಡನಿಗೆ ಹೆಂಡತಿಯಾಗಿ ನೀನು ಹೇಗೆ ತಾನೇ ಜೀವನ ನಡೆಸುವಿಯೋ ? ನಿನಗೆ ತಕ್ಕವನಾಗಿರುವವನನ್ನು ನೋಡಿ ಮದುವೆಯಾಗಬಾರದೇ ? ತಪ್ಪಿಲ್ಲ. ಹಾಗೆ ಮಾಡಿ ಸುಖಜೀವನ ನಡೆಯಿಸುವವಳಾಗು" ಎಂದರು.

ಅದನ್ನು ಕೇಳಿ ಸುಕನ್ಯೆ, "ನೀವು ಸೂರ್ಯನ ಕುಮಾರರು. ನಿಮಗೆ ತಿಳಿಯದುದು ಏನೂ ಇಲ್ಲ. ಮದುವೆಯಾದ ನನ್ನನ್ನು ನೋಡಿ ನೀವು ಹೀಗೆಲ್ಲಾ ಮಾತಾಡಬಹುದೆ ? ನಾನು ಕುಲಕನ್ಯೆ. ನೀವು ಅಧಿಕಪ್ರಸಂಗವೇನಾದರೂ ಮಾಡಿದರೆ, ನಿಮ್ಮನ್ನು ಶಪಿಸುವ ಶಕ್ತಿ ನನಗಿದೆ" ಎಂದು ಕೋಪದಿಂದ ಮಾತಾಡಿದಳು.

ಅವಳ ಮಾತು ಕೇಳಿ ಅಶ್ವಿನೀ ದೇವತೆಗಳು ಭಯಪಟ್ಟರು. ಅವಳನ್ನು ಒಲಿತು ಮಾಡಿಕೊಳ್ಳುವ ಉದ್ದೇಶದಿಂದ, "ಅಮ್ಮಾ, ಶೀಲದ ವಿಷಯದಲ್ಲಿ ನೀನು ಲೀಲಾವತಿಗಿಂತಲೂ ಹೆಚ್ಚಿನವಳು. ನಿನಗೆ ಮೆಚ್ಚಿದ್ದೇವೆ. ವರ ಕೇಳಿಕೋ, ಸಂತೋಷದಿಂದ ಕೊಡುತ್ತೇವೆ" ಎಂದರು.

ಅವಳು ಸುಮ್ಮನಿರುವುದನ್ನು ನೋಡಿ, ಅವಳಿಗೆ ಬೇಕಾದ ವರಕ್ಕೆ ತಕ್ಕ ಅವಕಾಶವನ್ನು ಅವರೇ ಹೇಳಿದರು. ಅದೇನೆಂದರೆ, ಚ್ಯವನನನ್ನು ಅವರು ತಮ್ಮ ಹಾಗೆಯೇ, ತಮ್ಮಷ್ಟೇ ವಯಸ್ಸೂ ಅಂದವೂ ಇರುವಂತೆ ಮಾಡುತ್ತಾರೆ. ಹಾಗೆ ಒಂದೇ ರೂಪದಲ್ಲಿರುವ ಮೂವರೊಳಗೆ ಸುಕನ್ಯೆ ಒಬ್ಬನನ್ನು ಗಂಡನೆಂದು ಅರಿಸಿಕೊಳ್ಳಬೇಕು !

ಸುಕನ್ಯೆ ಆಶ್ರಮಕ್ಕೆ ಹೋಗಿ ಚ್ಯವನನೊಂದಿಗೆ ಅಶ್ವಿನೀ ದೇವತೆಗಳು ಹೇಳಿದ ಮಾತುಗಳನ್ನು ಹೇಳಿ, ಏನು ಮಾಡಬೇಕೆಂದು ಕೇಳಿದಳು. ಅವರು ಹೇಳಿದಂತೆಯೇ ಮಾಡಲು ಚ್ಯವನನು ಒಪ್ಪಿಗೆ ಕೊಟ್ಟನು. ಸುಕನ್ಯೆ ಅವರನ್ನು ತನ್ನ ಆಶ್ರಮಕ್ಕೆ ಕರೆ ತಂದಳು.

ಅವರು ಹೇಳಿದ ಹಾಗೆ ಚ್ಯವನನು ಯುವಕನಾಗಬೇಕಾದರೆ ನೀರಿನಲ್ಲಿ ಮುಳುಗಬೇಕಾಗಿತ್ತು. ಚ್ಯವನನು ಆ ಮಾತಿಗೆ ಒಪ್ಪಿದನು. ಚ್ಯವನನು ಅಶ್ವಿನೀ ದೇವತೆಗಳೊಂದಿಗೆ ಕೆರೆಗಿಳಿದು ಅವರೊಂದಿಗೇ ಮುಳುಗಿದನು. ಆಮೇಲೆ ಮೂವರೂ ಒಂದೇ ರೂಪದಲ್ಲಿ ಕೆರೆಯಿಂದ ಮೇಲೆ ಬಂದರು. ಅವರಲ್ಲಿ ಸುಕನ್ಯೆ ತನ್ನ ಗಂಡನನ್ನು ಆರಿಸಿಕೊಳ್ಳಬೇಕಾಗಿತ್ತು.

ಸುಕನ್ಯೆ ಜಗದಂಬೆಯನ್ನು ಶರಣು ಹೋಗಿ ಧ್ಯಾನಮಾಡಿದಳು. ಅಂಬಾದೇವಿಯ ಅನುಗ್ರಹದಿಂದ ಅವಳಿಗೆ ದಿವ್ಯಜ್ಞಾನ ಉಂಟಾಯಿತು. ಕೆರೆಯಿಂದ ಮೇಲೆ ಬಂದು ನಿಂತ ಆ ಮೂವರಲ್ಲಿ ತನ್ನ ಗಂಡನು ಯಾರೆಂದು ಅವಳಿಗೆ ಗೊತ್ತಾಯಿತು. ಅವಳು ತನ್ನ ಗಂಡನನ್ನು ಸರಿಯಾಗಿ ತಿಳಿದು ಅವನ ಕೈ ಹಿಡಿದುದನ್ನು ನೋಡಿ ಅಶ್ವಿನೀ ದೇವತೆಗಳು ಅವಳ ಶೀಲವನ್ನು ತುಂಬಾ ಮೆಚ್ಚಿದರು.

ಚ್ಯವನನೂ ಸಹ ಅಶ್ವಿನೀ ದೇವತೆಗಳನ್ನು ಪ್ರಶಂಸಿಸುತ್ತ, "ನಿಮ್ಮ ಪುಣ್ಯದಿಂದ ನನಗೆ ಯೌವನವೂ, ಕಣ್ಣುಗಳೂ ಬಂದಿವೆ. ನಾನೀಗ



ಸುಂದರನೂ ಸುಕುಮಾರನೂ ಆಗಿರುವೆನು. ಉಪಕಾರಕ್ಕೆ ಪ್ರತ್ಯುಪಕಾರ ಮಾಡಬೇಕೆಂದಿದ್ದೇನೆ. ನನ್ನಿಂದ ನೀವು ಏನನ್ನು ಬಯಸುವಿರೋ ಹೇಳಬೇಕು " ಎಂದನು.

ಅಶ್ವಿನೀ ದೇವತೆಗಳು ಹೀಗೆಂದರು : "ನಾವು ವೈದ್ಯಕೀಯ ಮಾಡುವ ದೇವತೆಗಳೆಂಬ ನೆವನದಲ್ಲಿ ಇಂದ್ರನು ನಮಗೆ ಯಜ್ಞದಲ್ಲಿ ಸೋಮಪಾನ ಮಾಡುವ ಹಕ್ಕನ್ನು ಅಲ್ಲಗಳೆದಿದ್ದಾನೆ. ನಿನಗೆ ಸಾಧ್ಯವಾದರೆ ಆ ಹಕ್ಕು ನಮಗೆ ಬರುವಂತೆ ಮಾಡು " ಎಂದರು.

"ಆಗಲಿ. ಶರ್ಯಾತಿಯಿಂದ ಯಜ್ಞ ಮಾಡಿಸಿ, ನಿಮಗೆ ಸೋಮರಸ ಕೊಡಿಸುತ್ತೇನೆ" ಎಂದು ಚ್ಯವನನು ಅಶ್ವಿನೀ ದೇವತೆಗಳಿಗೆ ಮಾತುಕೊಟ್ಟನು. ಅಶ್ವಿನೀ ದೇವತೆಗಳು ತೃಪ್ತರಾಗಿ ಹೊರಟು ಹೋದರು. ಯೌವನ ಪಡೆದ ಚ್ಯವನನು ಸುಕನ್ಯೆಯೊಂದಿಗೆ ಆಶ್ರಮಕ್ಕೆ ಹಿಂದಿರುಗಿದನು.

ಹೀಗಿರುವಾಗ ಒಂದುದಿನ ಶರ್ಯಾತಿಯ ಪತ್ನಿಯರಲ್ಲಿ ಸುಕನ್ಯೆಯ ತಾಯಿಗೆ ತನ್ನ ಮಗಳು ಕುರುಡು ಮುದುಕ ಗಂಡನೊಂದಿಗೆ ಹೇಗಿರುವಳೋ, ಎಷ್ಟು ಸೊರಗಿದಳೋ ಎಂದು ಆಂದೋಳನೆಯುಂಟಾಯಿತು. ಶರ್ಯಾತಿಗೆ ಕೂಡಾ ತನ್ನ ಮಗಳನ್ನು ನೋಡಬೇಕೆನಿಸಿತು. ಅವನು ಪತ್ನಿಯನ್ನು ಕರೆದುಕೊಂಡು ರಥದ ಮೇಲೆ ಚ್ಯವನಾಶ್ರಮಕ್ಕೆ ಬಂದನು. ಅಲ್ಲಿ ಸುಂದರನಾದ ಪುರುಷನೊಂದಿಗೆ ಸುಕನ್ಯೆ ಇರುವುದನ್ನು ನೋಡಿ ಅವರಿಗೆ ಜುಪ್ಸೆನಿಸಿತು. ತಮ್ಮ ಮಗಳು ಮುದುಕ ಗಂಡನನ್ನು ಕೊಂದು, ಮತ್ತಾವನನ್ನೋ ವರಿಸಿಕೊಂಡಿದ್ದಾಳೆಂದು ವಿಪರೀತವಾಗಿ ತಿಳಿದು ಕೋಪಾವೇಶಗೊಂಡು ಬಾಯ್ದುಗಿದರು.

ಅಷ್ಟರಲ್ಲಿ ಸುಕನ್ಯೆ ತನ್ನ ತಂದೆ ತಾಯಂದಿರ ಕೋಪತಾಪಗಳನ್ನು ಹೋಗಲಾಡಿಸಿ, ನಡೆದ ಸಂಗತಿಯನ್ನೆಲ್ಲಾ ವಿವರಿಸಿ ಹೇಳಿದಳು. ಚ್ಯವನನು ಕೂಡಾ ಅದನ್ನೇ ಹೇಳಿ, ತಾನು ಅಶ್ವಿನೀ ದೇವತೆಗಳಿಗೆ ಕೊಟ್ಟ ಮಾತನ್ನು ಕುರಿತೂ ಹೇಳಿದನು. ತನ್ನ ಅಳಿಯನ ಮಾತನ್ನು ನಡೆಯಿಸಲು ಶರ್ಯಾತಿ ಯಜ್ಞ ಕಾರ್ಯಕ್ಕೆ ತಲೆ ಹಾಕಿದನು. ಯಜ್ಞ ನಡೆಯುವ ಸ್ಥಳಕ್ಕೆ ದೇವತೆಗಳೊಂದಿಗೆ ಇಂದ್ರನೂ, ಅಶ್ವಿನೀ ದೇವತೆಗಳೂ ಸಹಾ ಬಂದರು.

ಯಜ್ಞದ ಸಂದರ್ಭದಲ್ಲಿ ಚ್ಯವನನು ಅಶ್ವಿನೀ ದೇವತೆಗಳಿಗೆ ಸೋಮರಸವನ್ನು ನೀಡಿದನು. ಆಗ ಇಂದ್ರನು ತಡೆದು "ಇವರು ವೈದ್ಯಕೀಯ ಮಾಡುವವರು. ಸೋಮಪಾನಕ್ಕೆ ಅರ್ಹರಲ್ಲ!" ಎಂದನು.

"ಇವರಿಗೆ ಸೋಮವನ್ನು ಕೊಡಲಿಕ್ಕಾಗಿಯೇ ಈ ರಾಜನಿಂದ ಯಜ್ಞವನ್ನು ಮಾಡಿಸಿದ್ದೇನೆ. ಇವರನ್ನು ತಡೆಯುವ ಹಕ್ಕು ನಿನಗಿಲ್ಲ" ಎಂದು ಹೇಳಿ ಚ್ಯವನನು ಅಶ್ವಿನೀ ದೇವತೆಗಳಿಗೆ ಸೋಮರಸವನ್ನು ಕೊಟ್ಟನು.

ಇಂದ್ರನು ಕೋಪದಿಂದ ಚ್ಯವನನನ್ನು ಕೊಲ್ಲಲು ವಜ್ರಾಯುಧವನ್ನು ಪ್ರಯೋಗಿಸಿದನು. ಚ್ಯವನನು ತನ್ನ ತಪಃಶಕ್ತಿಯಿಂದ ಇಂದ್ರನ ಕೈಯನ್ನು ಸ್ತಂಭನಗೊಳಿಸಿ, ಹೋಮಕುಂಡದಿಂದ ಭಯಂಕರಾಕೃತಿಯ ಕೃತ್ಯಭೂತವನ್ನು ಸೃಷ್ಟಿಸಿದನು. ಆ ಭೂತವು ಇಂದ್ರನನ್ನು ನುಂಗಲು ಬರಲು, ದೇವತೆಗಳೂ ಇಂದ್ರನೂ ನಡುಗಿದರು.

"ಇಂದ್ರಾ! ಚ್ಯವನನಿಗೇ ಶರಣಾಗು! ಕೃತ್ಯಭೂತವನ್ನು ಅವನೇ ನಿಗ್ರಹಿಸುವನು" ಎಂದನು ಬೃಹಸ್ಪತಿ. ಇಂದ್ರನು ಹಾಗೆಯೇ ಚ್ಯವನನಿಗೆ ಶರಣಾಗಿ ಅಪಾಯದಿಂದ ಪಾರಾದನು. ಯಜ್ಞವು ಸಾಂಗವಾಗಿ ನಡೆಯಿತು.





# ದೇವೀಭಾಗವತ

ಒಂದು ಕಾಲದಲ್ಲಿ ಪ್ರಸಿದ್ಧವಾದ ಸೂರ್ಯ ವಂಶದಲ್ಲಿ ಅರುಣನೆಂಬ ರಾಜನಿದ್ದನು. ಅವನ ಕುಮಾರನ ಹೆಸರು ಸತ್ಯವ್ರತ. ಸತ್ಯವ್ರತನ ಗುಣವೂ ಪ್ರವರ್ತನೆಯೂ ಸ್ವಲ್ಪವೂ ಒಳ್ಳೆಯದಾಗಿರಲಿಲ್ಲ. ಪ್ರಜೆಗಳನ್ನು ನಾನಾ ವಿಧವಾಗಿ ಕಾಡಿಕೊಂಡಿದ್ದನು. ಅವನನ್ನು ಕಂಡರೆ ಎಲ್ಲರಿಗೂ ಭಯವೇ.

ಒಂದು ಸಾರಿ ಅವನು ಮದುವೆಗೆ ಸಿದ್ಧಳಾಗಿದ್ದ ಒಬ್ಬಳು ಬ್ರಾಹ್ಮಣ ಕನ್ಯೆಯನ್ನು ಅಪಹರಿಸಿಕೊಂಡು ಹೋಗಿ ಬಿಟ್ಟನು. ಅವಳ ಬಂಧುಗಳು ಸಂತಾಪ ಪಡುತ್ತ ಗುಂಪಾಗಿ ಕೂಡಿ ಅರುಣ ರಾಜನೊಂದಿಗೆ ಮೊರೆಯಿಡಲು ಹೋದರು. ಅವರನ್ನು ನೋಡಿದ ಕೂಡಲೇ ತನ್ನ ಮಗನು ಏನೋ ಮಾಡಬಾರದ ಕೆಲಸವನ್ನು ಮಾಡಿ, ಅವರಿಗೆ ಕಷ್ಟ ತಂದಿದ್ದಾನೆಂದು ಅರುಣ ರಾಜನಿಗೆ ಗೊತ್ತಾಯಿತು. ಅವನು ಶೋಕಾರ್ತ ಬ್ರಾಹ್ಮಣರನ್ನು ನೋಡಿ, "ನನ್ನ ಮಗನು ತಿಳಿದೋ ತಿಳಿಯದೆಯೋ ನಿಮಗೇನಾದರೂ ಕೇಡು ಮಾಡಿದನೇ ? ಹೇಗೆ ಹೇಳುವುದೆಂದು ಹೆದರಬೇಕಾಗಿಲ್ಲ. ನಿರ್ಭಯವಾಗಿ ಹೇಳಿರಿ" ಎಂದನು.

"ಹೌದು ಮಹಾರಾಜಾ. ಮದುವೆಗೆ ತಯಾರಾಗಿರುವ ನಮ್ಮ ಹುಡುಗಿಯನ್ನು ರಾಜಕುಮಾರನು ಎತ್ತಿಕೊಂಡು ಹೋದನು" ಎಂದರು ಬ್ರಾಹ್ಮಣರು.

ಅದನ್ನು ಕೇಳಿ ರಾಜನು ಅತ್ಯಂತ ಶೋಕದಿಂದ· ತನ್ನ ಮಗನನ್ನು ಕರೆಯಿಸಿ, "ದುಷ್ಟನೇ ! ನಿನ್ನ ಹೆಸರನ್ನೇ ಹಾಳು ಮಾಡಿಕೊಂಡೆಯಲ್ಲೋ ! ಇಂತಹ ಪಾಪದ ಕಾರ್ಯವನ್ನು ಏತಕ್ಕಾಗಿ ಮಾಡಿದೆ ? ನೀನು ಕ್ಷತ್ರಿಯ ವಂಶದಲ್ಲಿ ಹುಟ್ಟಬೇಕಾದವನೇ ಅಲ್ಲ, ತಪ್ಪಿ ನನ್ನ ಮಗನಾಗಿ ಹುಟ್ಟಿದೆ. ನನ್ನ ಕಣ್ಣೆದಿರಿಗೆ ಕಾಣಬೇಡ ! ಎತ್ತಾದರೂ ಹೊರಟು ಹೋಗು !" ಎಂದು ಛೀತ್ಕರಿಸಿದನು.

ಸತ್ಯವ್ರತನು ಸ್ವಲ್ಪವೂ ಶಂಕಿಸದೆ, "ಎಲ್ಲಿಗೆ ಹೋಗಲಿ ಹೇಳಿರಿ !" ಎಂದನು.

"ನಾಯಿಗಳನ್ನು ತಿನ್ನುವವರು ಕೂಡಾ ಮಾಡಲಾರದ ಕೆಲಸ ಮಾಡಿರುವ ನೀನು ಚಾಂಡಾಲರ

೨೪. ತ್ರಿಶಂಕು ಕಥೆ



ಕೇರಿಗೇ ನಡೆ, ಹೋಗು ! ಕಾಡಾಡಿಯಾಗಿ ತಿರುಗು. ನಿನ್ನಿಂದಾಗಿ ನಮ್ಮ ವಂಶಕ್ಕೆ ಹಾಳು ಕಳಂಕ ಬಂತು !" ಎಂದು ಸಂಕಟ ಪಡುತ್ತ ಹಣೆ ಬಡೆದುಕೊಂಡನು ಆರುಣರಾಜ.

ಅವರ ಕುಲ ಪುರೋಹಿತನಾದ ವಸಿಷ್ಠನೂ ಆರುಣ ರಾಜನ ವೈಖರಿಯನ್ನೇ ಎತ್ತಿ ಹಿಡಿದು ಸತ್ಯವ್ರತನನ್ನು ಜರೆದನು. ಆದುದರಿಂದ ಸತ್ಯವ್ರತನು ತಂದೆಯ ಮೇಲಿನ ಕೋಪವನ್ನು ಕೂಡಾ ವಸಿಷ್ಠನ ಮೇಲೆಯೇ ಸರಿಸಿ, ತುಂಬಿದ ತನ್ನ ಕೋಪವನ್ನು ಅಡಗಿಸಿಕೊಂಡು, ತನ್ನ ಬಿಲ್ಲು ಬಾಣಗಳೊಂದಿಗೆ ಕಾಡಿಗೆ ಹೊರಟು ಹೋದನು. ಅಲ್ಲಿ ಕಾಡುಬೇಡರ ಮಧ್ಯದಲ್ಲಿ ತಿರುಗಿಕೊಂಡಿದ್ದನು.

ಇದ್ದ ಒಬ್ಬ ಮಗನನ್ನು ತೊಲಗಿಸಿಕೊಂಡ ಆರುಣ ರಾಜನು ಮತ್ತೆ ಪುತ್ರರಾಗಬೇಕೆಂಬ ವಾಂಛೆಯಿಂದ ತಪಸ್ಸು ಮಾಡಲು ಆರಣ್ಯಕ್ಕೆ ಹೋದನು. ರಾಜ್ಯವನ್ನು ಮಂತ್ರಿ ಪುರೋಹಿತರು ನೋಡಿಕೊಂಡಿರಲು, ಆ ರಾಜ್ಯದಲ್ಲಿ ಅಧರ್ಮವು ನಡೆಯಿತೆಂಬ ಕಾರಣದಿಂದ ಇಂದ್ರನು ಮಳೆ ಸುರಿಸುವುದನ್ನು ನಿಲ್ಲಿಸಿದನು. ಅದರಿಂದ ದೇಶಕ್ಕೆ ಬರಬಂದಿತು.

ಅದೇ ಕಾಲದಲ್ಲಿ ವಿಶ್ವಾಮಿತ್ರನು ತನ್ನ ಹೆಂಡತಿಯನ್ನೂ ಮಕ್ಕಳನ್ನೂ ಬಿಟ್ಟು ತಪಸ್ಸು ಮಾಡಲಿಕ್ಕಾಗಿ ಕೌಶಿಕೀ ನದಿಯ ತೀರಕ್ಕೆ ಹೋದನು. ಇಷ್ಟರಲ್ಲಿ ಬರಗಾಲದಪೀಡೆ ತೀವ್ರವಾಗಿ ಬಂದುದರಿಂದ ವಿಶ್ವಾಮಿತ್ರನ ಮಕ್ಕಳು ಹಸಿವಿನ ಕಾಟ ತಡೆಯಲಾರದೆ "ಅಮ್ಮಾ ! ಅನ್ನ ! ಹಸಿವೆ !" ಎಂದು ಅಳತೊಡಗಿದರು. ಅದನ್ನು ನೋಡಿ ವಿಶ್ವಾಮಿತ್ರನ ಪತ್ನಿ ಮಹಾಶೋಕಕ್ಕೆ ಗುರಿಯಾದಳು. ಅವಳ ಹತ್ತಿರ ಚಿಕ್ಕಾಸು ಕೂಡಾ ಇರಲಿಲ್ಲ. ಗಂಡನು ತನ್ನನ್ನೂ ಮಕ್ಕಳನ್ನೂ ಬರೀ ಮನೆಯಲ್ಲಿ ಬಿಟ್ಟು ತಪಸ್ಸು ಮಾಡಲು ಹೋದರೆ ಅವಳೇನು ಮಾಡಬೇಕು ? ರಾಜನ ಬಳಿಗಾದರೂ ಹೋಗಿ ಯಾಚಿಸೋಣವೆಂದರೆ ರಾಜನೂ ನಗರದಲಿಲ್ಲ. ಅವನೂ ಮಕ್ಕಳ ಬಯಕೆಯಿಂದ ತಪಸ್ಸಿಗೇ ಹೋಗಿದ್ದಾನೆ. ದಿಕ್ಕು ತಪ್ಪಿದ ಹೆಂಗುಸೊಬ್ಬಳು ಮಕ್ಕಳ ಹಸಿವಿನ ಸಂಕಟವನ್ನು ಹೇಗೆ ತಾನೇ ತೀರಿಸಲು ಸಾಧ್ಯ ? ಇದೇನೂ ಒಂದೆರಡು ಹೊತ್ತಿನ ಮಾತೂ ಅಲ್ಲ. ಅವಳು ತೀವ್ರವಾದ ಆಲೋಚನೆಯಿಂದ ಬೆಂದು ಸುಟ್ಟು ಹೋಗುತ್ತಿದ್ದಳು.

"ಎಲ್ಲರೂ ಹಸಿವಿನಿಂದ ಒಣಗಿ ಸತ್ತು ಹೋಗುವುದಕ್ಕಿಂತ, ಮನಸ್ಸನ್ನು ಕಲ್ಲು ಮಾಡಿ ಒಬ್ಬ ಮಗನನ್ನು ಮಾರಿ ಬಿಟ್ಟರೆ ಸ್ವಲ್ಪ ಹಣ ಕೈಗೆ ಬರುತ್ತದೆ. ಮಾರಲ್ಪಟ್ಟವನು ಕೊಳ್ಳಲ್ಪಟ್ಟವರ ಮನೆಯಲ್ಲಿ ತಿಂದುಂಡುಕೊಂಡಿರುತ್ತಾನೆ. ಹೀಗೆ ಸ್ವಲ್ಪ ಕಾಲ ಪ್ರಾಣ ಉಳಿಸಿಕೊಳ್ಳಬಹುದು. ಮತ್ತೇನು ಮಾಡಲಿ? ಯಾವ ತಾಯಿಗೂ ಬರಬಾರದ ಪರಿಸ್ಥಿತಿ ನನಗೆ ಬಂದಿತು !" ಎಂದು ಒಂದು ನಿಶ್ಚಯಕ್ಕೆ ಬಂದಳು ವಿಶ್ವಾಮಿತ್ರನ ಹೆಂಡತಿ.



ಆಮೇಲೆ ತಡ ಮಾಡದೆ ಅವಳು ತನ್ನ ಕುಮಾರರಲ್ಲಿ ಮಧ್ಯಮದವನ ಕೊರಳಿಗೆ ದರ್ಭೆಯ ದಾರವನ್ನು ತಗಲಿಸಿ, ಅವನನ್ನು ವಿಕ್ರಯ ಪಶುವಿನ ಹಾಗೆ ಕರೆದುಕೊಂಡು ಮನೆಯಿಂದ ಹೊರಟಳು. ಉಳಿದ ಮಕ್ಕಳಿಬ್ಬರೂ ತಾಯಿಯ ಸೆರಗಿನ ತುದಿಯನ್ನು ಹಿಡಿದು "ಎಲ್ಲಿಗೆ ಹೋಗುವಿಯಮ್ಮಾ ?" ಎಂದು ಕೇಳಿದರು. ತಾಯಿ ಆ ಮಕ್ಕಳಿಗೆ ಮನೆಯಲ್ಲಿರುವಂತೆ ಹೇಳಿ ಮುಂದು ವರಿಯಲು, ಮೂವರು ಕುಮಾರರೂ ಅಳ ತೊಡಗಿದರು.

ಆಕಸ್ಮಿಕವಾಗಿ ಆ ಕಡೆಗೇ ಬಂದಿದ್ದ ಸತ್ಯವ್ರತನು ಹೃದಯದ್ರಾವಕವಾದ ಆ ದೃಶ್ಯವನ್ನು ನೋಡಿ, ಆ ತಾಯಿಯೊಂದಿಗೆ, "ಏನಮ್ಮಾ ಇದು? ಏನು ಬಂತು ನಿನಗೆ ? ಎದೆಯೊಡೆಯುವ ಹಾಗೆ ಅಳುತ್ತಿರುವ ಈ ಹುಡುಗನ ಕೊರಳಿಗೆ ಹಗ್ಗಕಟ್ಟಿ ಎಲ್ಲಿಗೆ ಎಳೆದುಕೊಂಡು ಹೋಗುತ್ತಿರುವೆ ? ಏನು ನಡೆಯಿತು ? ಯಾರು ನೀನು ?" ಎಂದು ಕೇಳಿದನು.

"ವಿಶ್ವಾಮಿತ್ರನೆಂಬ ಮಹಾ ಪುರುಷನು ಹೆಂಡತಿಯಾದ ನನ್ನನ್ನೂ, ಈ ಮಕ್ಕಳನ್ನೂ ಬಿಟ್ಟು ತಪಸ್ಸು ಮಾಡಲು ಹೋಗಿ ಬಿಟ್ಟನು. ಆ ಮಹಾತ್ಮನ ಪತ್ನಿಯಾದ ನನಗೆ ದಿಕ್ಕಿಲ್ಲದಾಯಿತಪ್ಪಾ. ಕೈಯಲ್ಲಿ ಚಿಕ್ಕಾಸಿಲ್ಲ ! ಬರಗಾಲದ ಪೆಟ್ಟಿನಿಂದ ದಾನಧರ್ಮಗಳೆಲ್ಲಾ ನಿಂತಿವೆ. ಮಕ್ಕಳ ತಾಯಿಯಾದ ನಾನು ಏನು ತಾನೇ ಮಾಡಲಿ ? ಮಕ್ಕಳನ್ನು ಪೋಷಿಸದೆ ಹೇಗಿರಲಿ ? ಅದಕ್ಕೇ ಇವನನ್ನು ಮಾರಲು ಒಯ್ಯುತ್ತಿದ್ದೇನೆ." ಎಂದಳು ವಿಶ್ವಾಮಿತ್ರನ ಹೆಂಡತಿ.

"ಛೀ ಛೀ ! ಇದೇನು ಕೆಲಸ ತಾಯೀ ? ನೀನು ನಿನ್ನ ಆಶ್ರಮಕ್ಕೆ ಹಿಂದಿರುಗಿ ಹೋಗು. ದಿನಾ ನಿನ್ನ ಮಕ್ಕಳಿಗಾಗಿ ಆಹಾರವನ್ನು ಮೂಟೆ ಗಟ್ಟಿ ತಂದು ಆಶ್ರಮದ ಮರದ ಮೇಲೆ ಇಡುತ್ತೇನೆ. ಹೇಳಿದ ಮಾತು ತಪ್ಪುವವನಲ್ಲ ನಾನು. ಸ್ವಲ್ಪಕಾಲದ ಮೇಲೆ ನಿನ್ನ ಗಂಡ ಬಂದೇ ಬರುತ್ತಾನೆ. ಚಿಂತೆ ಬಿಡಮ್ಮ" ಎಂದನು ಸತ್ಯವ್ರತ. ಅವನ ಮಾತು ಅವಳ ಹೃದಯಕ್ಕೆ ಹಾಲೆರೆದಂತಾಯಿತು. ಆ ಮಾತಿನಿಂದಲೇ ಅರ್ಧ ಹಸಿವೆ ಕಡಿಮೆಯಾದಂತಾಯಿತು. ಸಂತೋಷದಿಂದ ಅವಳು ಮಕ್ಕಳನ್ನು ಕರೆದುಕೊಂಡು ಆಶ್ರಮಕ್ಕೆ ಹಿಂದಿರುಗಿದಳು. ಅವಳ ಮಧ್ಯದ ಮಗನ ಕೊರಳಿಗೆ ಹಗ್ಗ ಕಟ್ಟಿದ್ದರಿಂದ ಅವನಿಗೆ ಗಾಲವನೆಂದು ಹೆಸರು ಬಂತು. ಸತ್ಯವ್ರತನು ಹೇಳಿದ ಮಾತು ತಪ್ಪಲಿಲ್ಲ. ದಿನಾ ಅರಣ್ಯದಲ್ಲಿ ಸಿಗುವ ಆಹಾರ ವಸ್ತುಗಳನ್ನು ಸಂಗ್ರಹಿಸಿ ಮೂಟೆ ಗಟ್ಟಿ ತಂದು ವಿಶ್ವಾಮಿತ್ರನ ಆಶ್ರಮದ ಹತ್ತಿರವಿರುವ ಮರದ ಕೊಂಬೆಗೆ ಕಟ್ಟಿಡುತ್ತಿದ್ದನು. ಆದರಿಂದ ವಿಶ್ವಾಮಿತ್ರನ ಹೆಂಡತಿ, ಮಕ್ಕಳಿಗೆ ಅಡಿಗೆ ಮಾಡಿ ಹಾಕಿ, ಉಳಿದುದನ್ನು ತಾನೂ ತಿನ್ನುತ್ತ ಹೀಗೆಯೇ ದಿನ ದೂಡಿಕೊಂಡು ಬಂದಳು. ಅವಳ ಕಷ್ಟಗಳು ಸೌಮ್ಯಸ್ಥಿತಿಗೆ ಬಂದುವು.

ಅರುಣರಾಜನು ಪುತ್ರವಾಂಛೆಯಿಂದ ತಪಸ್ಸು ಮಾಡುವೆನೆಂದು ಅರಣ್ಯಕ್ಕೆ ಹೋದಂದಿನಿಂದ,



ವಸಿಷ್ಠನು ಅಯೋಧ್ಯೆಯಲ್ಲೇ ಇದ್ದು ರಾಜನಗರವನ್ನೂ, ಅರಮನೆಯನ್ನೂ ನೋಡಿಕೊಂಡಿದ್ದನು.

ಒಂದು ದಿನ ಅರಣ್ಯದಲ್ಲಿ ಆಹಾರ ಪದಾರ್ಥಗಳೇನೂ ಸಿಗದ್ದರಿಂದ ಸತ್ಯವ್ರತನು ನಗರಕ್ಕೆ ಬಂದನು. ಅಲ್ಲಿ ಅವನ ಕಣ್ಣಿಗೆ ವಸಿಷ್ಠನ ಹೋಮಧೇನು ಕಾಣಿಸಿತು. ವಸಿಷ್ಠನೆಂದರೆ ಮೊದಲೇ ಕೋಪದಲ್ಲಿರುವ ಸತ್ಯವ್ರತನು ಅವನ ಹೋಮಧೇನುವನ್ನು ಅಪಹರಿಸಿ ಕಟುಕರವನಿಗೆ ಮಾರಿ, ಆ ಹಣದಿಂದ ಆಹಾರ ಧಾನ್ಯ ಮೊದಲಾದುವನ್ನು ಕೊಂಡುಕೊಂಡು ಮೂಟೆ ಕಟ್ಟಿ ವಿಶ್ವಾಮಿತ್ರನ ಆಶ್ರಮದ ಮರದ ಕೊಂಬೆಗೆ ಕಟ್ಟಿ ಇಟ್ಟು ಬಿಟ್ಟನು. ಆ ದೊಡ್ಡ ಮೂಟೆಯನ್ನು ನೋಡಿ, ಅದರ ವಿವರ ತಿಳಿಯದ ವಿಶ್ವಾಮಿತ್ರನ ಹೆಂಡತಿಯೂ ಮಕ್ಕಳೂ ಸಂತೋಷದಿಂದ ಅದನ್ನು ಉಪಯೋಗಿಸಿ ಕೊಂಡರು.

ತನ್ನ ಹೋಮಧೇನು ಅಪಹೃತವಾಗಿ ಸಾಯಲಿಕ್ಕೆ ಸತ್ಯವ್ರತನೇ ಕಾರಣವೆಂಬ ಸಂಗತಿ ವಸಿಷ್ಠನಿಗೆ ಗೊತ್ತಾಯಿತು. ಅವನು ಅರಣ್ಯಕ್ಕೆ ಹೋಗಿ ಸತ್ಯವ್ರತನನ್ನು ಕಂಡು ಹಿಡಿದು, "ಎಲವೋ ದುಷ್ಟ ಕಿರಾತಕಾ! ನೀನೊಬ್ಬ ತ್ರಿಶಂಕು! ಒಂದು ಸಾರಿ ಬ್ರಾಹ್ಮಣ ಬಾಲಿಕೆಯನ್ನು ಅಪಹರಿಸಿದೆ, ಎರಡನೇ ಸಾರಿ ತಂದೆಯ ಕೋಪಕ್ಕೆ ಈಡಾಗಿ ತೊಲಗಿಸಲ್ಪಟ್ಟೆ, ಈಗ ಕುಲಪುರೋಹಿತನಾದ ನನಗೇ ಕೇಡು ಬಗೆದು ಗೋಹತ್ಯದ ಮಹಾಪಾಪ ಮಾಡಿದೆ. ಇಂತಹ ನೀನು ಇನ್ನು ಮೇಲೆ ತ್ರಿಶಂಕುವೆನಿಸಿ ಪಿಶಾಚಾಕಾರದಲ್ಲಿ ಅಲೆದು ಕೊಂಡಿರು! ಇದೇ ನಿನಗೆ ತಕ್ಕದಂಡನೆ!" ಎಂದು ಶಾಪಕೊಟ್ಟನು.

ಅಂದಿನಿಂದ ಸತ್ಯವ್ರತನು ಪಿಶಾಚಿಯ ರೂಪದಲ್ಲಿ ತಿರುಗುತ್ತ, ತ್ರಿಶಂಕುವೆಂದು ಕರೆಯಲ್ಪಟ್ಟನು. ಆ ಸ್ಥಿತಿಯಲ್ಲಿ ಅವನು ಒಬ್ಬ ಮುನಿಕುಮಾರನಿಂದ ಮಹಾದೇವಿಯ ನವಾಕ್ಷರೀ ಮಂತ್ರೋಪದೇಶವನ್ನು ಪಡೆದು, ದೇವಿಯನ್ನು ಧ್ಯಾನಿಸಿಕೊಂಡು ತಪಸ್ಸನ್ನು ಮಾಡಲು ತೊಡಗಿದನು. ನವಾಕ್ಷರೀ ಮಂತ್ರವನ್ನು ಜಪಿಸುತ್ತ ಸ್ವಲ್ಪ ಕಾಲ ತಪಸ್ಸಿನಲ್ಲಿದ್ದು, ದೇವಿಯ ಪ್ರೇರಣೆಯಂತೆ, ತಪಸ್ಸಿನಿಂದ ಎದ್ದು ಬ್ರಾಹ್ಮಣರ ಬಳಿಗೆ ಹೋಗಿ, "ಅಯ್ಯಾ, ನಾನು ಮಹಾದೇವಿಯನ್ನು ಹೋಮದಿಂದ ತೃಪ್ತಿ ಪಡಿಸಬೇಕಾಗಿದೆ. ನೀವು ಋತ್ವಿಕ್ಕುಗಳಾಗಿದ್ದು ನನ್ನಿಂದ ಹೋಮ ಮಾಡಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು. ನನ್ನ ಹೆಸರು ಸತ್ಯವ್ರತ" ಎಂದನು.

ಆಗ ಬ್ರಾಹ್ಮಣರು ಅವನನ್ನು ನೋಡಿ, "ನಿನ್ನನ್ನು ನಿನ್ನ ಕುಲಗುರುವೇ ಪಿಶಾಚಾಗುವಂತೆ ಶಪಿಸಿದ್ದಾರೆ. ಇಂತಹ ನೀನು ವೇದೋಕ್ತ ಕರ್ಮಗಳನ್ನು ಮಾಡಲು ಅರ್ಹನಲ್ಲ. ಮಾಡಿಸಲು ನಮ್ಮಿಂದಲೂ ಸಾಧ್ಯವಿಲ್ಲ" ಎಂದು ಅವನನ್ನು ಜರೆದರು.

ಇದರಿಂದ ಸತ್ಯವ್ರತನಿಗೆ ಜೀವಿತದ ಮೇಲೆಯೇ ವಿರಕ್ತಿ ಹುಟ್ಟಿತು. ತಂದೆ ತನಗೆ ರಾಜ್ಯವೇನೂ ಇಲ್ಲದಂತೆ ಮಾಡಿದನು. ಕುಲಗುರು ತನ್ನನ್ನು ಶಪಿಸಿ

ಬಿಟ್ಟನು. ತಾನೀಗ ಯಾವ ಕೆಲಸಕ್ಕೂ ಉಪಯೋಗ ವಿಲ್ಲದವನಾಗಿಬಿಟ್ಟೆನು. ಇನ್ನು ಬದುಕಿರುವುದರಿಂದ ಪ್ರಯೋಜನವೇನಿದೆ ?

ಹೀಗೆಂದುಕೊಂಡು ತ್ರಿಶಂಕುವಾದ ಸತ್ಯವ್ರತನು ಒಣ ಕಟ್ಟಿಗೆಗಳಿಂದ ಒಂದು ಚಿತಿಯನ್ನು ಪೇರಿಸಿ, ಅದರಲ್ಲಿ ಬಿದ್ದು ಸುಟ್ಟು ಭಸ್ಮವಾಗಿ ಹೋಗಲು ನಿಶ್ಚಯಿಸಿದನು. ಚಿತಿ ಉರಿಯುತ್ತಿರಲು ಅವನು ಸ್ನಾನಮಾಡಿ ಹಾರಲು ಸಿದ್ಧನಾಗಿ ದೇವಿಯನ್ನು ಧ್ಯಾನಿಸುತ್ತಿರುವಾಗ, ಆಕಾಶದಲ್ಲಿ ದೇವಿ ಪ್ರತ್ಯಕ್ಷಳಾಗಿ, "ಕಂದಾ ! ಅವಸರಪಡಬೇಡ. ವೃದ್ಧನಾದ ನಿನ್ನ ತಂದೆ ಈಗ ಶಾಂತನಾಗಿ ನಿನಗೆ ರಾಜ್ಯವನ್ನು ಕೊಟ್ಟು, ನಿರ್ವಿಚಾರದಿಂದ ತಪಸ್ಸು ಮಾಡಲು ಸಿದ್ಧನಾಗುತ್ತಾನೆ. ನನ್ನ ಪ್ರೀತಿಗೆ ಪಾತ್ರನಾಗಿರುವ ನಿನಗೆ ಪಟ್ಟಾಭಿಷೇಕವಾಗಲಿದೆ. ನಾಳೆಯೇ ನಿನ್ನ ತಂದೆಯ ಅಪ್ಪಣೆಯಂತೆ ಮಂತ್ರಿಗಳು ನಿನ್ನನ್ನು ಕರೆದುಕೊಂಡು ಹೋಗಲು ಬರುತ್ತಾರೆ. ಇನ್ನು ಚಿಂತಿಸಬೇಡ" ಎಂದು ಹೇಳಿ ಅದೃಶ್ಯಳಾದಳು. ಅವಳ ಕೃಪೆಯಿಂದ ಅವನ ಪಿಶಾಚರೂಪವು ಹೋಯಿತು.

ತ್ರಿಶಂಕು ತುಂಬಾ ಸಮಾಧಾನಗೊಂಡು, ಆತ್ಮಹತ್ಯದ ಪ್ರಯತ್ನವನ್ನು ಬಿಟ್ಟನು. ಈ ನಡುವೆ ನಾರದನು ತಪಸ್ಸಿನಲ್ಲಿರುವ ಅರುಣರಾಜನ ಬಳಿಗೆ ಹೋಗಿ, "ನಿನ್ನ ಮಗನು ಜೀವಿತದ ಮೇಲೆ ವಿರಕ್ತಿ ಹುಟ್ಟಿ ಆತ್ಮಹತ್ಯ ಮಾಡಿಕೊಳ್ಳಲು ನಿಶ್ಚಯಿಸಿದ್ದಾನೆ. ಅದರ ಪಾಪದ ಅಂಶ ನಿನಗೂ ಬರಲಿದೆ" ಎಂದನು. ಅದನ್ನು ಕೇಳಿ ಅರುಣನು ತಪಸ್ಸು ಬಿಟ್ಟು, ರಾಜಧಾನಿಗೆ ಹಿಂದಿರುಗಿ ಮಂತ್ರಿಗಳನ್ನು ಕರೆದು, "ನಾನು ಕೋಪಾವೇಶದಿಂದ ಹೋಗೆಂದ ಕೂಡಲೇ ನನ್ನ ಮಗನು ಅರಣ್ಯಕ್ಕೆ ಹೋಗಿಬಿಟ್ಟನು. ಅವನನ್ನು ಹುಡುಕಿ ಕರೆತಂದು ಪಟ್ಟಾಭಿಷೇಕ ಮಾಡಿರಿ. ನಾನು ಇನ್ನು ಯಾವ ಕೋರಿಕೆಯೂ ಇಲ್ಲದೆ ತಪಸ್ಸು ಮಾಡಿ ದೇಹಬಿಡಲು ನಿಶ್ಚಯಿಸಿದ್ದೇನೆ" ಎಂದನು.



ಅದರಂತೆ ಮಂತ್ರಿಗಳು ಹೋಗಿ ತ್ರಿಶಂಕುವಾದ ಸತ್ಯವ್ರತನನ್ನು ಕರೆದುತಂದು ತಂದೆಯ ಇದಿರು ನಿಲ್ಲಿಸಿದರು. ವಿಚಾರಗ್ರಸ್ತಮುಖದ, ಜಡೆಗಟ್ಟಿಹೋದ ತಲೆಗೂದಲಿನ ಮಗನನ್ನು ನೋಡಿ ಅರುಣನಿಗೆ ತುಂಬಾ ಪಶ್ಚಾತ್ತಾಪವಾಯಿತು. ರಾಜ್ಯಾರ್ಹತೆಗೆ ತಕ್ಕವನಾಗುವಂತೆ ಮಗನಿಗೆ ತಕ್ಕ ಶಿಕ್ಷಣದಿಂದ ತಿದ್ದಿಸದೆ, ಕಾಡಿಗೆ ಓಡಿಸಿದ ತನ್ನ ಮೇಲೆಯೇ ಅರುಣನಿಗೆ ಅಸಹ್ಯವೂ ನಾಚಿಗೆಯೂ ಉಂಟಾಯಿತು. ತನ್ನ ಇದಿರಿನಲ್ಲಿ ನಿಂತ ಮಗನನ್ನು ಆಲಿಂಗಿಸಿ, ರಾಜನೀತಿಯನ್ನು ಅವನಿಗೆ ಬೋಧಿಸಿ, ತಾನೇ ಇದ್ದು ಪಟ್ಟಾಭಿಷೇಕವನ್ನೂ ಮಾಡಿಸಿದನು. ಅಂಬಾದೇವಿಯ ಕೃಪೆಗೆ ಪಾತ್ರನಾದ ತ್ರಿಶಂಕುವಿನ ಮೇಲಿದ್ದ ವಸಿಷ್ಠನ ಶಾಪಪ್ರಭಾವವು ಹೋದುದರಿಂದ, ವಸಿಷ್ಠನೂ ಕೋಪವನ್ನು ಮರೆತು ಪ್ರಸನ್ನನಾಗಿದ್ದನು.

ಅರುಣನು ನಿರ್ವಿಚಾರಭಾವದಿಂದ ತಪಸ್ಸಿಗೆ ಹೋದ ಮೇಲೆ ತ್ರಿಶಂಕು ಒಳ್ಳೆಯ ರೀತಿಯಲ್ಲಿ



ರಾಜ್ಯಭಾರ ಮಾಡುತ್ತ ಅನೇಕ ಯಜ್ಞಗಳನ್ನು ಮಾಡಿ ಒಳ್ಳೆಯ ಕೀರ್ತಿಯನ್ನು ಗಳಿಸಿದನು. ಅವನಿಗೆ ಹರಿಶ್ಚಂದ್ರನೆಂಬ ಮಗನಾದನು. ಹರಿಶ್ಚಂದ್ರನು ಯುಕ್ತವಯಸ್ಸಿಗೆ ಬಂದ ಮೇಲೆ, ತ್ರಿಶಂಕು ತನ್ನ ಮಗನಿಗೆ ರಾಜ್ಯಾಭಿಷೇಕವನ್ನು ಮಾಡಿ, ತಾನು ದೇಹದೊಂದಿಗೇ ಸ್ವರ್ಗಕ್ಕೆ ಹೋಗಬೇಕೆಂಬ ಒಂದು ಹೊಸ ನಿಶ್ಚಯಕ್ಕೆ ಬಂದನು.

ಅದಕ್ಕಾಗಿ ಅವನು ವಸಿಷ್ಠನ ಬಳಿಗೆ ಹೋಗಿ, ಆ ಮಹಾಮುನಿಗೆ ನಮಸ್ಕಾರ ಮಾಡಿ, "ಮಹಾತ್ಮಾ, ನಾನು ಈ ಶರೀರದೊಂದಿಗೇ ಸ್ವರ್ಗಕ್ಕೆ ಹೋಗಿ, ಆ ಸ್ವರ್ಗ ಸುಖಗಳನ್ನು ಅನುಭವಿಸಬೇಕೆಂದಿದ್ದೇನೆ. ಅಲ್ಲಿಯ ಅಪ್ಸರೆಯರೊಂದಿಗೆ ತಿರುಗುತ್ತ, ನಂದನೋದ್ಯಾನಗಳಲ್ಲಿ ವಿಹರಿಸುತ್ತ, ಗಾಂಧರ್ವಗಾನಗಳನ್ನು ಈ ಕಿವಿಗಳಿಂದಲೇ ಸವಿಯಬೇಕೆಂದಿದ್ದೇನೆ. ಅದಕ್ಕೆ ತಕ್ಕುದಾದ ಯಜ್ಞವೇನಾದರೂ ಇದ್ದರೆ ಮಾಡಿಸಿಕೊಡಬೇಕು" ಎಂದು ಕೇಳಿಕೊಂಡನು.

"ಅಯ್ಯಾ ರಾಜನೇ, ಮಾನವ ಶರೀರದೊಂದಿಗೆ ಸ್ವರ್ಗಕ್ಕೆ ಹೋಗಲು ಯಾವ ಮಾನವರಿಗೂ ಸಾಧ್ಯವಿಲ್ಲ. ಯಜ್ಞಯಾಗ ಮಾಡಿದವರು ಮಾನವ ಶರೀರ ಬಿಟ್ಟು ಸ್ವರ್ಗಕ್ಕೆ ಹೋಗುತ್ತಾರೆಯೇ ಹೊರತು ನಿನ್ನ ಅಪೇಕ್ಷೆಯಂತೆ ಎಂದಿಗೂ ಸಾಧ್ಯವಿಲ್ಲ. ಯಜ್ಞ ಮಾಡಿದುದರಿಂದ ಉಂಟಾಗುವ ಹೊಸ ಶರೀರದೊಂದಿಗೆ ನೀನು ಅಪೇಕ್ಷಿಸುವ ಎಲ್ಲಾ ಸುಖಗಳನ್ನೂ ಅನುಭವಿಸಬಹುದು. ಈ ಶರೀರದೊಂದಿಗೆ ನಿನ್ನನ್ನು ಸ್ವರ್ಗಕ್ಕೆ ಕಳುಹಿಸುವ ಶಕ್ತಿ ನನಗಿಲ್ಲ" ಎಂದು ಖಂಡಿತವಾಗಿ ಹೇಳಿದನು ವಸಿಷ್ಠ. ತ್ರಿಶಂಕು ಅದನ್ನು ಬೇರೆ ವಿಧವಾಗಿ ಅರ್ಥ ಮಾಡಿಕೊಂಡನು. ವಸಿಷ್ಠನು ಹಿಂದಿನ ಕೋಪವನ್ನು ಮರೆತಿಲ್ಲವೆಂತಲೇ ಹೀಗೆ ಹೇಳುವನೆಂದು ತ್ರಿಶಂಕು ಅಂದುಕೊಂಡನು.

"ನೀವು ಏಕೆ ಹೀಗೆ ಹೇಳುವಿರೆಂದು ನನಗೆ ಗೊತ್ತು. ನೀವು ಒಬ್ಬರೇ ಪುರೋಹಿತರಲ್ಲ. ನಾನು ನನಗೆ ಬೇಕಾದ ಯಜ್ಞವನ್ನು ಬೇರೆ ಪುರೋಹಿತರಿಂದ ಮಾಡಿಸಿಕೊಳ್ಳುತ್ತೇನೆ" ಎಂದನು.

ಕೂಡಲೇ ವಸಿಷ್ಠನು ಕೋಪದಿಂದ, "ದುಷ್ಟ ಮನಸ್ಸಿನವನೇ! ಮರೆತ ನನ್ನ ಕೋಪವನ್ನು ಬಡಿದೆಬ್ಬಿಸುವೆಯಾ? ನಿನ್ನಂಥ ಗೋಹತ್ಯ, ಕನ್ಯಾಪಹರಣ ಮಾಡಿದವನು ಹೊಸ ಶರೀರ ಧರಿಸಿದರೂ ಸ್ವರ್ಗಸಿಗದು! ನೀನು ಮತ್ತೆ ಚಾಂಡಾಲನಾಗು!" ಎಂದು ಶಪಿಸಿಬಿಟ್ಟನು.

ಕೂಡಲೇ ತ್ರಿಶಂಕುವಿಗೆ ಚಾಂಡಾಲ ರೂಪವೂ ಬಂದುಬಿಟ್ಟಿತು. ಆ ರೂಪದಿಂದ ಅವನಿಗೆ ಮನೆಗೆ ಹೋಗಲು ಮನಸ್ಸು ಒಪ್ಪಲಿಲ್ಲ. ಹೆಂಡತಿ ಎಷ್ಟೋ ಪತಿವ್ರತೆಯಾದರೂ ಚಾಂಡಾಲನಾಗಿ ಬಂದ ಗಂಡನನ್ನು ಸಹಿಸಲಾರಳು. ಮಂತ್ರಿಗಳೂ, ಬಂಧುಗಳೂ ಸಹಾ ಹತ್ತಿರ ಸುಳಿಯಲು ಬಿಡರು. ಇನ್ನು ಮೇಲೆ ಬದುಕಿರುವುದಕ್ಕಿಂತ ಸಾಯುವುದೇ ಒಳ್ಳೆಯದು. ಇನ್ನೇನೂ ಕರ್ತವ್ಯವಿಲ್ಲ. ರಾಜ್ಯಭಾರ ಮಾಡಿ

ಯಾಯಿತು. ಮಗನಿಗೆ ರಾಜ್ಯಾಭಿಷೇಕವೂ ಆಯಿತು. ಇನ್ನು ಬೆಂಕಿಯಿಂದಲೋ ವಿಷದಿಂದಲೋ ಆತ್ಮ ಹತ್ಯ ಮಾಡಿಕೊಂಡರೆ ಮತ್ತೆ ಬರುವ ಜನ್ಮದಲ್ಲಿ ಕೂಡಾ ದುಃಖವೇ ಬಿಡದೆ ಬೆಂಬತ್ತಿಕೊಂಡಿರುತ್ತದೆ. ಆದುದರಿಂದ ಈ ದೇಹವಿರುವವರೆಗೆ ಚಾಂಡಾಲ ನಾಗಿಯೇ ಬದುಕಿ ಕರ್ಮ ಫಲವನ್ನು ಅನುಭವಿ ಸುವುದೇ ಒಳ್ಳೆಯದು. ಹೀಗೆಂದುಕೊಂಡು ಅವನು ಗಂಗಾತೀರಕ್ಕೆ ಹೋಗಿ, ಅಲ್ಲಿ ಅರಣ್ಯದಲ್ಲೇ ವಾಸ ಮಾಡ ತೊಡಗಿದನು.

ತಂದೆಗೆ ಉಂಟಾದ ದುರ್ಗತಿ ಹರಿಶ್ಚಂದ್ರನಿಗೆ ಗೊತ್ತಾಯಿತು. ಅವನು ಗಂಗಾತೀರಕ್ಕೆ ತನ್ನ ಮಂತ್ರಿಗಳನ್ನು ಕಳುಹಿಸಿದನು. ಅವರು ತ್ರಿಶಂಕು ವನ್ನು ನೋಡಿ, "ಮಹಾತ್ಮಾ, ನಿಮ್ಮ ಮಗನು ನಿಮ್ಮನ್ನು ಕರೆದುಕೊಂಡು ಬರಲು ಹೇಳಿದ್ದಾನೆ. ನೀವು ಮೊದಲಿನ ಹಾಗೆಯೇ ರಾಜ್ಯಭಾರ ಮಾಡಿ ಕೊಂಡಿರಬಹುದು. ವಸಿಷ್ಠರನ್ನು ಹೇಗಾದರೂ ಒಲಿತು ಮಾಡಿಕೊಳ್ಳಬಹುದು" ಎಂದರು.

"ನಾನು ಈ ಅವತಾರದಲ್ಲಿ ನಗರಕ್ಕೆ ಬರಲಾರೆ. ನನ್ನ ಮಗನೇ ರಾಜ್ಯವಾಳಿಕೊಂಡಿರಲಿ" ಎಂದು ಹೇಳಿ ಅವರನ್ನು ಹಿಂದಿರುಗಿಸಿದನು ತ್ರಿಶಂಕು. ಮಂತ್ರಿಗಳು ಹಿಂದಿರುಗಿ ತ್ರಿಶಂಕುವಿನ ಆಜ್ಞೆಯನ್ನು ಹರಿಶ್ಚಂದ್ರನಿಗೆ ಹೇಳಿದರು. ಆದರಂತೆ ಹರಿಶ್ಚಂದ್ರನೇ ರಾಜ್ಯವಾಳಿಕೊಂಡಿದ್ದನು. ತ್ರಿಶಂಕು ಜಗನ್ಮಾತೆಯನ್ನು ಧ್ಯಾನಿಸುತ್ತ ಗಂಗಾತೀರದಲ್ಲೇ ತಪಸ್ಸಿನಲ್ಲಿದ್ದನು.

ಹೀಗಿರುವಾಗ ವಿಶ್ವಾಮಿತ್ರನು ತನ್ನ ತಪಸ್ಸನ್ನು ಪೂರ್ತಿ ಮಾಡಿ ತನ್ನ ಹೆಂಡತಿ ಮಕ್ಕಳನ್ನು ನೋಡಲು ಆಶ್ರಮಕ್ಕೆ ಹೊರಟನು. ಆಗ ಅವನಿಗೆ ಒಂದೇ ಸಮನೆ ಹಸಿವಾಗ ತೊಡಗಿತು. ತಾನು ತಪಸ್ಸು ಮಾಡಿಕೊಂಡಿದ್ದಾಗ ಬರಗಾಲಬಂದ ಸಂಗತಿ ಅವನಿಗೆ ಗೊತ್ತಿತ್ತು. ಅದು ಇನ್ನೂ ಇರುವಂತಿದೆ. ತನ್ನ ಹೆಂಡತಿ ಮಕ್ಕಳು ಹೇಗೆ ಅದನ್ನು ತಡೆದುಕೊಂಡಿ



ರುವರೋ ಅವನಿಗೆ ತಿಳಿಯದು. ಆ ಯೋಚನೆ ಬಂದಾಗ ಅವನ ಹಸಿವೆ ಇನ್ನಷ್ಟು ಹೆಚ್ಚಿತು. ದಾರಿ ಯಲ್ಲಿ ಒಬ್ಬ ಚಾಂಡಾಲನ ಮನೆಯನ್ನು ಪ್ರವೇಶಿಸಿ, ಆಹಾರಕ್ಕಾಗಿ ಅವನ ಮನೆಯ ಗಡಿಗೆಯೊಳಗೆ ಕೈ ಹಾಕಿ ಅದರಲ್ಲಿ ಸಿಕ್ಕಿದನ್ನು ತಿನ್ನುವಾಗಲೇ ಚಾಂಡಾಲನ ಕಣ್ಣಿಗೆ ಬಿದ್ದನು. ವಿಶ್ವಾಮಿತ್ರನು ಚಾಂಡಾಲನೊಂದಿಗೆ ತಪಸ್ವಿಯಾದ ತಾನು ಹಸಿವೆ ಯನ್ನು ತಾಳಲಾಗದೆ ಕಳ್ಳತನದಿಂದ ಸಿಕ್ಕಿದ್ದನ್ನು ತಿಂದೆನೆಂದನು.

"ಅಯ್ಯಾ, ಇದು ನಾಯಿ ಮಾಂಸ. ನೀವು ಅಧರ್ಮಕ್ಕೆ ಕೈ ಹಾಕಿದಿರಿ" ಎಂದನು ಚಾಂಡಾಲ.

"ಹಸಿವೆ ಧರ್ಮವನ್ನು ನೋಡದು. ನಾನು ಇದನ್ನು ತಿಂದುದು ಅಧರ್ಮವಾದರೆ ಅದರ ದೋಷ ಮೇಘದೇವನದು!" ಎಂದನು ವಿಶ್ವಾಮಿತ್ರ.

ವಿಶ್ವಾಮಿತ್ರನು ಹಾಗೆ ಹೇಳಿದ ಕೂಡಲೇ ಆನೆಯ ಸೊಂಡಿಲುಗಾತ್ರದ ಧಾರೆಗಳಿಂದ ಮಳೆ ಸುರಿಯಿತು.

ವಿಶ್ವಾಮಿತ್ರನು ಅಲ್ಲಿಂದ ಹೊರಟು ಮನೆಗೆ ಬಂದನು. ಹೇಗೆ ದಿನ ಕಳೆದಿರೆಂದು ಗಂಡನು ಕೇಳಿದಾಗ, ತ್ರಿಶಂಕು ತಮ್ಮನ್ನು ಹೇಗೆ ಕಾಪಾಡಿದನೆಂಬ ಸಂಗತಿಯನ್ನು ಹೆಂಡತಿ ಹೇಳಿದಳು. ತ್ರಿಶಂಕು ತಮಗಾಗಿಯೇ ವಸಿಷ್ಠನ ಶಾಪಕ್ಕೆ ಒಳಗಾದನೆಂಬ ಸಮಾಚಾರ ತಿಳಿದು ವಿಶ್ವಾಮಿತ್ರನ ಮನಸ್ಸು ತ್ರಿಶಂಕುವಿನ ಕಡೆಗೆ ತಿರುಗಿತು. ಕೂಡಲೇ ವಿಶ್ವಾಮಿತ್ರನು ತ್ರಿಶಂಕುವನ್ನು ಹುಡುಕುತ್ತಾ ಹೋಗಿ, ಅವನನ್ನು ನೋಡಿ, " ರಾಜಾ, ನೀನು ನನ್ನ ಹೆಂಡತಿಗೂ ಮಕ್ಕಳಿಗೂ ಉಪಕಾರಮಾಡಿರುವೆ. ನಾನು ನಿನಗೆ ಪ್ರತ್ಯುಪಕಾರ ಮಾಡಲು ಬಂದಿದ್ದೇನೆ. ನಿನಗಾಗಿ ಏನು ಮಾಡಲಿ ? " ಎಂದನು.

ತ್ರಿಶಂಕು ವಸಿಷ್ಠನನ್ನು ಕೇಳಿದಂತೆಯೇ ತನ್ನನ್ನು ಮರ್ತ್ಯಶರೀರದೊಂದಿಗೆ ಸ್ವರ್ಗಕ್ಕೆ ಕಳುಹಿಸುವಂತೆ ವಿಶ್ವಾಮಿತ್ರನನ್ನು ಕೇಳಿಕೊಂಡನು.

ಆಗಲೆಂದು ಹೇಳಿ ವಿಶ್ವಾಮಿತ್ರನು ಮೊದಲು ವಸಿಷ್ಠನ ಶಾಪವನ್ನು ತೊಲಗಿಸಲು ನೋಡಿದನು. ಅದಕ್ಕಾಗಿ ಯಜ್ಞ ಮಾಡಲು ಹವಣಿಸಿದಾಗ, ವಸಿಷ್ಠನು ಯಾವ ಮುನಿಗಳೂ ಯಜ್ಞಕ್ಕೆ ಹೋಗದಂತೆ ತಡೆ ವಿಧಿಸಿದನು.

ಆಗ ವಿಶ್ವಾಮಿತ್ರನು ತನ್ನ ತಪಃಶಕ್ತಿಯನ್ನೆಲ್ಲಾ ತ್ರಿಶಂಕುವಿಗೆ ಧಾರೆಯೆರೆದುಕೊಟ್ಟು, " ಇನ್ನು ನೀನು ಸ್ವೇಚ್ಛೆಯಾಗಿ ಸ್ವರ್ಗಕ್ಕೆ ಹೋಗು, ನಿನ್ನನ್ನು ಯಾರೂ ತಡೆಯಲಾರರು!" ಎಂದನು. ವಿಶ್ವಾಮಿತ್ರನು ಕೊಟ್ಟ ತಪಃಶಕ್ತಿಯಿಂದ ತ್ರಿಶಂಕು ಹಕ್ಕಿಯ ಹಾಗೆ ಹಾರುತ್ತ ಸ್ವರ್ಗದವರೆಗೂ ಹೋದನು. ಚಾಂಡಾಲನ ಆಕಾರದಲ್ಲಿರುವ ಮನುಷ್ಯನೊಬ್ಬ ಸ್ವರ್ಗಕ್ಕೆ ಬರುವುದನ್ನು ನೋಡಿ, ದೇವತೆಗಳು ಇಂದ್ರನೊಂದಿಗೆ ಆ ಸಂಗತಿ ಹೇಳಿದರು. ಇಂದ್ರನು ಓಡಿ ಬಂದು ತ್ರಿಶಂಕುವನ್ನು ಅಡ್ಡಗಿಸಿ, " ಚಾಂಡಾಲನಾದ ನೀನು ಸ್ವರ್ಗಕ್ಕೆ ಹೇಗೆ ಬರುತ್ತೀ?" ಎಂದು ಹೇಳಿ ತ್ರಿಶಂಕುವನ್ನು ದೂಡಿಬಿಟ್ಟರು.

ತ್ರಿಶಂಕು ಭೂಮಿಯ ಕಡೆಗೆ ಬೀಳುತ್ತ, " ದೇವತೆಗಳು ನನ್ನನ್ನು ಸ್ವರ್ಗದಿಂದ ದೂಡಿದರು ! " ಎಂದು ಗಟ್ಟಿಯಾಗಿ ಕೂಗಿದನು.

ಕೂಡಲೇ ವಿಶ್ವಾಮಿತ್ರನು ತನ್ನ ಅಪಾರವಾದ ತಪಃಶಕ್ತಿಯಿಂದ ತ್ರಿಶಂಕುವನ್ನು ಮಧ್ಯಾಕಾಶದಲ್ಲೇ ನಿಲ್ಲಿಸಿ ಕೆಳಗೆ ಬೀಳದಂತೆ ಮಾಡಿದನು. ಅಷ್ಟು ಮಾತ್ರವಲ್ಲದೆ ತ್ರಿಶಂಕುವಿಗಾಗಿಯೇ ಮತ್ತೊಂದು ಸ್ವರ್ಗಲೋಕವನ್ನು ಸೃಷ್ಟಿಸಿ ಕೊಟ್ಟನು. ಈ ಸಂಗತಿ ಇಂದ್ರನಿಗೆ ಗೊತ್ತಾಯಿತು. ಅವನು ವಿಶ್ವಾಮಿತ್ರನ ಬಳಿಗೆ ಬಂದು ಹೊಸ ಸ್ವರ್ಗವನ್ನು ಉಪಸಂಹರಿಸಿಕೊಳ್ಳುವಂತೆ ಹೇಳಿ, ತ್ರಿಶಂಕುವಿಗೆ ಹೊಸ ಶರೀರವನ್ನು ಕೊಟ್ಟು, ತನ್ನೊಂದಿಗೆ ತನ್ನ ಸ್ವರ್ಗಕ್ಕೇ ಕರೆದುಕೊಂಡು ಹೋದನು.





# ದೇವೀಭಾಗವತ

ವಿಶ್ವಾಮಿತ್ರನು ತನ್ನ ತಪಸ್ಸಿನ ಶಕ್ತಿಯಿಂದ ತ್ರಿಶಂಕುವನ್ನು ಸ್ವರ್ಗಕ್ಕೆ ಕಳುಹಿಸಿಕೊಟ್ಟ ಮೇಲೆ, ತ್ರಿಶಂಕು ಪುತ್ರನಾದ ಹರಿಶ್ಚಂದ್ರನು ರಾಜ್ಯಭಾರ ಮಾಡಿಕೊಂಡಿದ್ದನು. ಅವನಿಗೆ ಸಂತಾನ ಭಾಗ್ಯ ಉಂಟಾಗಲಿಲ್ಲ. ಒಂದು ದಿನ ಅವನು ಕುಲಪುರೋಹಿತನಾದ ವಸಿಷ್ಠನನ್ನು ನೋಡಿ, "ಮಹಾತ್ಮರೇ, ನೀವು ದೈವಜ್ಞರಾಗಿ ಮಂತ್ರವೇತ್ತರಾಗಿ ಎಲ್ಲಾ ಬಲ್ಲವರಾಗಿರುವಿರಿ. ಆದುದರಿಂದ ನನಗೆ ಸಂತಾನವಾಗದಿರುವ ಕಾರಣವೇನೆಂಬುದನ್ನು ನೀವೇ ತಿಳಿದು ಹೇಳಬೇಕು. ನನ್ನ ಪ್ರಾರಬ್ಧ ಹೇಗಿದೆಯೋ ನಾನರಿಯೆ." ಎಂದು ದೀನನಾಗಿ ಕೇಳಿಕೊಂಡನು.

"ರಾಜಾ, ಸಂತಾನವಿಲ್ಲದಿರುವುದು ದೊಡ್ಡ ದುಃಖವೆಂಬ ಮಾತು ನಿಜವೇ. ನಾನೊಂದು ಉಪಾಯ ಹೇಳುತ್ತೇನೆ. ಸಂತಾನಕಾರಕನೆಂದು ಪ್ರಸಿದ್ಧನಾಗಿರುವವನು ವರುಣನೇ. ಆದುದರಿಂದ ನೀನು ಆ ವರುಣನನ್ನು ಭಕ್ತಿ ಶ್ರದ್ಧೆಗಳಿಂದ ಪೂಜಿಸಿ ತೃಪ್ತಿಪಡಿಸಿದರೆ ಅವನ ದಯೆಯಿಂದ ಸಂತಾನವಂತನಾಗಬಹುದು. ಮನುಷ್ಯ ಪ್ರಯತ್ನವಿಲ್ಲದೆ ಸುಮ್ಮನೆ ದೈವಾನುಕೂಲತೆಯಾಗದೆಂಬ ಸಂಗತಿ ನಿನಗೆ ತಿಳಿಯದುದೇನೂ ಅಲ್ಲ" ಎಂದನು ವಸಿಷ್ಠ.

ಹರಿಶ್ಚಂದ್ರನು ವಸಿಷ್ಠನ ಮಾತಿನ ಮೇಲೆ ವಿಶ್ವಾಸವಿಟ್ಟು, ಗಂಗಾತೀರಕ್ಕೆ ಹೋಗಿ ವರುಣನನ್ನು ಧ್ಯಾನಿಸುತ್ತ ತೀವ್ರ ತಪಸ್ಸಿಗೆ ಕುಳಿತನು. ಹಾಗಿರುವಾಗ ಒಂದು ದಿನ ವರುಣನು ಅವನ ಮುಂದೆ ಪ್ರತ್ಯಕ್ಷನಾಗಿ ಏನು ವರಬೇಕೆಂದು ಕೇಳಿದನು.

ಹರಿಶ್ಚಂದ್ರನು ಅತ್ಯಾನಂದದಿಂದ, ತನಗೆ ಒಬ್ಬ ಪುತ್ರನನ್ನು ಪ್ರಸಾದಿಸಿ, ಸಂತಾನಹೀನನೆಂಬ ತನಗಿರುವ ಅಪವಾದವನ್ನು ಹೋಗಲಾಡಿಸಬೇಕೆಂದು ವರುಣನನ್ನು ಪ್ರಾರ್ಥಿಸಿದನು.

"ಹರಿಶ್ಚಂದ್ರಾ, ನಿನಗೆ ಉತ್ತಮ ಪುತ್ರನನ್ನೇ ಕೊಡುತ್ತೇನೆ. ಆದರೆ ಒಂದು ನಿಬಂಧನೆಗೆ ನೀನು ಒಪ್ಪಬೇಕು, ಆ ಪುತ್ರನನ್ನು ಯಜ್ಞಪಶುವಾಗಿ ಮಾಡಿ ನನಗೇ ಬಲಿಕೊಡಬೇಕು. ಇದಕ್ಕೆ ಒಪ್ಪಿದರೆ ಮಾತ್ರ ನಿನಗೆ ಪುತ್ರ ಹುಟ್ಟುತ್ತಾನೆ." ಎಂದು



ವರುಣನು ಮುಗುಳು ನಗುತ್ತಾ ಹೇಳಿದನು. ಹರಿಶ್ಚಂದ್ರನಿಗೆ ಗಲ್ಲದ ಮೇಲೆ ಪೆಟ್ಟು ಬಿದ್ದಂತೆ ಕೇಳಿಸಿತು ಆ ಮಾತು. ಬೇರೇನೂ ಉಪಾಯಗಾಣದೆ, "ಗೊಡ್ಡು ಮನುಷ್ಯ ಅನಿಸಿಕೊಳ್ಳುವುದಕ್ಕಿಂತ ಇದು ಸ್ವಲ್ಪ ಮೇಲು. ನೀನು ಹೇಳಿದ ನಿಬಂಧನೆಗೆ ಒಪ್ಪು ತ್ತೇನೆ. ಪುತ್ರನನ್ನು ಪ್ರಸಾದಿಸು ದೇವಾ" ಎಂದನು.

"ಹಾಗೇ ಆಗಲಿ. ನಿನಗೆ ಪುತ್ರನು ಹುಟ್ಟುತ್ತಾನೆ. ಇನ್ನು ಮನೆಗೆ ಹೋಗು" ಎಂದು ಹೇಳಿ ವರುಣನು ಅಂತರ್ಧಾನನಾದನು.

ಹರಿಶ್ಚಂದ್ರನು ಮನೆಗೆ ಹಿಂದಿರುಗಿ ತನ್ನ ಪಟ್ಟ ಮಹಿಷಿಯಾದ ಶೈಬ್ಯಳೊಂದಿಗೆ ನಡೆದ ಸಂಗತಿಯನ್ನು ಹೇಳಿದನು. ಅವಳುಕೂಡಾ ತನ್ನ ಬಂಜೆ ಎಂಬ ಕಳಂಕ ಹೋಗುವುದೆಂದು ಸಂತೋಷಪಟ್ಟಳು.

ತರುವಾಯ ರಾಣಿ ಗರ್ಭಿಣಿಯಾಗಿ, ಹತ್ತನೇ ತಿಂಗಳಿನಲ್ಲಿ ಮನ್ಮಥನಂತಹ ಮಗನನ್ನು ಪ್ರಸವಿಸಿದಳು. ಹರಿಶ್ಚಂದ್ರನು ತನ್ನ ಮಗನಿಗೆ ರೋಹಿತನೆಂದು ನಾಮಕರಣ ಮಾಡಿದನು. ದೇಶದಲ್ಲೆಲ್ಲಾ ಪುತ್ರೋತ್ಸವವು ದೊಡ್ಡ ರೀತಿಯಲ್ಲಿ ನಡೆಯಿತು. ಆಗ ವರುಣನು ವೃದ್ಧ ಬ್ರಾಹ್ಮಣನ ರೂಪದಲ್ಲಿ ಹರಿಶ್ಚಂದ್ರನ ಬಳಿಗೆ ಬಂದು, ಸ್ವಸ್ತಿವಾಚನಗಳನ್ನು ಹೇಳಿ, ತಾನು ಯಾರೆಂಬುದನ್ನು ಅವನಿಗೆ ಮಾತ್ರ ತಿಳಿಸಿ, "ಹರಿಶ್ಚಂದ್ರಾ, ನಾನು ಕೊಟ್ಟ ವರದಿಂದ ನಿನ್ನ ಸಂತಾನಹೀನತೆಯ ದೋಷ ಹೋಯಿತು. ನೀನು ನನಗೆ ಕೊಟ್ಟ ಮಾತು ನೆನಪಿದೆಯಷ್ಟೆ? ಇನ್ನು ತಡಮಾಡದೆ ಚಿತ್ತಶುದ್ಧಿಯಿಂದ ಹೇಳಿದ ಮಾತಿನಂತೆ ನಿನ್ನ ಮಗನನ್ನು ಯಜ್ಞಪಶುಮಾಡಿ ನನಗೆ ಬಲಿ ಕೊಟ್ಟು, ಕೀರ್ತಿ ಶಾಲಿಯಾಗು" ಎಂದನು.

ಆ ಮಾತು ಕೇಳಿ ಹರಿಶ್ಚಂದ್ರನಿಗೆ ದೊಡ್ಡ ದಿಗಿಲು ಹಿಡಿಯಿತು. ಅಪರೂಪವಾಗಿ ತಪಸ್ಸುಮಾಡಿ ಪಡೆದ ಮುದ್ದಾದ ಈ ಎಳೆಗೂಸನ್ನು ವರುಣನಿಗೆ ಬಲಿ ಕೊಡುವುದು ಹೇಗೆ? ಕೈಯಾರೆ ಮಗನನ್ನು ಕೊಂದರೆ ಆ ಶೋಕವು ಸಾಯುವವರೆಗೂ ಉಳಿದಿರುತ್ತದೆ. ಆ ಮೇಲೆ ತಾನಾದರೂ ಬದುಕಿ ಉಳಿಯುವುದು ಸಾಧ್ಯವೆ? ತಾನುಸತ್ತರೆ ರಾಣಿಯ ಗತಿ ಏನಾದೀತು?

ಹರಿಶ್ಚಂದ್ರನು ಸ್ವಲ್ಪ ಧೈರ್ಯವನ್ನು ಕೂಡಿಸಿಕೊಂಡು, ವರುಣನಿಗೆ ವಿನಯದಿಂದ ಕೈ ಮುಗಿದು, "ದೇವಾ! ಹೆತ್ತಸೂತಕವು ತಂದೆಗೆ ಹತ್ತು ದಿನಗಳೂ, ತಾಯಿಗೆ ಒಂದು ತಿಂಗಳೂ ಇರುವ ಸಂಗತಿ ನಿನಗೆ ತಿಳಿಯದುದಲ್ಲ. ಇಷ್ಟರೊಳಗೆ ನಾವು ಯಜ್ಞದೀಕ್ಷೆ ಹಿಡಿಯಲು ಹೇಗೆ ಸಾಧ್ಯ? ಶುದ್ಧ ಕಾಲವು ಬರುವ ವರೆಗೆ ಕಾದಿರಲಾಗದೆ?" ಎಂದನು.

"ಹಾಗಾದರೆ ಒಂದು ತಿಂಗಳು ದಾಟಿದ ಮೇಲೆ ಬರುತ್ತೇನೆ." ಎಂದು ಹೇಳಿ ವರುಣನು ಹೊರಟು ಹೋದನು.

ಹರಿಶ್ಚಂದ್ರನಿಗೆ ಹೋದ ಪ್ರಾಣ ತಿರುಗಿ ಬಂದ ಹಾಗಾಯಿತು. ಅವನು ಬ್ರಾಹ್ಮಣರಿಗೆ ಗೋವು

ಗಳನ್ನೂ, ಎಳ್ಳನ್ನೂ, ಬಂಗಾರವನ್ನೂ, ಭೂಮಿಯನ್ನೂ ದಾನಮಾಡಿ, ಮಗನನ್ನು ನೋಡುತ್ತ ಆನಂದಪುಲಕಿತನಾಗುತ್ತಿದ್ದನು. ಮಗನ ಬಾಲಲೀಲೆಗಳಿಂದ ದಿನಗಳು ಹೋದುದೇ ತಿಳಿಯಲಿಲ್ಲ.

ಒಂದು ತಿಂಗಳು ಕಳೆಯಿತು. ವರುಣನು ಬ್ರಾಹ್ಮಣ ವೇಷದಲ್ಲಿ ಹರಿಶ್ಚಂದ್ರನ ಬಳಿಗೆ ಬಂದು, ಇನ್ನು ಯಜ್ಞಮಾಡುವಂತೆ ಹೇಳಿದನು.

ಹರಿಶ್ಚಂದ್ರನು ಭಾರವಾದ ಎದೆಯಿಂದ ವರುಣನಿಗೆ ನಮಸ್ಕಾರ ಮಾಡಿ, "ದೇವಾ ! ನಿನ್ನ ಬರುವಿಕೆಯಿಂದ ನನ್ನ ಮನೆ ಪಾವನವಾಯಿತು. ಈಗ ನಾನು ನನ್ನ ಕಂದನನ್ನು ಯಜ್ಞ ಪಶುವನ್ನಾಗಿ ಮಾಡಿ ಯಜ್ಞಮಾಡುವುದು ಹೇಗೆ ? ನಿನಗೆ ತಿಳಿಯದ ಸಂಗತಿ ಏನಿದೆ ? ಹಲ್ಲು ಮೊಳೆಯದ ಪಶು ಬಲಿಗೆ ಯೋಗ್ಯವಲ್ಲವೆನ್ನುವರಲ್ಲವೆ?" ಎಂದನು.

"ಸರಿ. ಹುಡುಗನಿಗೆ ಹಲ್ಲು ಮೊಳೆತಕೂಡಲೇ ಬಲಿ ಕೊಟ್ಟುಬಿಡು !" ಎಂದು ಹೇಳಿ ವರುಣನು ಹೊರಟು ಹೋದನು.

ರೋಹಿತನು ಬಾಲಲೀಲೆಗಳನ್ನು ತೋರಿಸುತ್ತ ಬೆಳೆಯುತ್ತಿರಲು, ಅವನಿಗೆ ಹಲ್ಲು ಮೊಳೆಯಿತು. ಆಗಲೇ ವರುಣನು ಹರಿಶ್ಚಂದ್ರನ ಬಳಿಗೆ ಬಂದು, ಯಜ್ಞಮಾಡಿ ಹುಡುಗನನ್ನು ಬಲಿ ಕೊಡುವಂತೆ ಹೇಳಿ ಕುಳಿತುಬಿಟ್ಟನು.

ಹರಿಶ್ಚಂದ್ರನು ವರುಣನಿಗೆ ಸಮಸ್ತ ಮರ್ಯಾದೆಗಳನ್ನೂ ಮಾಡಿ ವಿನಯದಿಂದ ಕೈಮುಗಿದು, "ದೇವಾ ! ನಿನಗೆ ತಿಳಿಯದುದು ಏನಿದೆ ? ಹುಟ್ಟುಕೂದಲನ್ನು ಇನ್ನೂ ತೆಗೆಯಲಿಲ್ಲ. ಚೌಲಕರ್ಮವಾಗಲಿಲ್ಲ. ಅಂತಹ ಮಗು ಯಜ್ಞಕರ್ಮಕ್ಕೆ ಸಲ್ಲಲಾರನೆಂದು ಹಿರಿಯರು ಹೇಳುತ್ತಾರಷ್ಟೇ ? ಚೌಲಕರ್ಮವಾದ ಕೂಡಲೇ ಹುಡುಗನನ್ನು ನಿನಗೆ ಬಲಿ ಕೊಡುತ್ತೇನೆ" ಎಂದನು ಹರಿಶ್ಚಂದ್ರ.

"ಎಲೋ ರಾಜನೇ, ನೀನು ಮಗನ ಮೇಲಿನ ಮಮಕಾರದಿಂದ ಸುಳ್ಳು ಹೇಳುತ್ತ ಅಲೆದಾಡಿಸುವಿ. ನಿನ್ನಲ್ಲಿ ಕಪಟವಿದೆಯೆಂದು ನನಗೆ ಕಾಣುತ್ತದೆ. ಎಚ್ಚರ ! ಚೌಲಕರ್ಮವಾದ ಕೂಡಲೇ ಮಗನನ್ನು





"ಅದನ್ನು ನಾನು ಮರೆಯಲಿಲ್ಲ ಸ್ವಾಮಿ. ಆದರೆ ಈ ಹುಡುಗ ಯಜ್ಞ ಪಶುವಾಗಲು ಉಪಯೋಗವಿಲ್ಲ. ಉಪನಯನವಾಗದೇ ಇವನಿಗೆ ದ್ವಿಜತ್ವ ಬಾರದು, ಅದುವರೆಗೂ ಇವನು ನಾಲ್ಕನೇ ವರ್ಣದವನೆಂದೇ ಲೆಕ್ಕವಲ್ಲವೇ ? ವಿಧ್ಯುಕ್ತವಾದ ಕರ್ಮಗಳಿಗೆ ಉಪನಯನವಾದ ಮೇಲೆಯೇ ಯೋಗ್ಯನಾಗುವನೆಂದು ನಿನಗೂ ತಿಳಿಯದ್ದಲ್ಲವಷ್ಟೇ ? ಅದೊಂದು ನಡೆದು ಹೋಗಲಿ" ಎಂದನು.

ಬ್ರಾಹ್ಮಣನಿಗೆ ಎಂಟನೆಯ ವಯಸ್ಸು ತುಂಬಿದಾಗಲೂ, ಕ್ಷತ್ರಿಯನಿಗೆ ಹನ್ನೊಂದನೆಯ ವಯಸ್ಸಿಗೂ, ವೈಶ್ಯನಿಗೆ ಹನ್ನೆರಡನೆಯ ವಯಸ್ಸಿಗೂ ಉಪನಯನ ಮಾಡಬೇಕೆಂದು ಶಾಸ್ತ್ರಗಳು ನಿರ್ಣಯಿಸಿವೆ. ಆದುದರಿಂದ ಹನ್ನೊಂದನೆಯ ವಯಸ್ಸಿನಲ್ಲಿ ರೋಹಿತನಿಗೆ ಉಪನಯನ ನಡೆಯಿಸಿ, ಶಾಸ್ತ್ರೋಕ್ತವಾಗಿ ಯಜ್ಞಮಾಡಿ, ಅದರಲ್ಲಿ ಅವನನ್ನು ಯಜ್ಞ ಪಶುವಮಾಡಿ ಬಲಿ ಕೊಡುತ್ತೇನೆಂದು ಹರಿಶ್ಚಂದ್ರನು ವರುಣನೊಂದಿಗೆ ಹೇಳಿದನು.

ಹರಿಶ್ಚಂದ್ರನ ಮಾತಿಗೆ ವರುಣನು ತೃಪ್ತನಾಗಿ ಹೊರಟು ಹೋದನು. ಆಮೇಲೆ ಹರಿಶ್ಚಂದ್ರನು ತನ್ನ ಮಗನನ್ನು ನೋಡುತ್ತ ಮುದ್ದಿಸುತ್ತ ಆನಂದಿಸುತ್ತ ದಿನಗಳನ್ನು ಎಣಿಸುತ್ತ ಕಾಲವನ್ನು ಕಳೆಯತೊಡಗಿದನು.

ಕಾಲಕ್ರಮದಲ್ಲಿ ರೋಹಿತನಿಗೆ ಹನ್ನೊಂದು ವಯಸ್ಸು ತುಂಬಿ ಹನ್ನೆರಡನೇ ವರ್ಷ ತಲೆಹಾಕಿತು. ಹರಿಶ್ಚಂದ್ರನ ಗುಂಡಿಗೆ ಭೀತಿಯಿಂದ ಹೊಡೆದುಕೊಳ್ಳತೊಡಗಿತು. ಮಗನಿಗೆ ಶಾಸ್ತ್ರೋಕ್ತವಾಗಿ ಬಹು ವೈಭವದಿಂದ ಉಪನಯನವನ್ನು ಜರುಗಿಸಿದ್ದೂ ಆಯಿತು. ವರುಣನು ಬಂದು ಯಜ್ಞ ಮಾಡುವಂತೆ ಹೇಳಿ ಹರಿಶ್ಚಂದ್ರನ ಮುಂದೆ ಕುಳಿತನು.

"ಯಜ್ಞ ಮಾಡಬೇಕು ನಿಜ. ನಾನೇನೂ ಒಲ್ಲೆ ಎನ್ನಲಾರೆ. ಆದರೆ ಹುಡುಗ ಈಗತಾನೇ ವೇದಾ

ನನಗೆ ಬಲಿ ಕೊಡದೇ ಹೋದ ಪಕ್ಷದಲ್ಲಿ ನಿನಗೆ ಘೋರವಾದ ಶಾಪ ಕೊಡುತ್ತೇನೆ. ಮಹಾತ್ಮನಾದ ಇಕ್ಷ್ವಾಕು ವಂಶದಲ್ಲಿ ಹುಟ್ಟಿ ಹೇಳಿದ ಮಾತು ನಡೆಯಿಸದೇ ಹೋದೆಯೆಂಬ ಅಪಕೀರ್ತಿಗೆ ಪಾಲಾಗಬೇಡ ! ಆ ಮೇಲೆ ಕ್ಷಮಿಸಲಾರೆನೆಂದು ತಿಳಿ ! ಎಚ್ಚರದಲ್ಲಿರು ! ಬರುತ್ತೇನೆ !" ಎಂದು ಹೇಳಿ ವರುಣನು ಹೊರಟು ಹೋದನು.

ರೋಹಿತನಿಗೆ ಚೌಲದ ಪ್ರಾಯ ಬಂದಿತು. ಹರಿಶ್ಚಂದ್ರನು ಮಗನ ಚೌಲವನ್ನು ವೈಭವದಿಂದ ಮಾಡಿ, ಹೆಂಡತಿಯೊಂದಿಗೆ ಮಗನನ್ನು ತೊಡೆಯಲ್ಲಿ ಕೂಡಿಸಿಕೊಂಡು ಕೊಂಡಾಡಿಕೊಂಡಿರುವಾಗ ವರುಣನು ಬಂದೇ ಬಂದನು.

"ರಾಜಾ, ಮಗನ ಚೌಲಕರ್ಮವಾಗಿ ಹುಟ್ಟು ಕೂದಲು ಹೋಯಿತಲ್ಲವೇ ? ಇನ್ನು ತಡವೇಕೆ ? ಯಜ್ಞವನ್ನು ಪ್ರಾರಂಭಿಸು !" ಎಂದನು ವರುಣ. ಹರಿಶ್ಚಂದ್ರನು ಕೂಡಲೇ ಉತ್ತರಕೊಟ್ಟನು :

ಭ್ಯಾಸಕ್ಕೆ ತೊಡಗಿದ್ದಾನೆ. ನನ್ನ ಮೇಲೆ ಅನುಗ್ರಹ ವಿಟ್ಟು ಇಷ್ಟು ಕಾಲ ತಾಳಿದ ಹಾಗೆ ಅವನ ವಿದ್ಯಾಭ್ಯಾಸ ಪೂರ್ತಿಯಾಗುವವರೆಗೂ ತಾಳು ದೇವಾ. ಆಮೇಲೆ ಖಂಡಿತವಾಗಿ ಬಲಿ ಕೊಡುತ್ತೇನೆ" ಎಂದನು ಹರಿಶ್ಚಂದ್ರ,

ವರುಣನಿಗೆ ಕೊಪ ಬಂದಿತು. "ರಾಜಾ, ನೀನು ಜಂಬುಕ ವಿನಯದಿಂದ ನನಗೆ ಸಮಾಧಾನ ಹೇಳುತ್ತಾ ಕಾಲಹರಣ ಮಾಡುವಿ. ಮಗನ ಮೇಲಿನ ಮಮಕಾರವನ್ನು ಬಿಡಲಾಗದೆ ನನ್ನನ್ನು ಹೀಗೆ ಆಟ ಆಡಿಸುವೆಯಾ? ಆದರೂ ತಾಳ್ಮೆ ವಹಿಸಿ, ನಿನ್ನ ಮಾತನ್ನು ನಂಬಿ ಈ ಸಾರಿ ಹೊರಟು ಹೋಗುತ್ತೇನೆ. ನಿನ್ನ ಮಗನ ವಿದ್ಯಾಭ್ಯಾಸ ಮುಗಿದ ಕೂಡಲೇ ಬರುತ್ತೇನೆ. ತಾಳ್ಮೆಗೂ ಒಂದು ಎಲ್ಲೆ ಇದೆ ಎಂಬುದು ನೆನಪಿರಲಿ!" ಎಂದು ಹೇಳಿ ವರುಣನು ಹೊರಟುಹೋದನು.



ಮತ್ತೆ ಕೆಲವು ವರ್ಷ ಕಳೆಯಲು ರೋಹಿತನ ವಿದ್ಯಾಭ್ಯಾಸ ಮುಗಿಯುತ್ತಾ ಬರಲು, "ವರುಣನು ಬಂದು ಕುಳಿತುಬಿಡುತ್ತಾನಲ್ಲಾ" ಎಂಬ ಭೀತಿಯಿಂದ ಹರಿಶ್ಚಂದ್ರನ ಮುಖ ದಿನದಿಂದ ದಿನಕ್ಕೆ ಕುಂದುತ್ತಾ ಹೋಯಿತು. ಅದನ್ನು ಗಮನಿಸಿ ರೋಹಿತನು, "ಏಕೆ ಹೀಗೆ ಚಿಂತೆಯಿಂದಿರುವಿರಿ ಅಪ್ಪಾ" ಎಂದು ಒತ್ತಾಯಿಸಿ ಕೇಳಿ ಕಾರಣವನ್ನು ತಿಳಿದುಕೊಂಡನು.

ಆದರಿಂದ ರೋಹಿತನಿಗೂ ಪ್ರಾಣಭಯ ಹಿಡಿಯಿತು. ಮಂತ್ರಿಯ ಮಗನೊಂದಿಗೆ ಈ ಸಮಾಚಾರ ಹೇಳಿದನು. ಅವನ ಸಲಹೆಯಂತೆ ರೋಹಿತನು ಒಂದು ದಿವ ಯಾರಿಗೂ ಹೇಳದೆ ಅರಣ್ಯಕ್ಕೆ ಓಡಿಹೋದನು.

ಮನೆಯಲ್ಲಿ ಮಗನನ್ನು ಕಾಣದೆ ಹರಿಶ್ಚಂದ್ರನು ಇನ್ನಷ್ಟು ದಿಗಿಲಿಗೆ ಬಿದ್ದನು. ಭಟರನ್ನು ಕಳುಹಿಸಿ ಎಲ್ಲೆಲ್ಲೋ ಹುಡುಕಿಸಿದನು. ಎಲ್ಲಿಯೂ ಮಗನ ಜಾಡು ತಿಳಿಯಲಿಲ್ಲ. ಇನ್ನು ವರುಣನು ಬಂದು ಏನು ಹೇಳುವನೋ, ಎಂತಹ ಕ್ರೂರವಾದ ಶಾಪ ಕೊಡುವನೋ ಎಂದು ಮತ್ತಿಷ್ಟು ಭಯಗೊಂಡನು.

ಅಷ್ಟರಲ್ಲಿ ಯಜ್ಞ ಮಾಡುವಂತೆ ಹೇಳುತ್ತ ವರುಣನು ಬಂದೇ ಬಂದನು. ಹರಿಶ್ಚಂದ್ರನು ಭಯದಿಂದ ನಡುಗುತ್ತ ವರುಣನಿಗೆ ವಂದಿಸಿ, "ನನ್ನ ಮಗನು ಸಾಯುವುದಕ್ಕೆ ಹೆದರಿ ಎತ್ತಲೋ ಓಡಿಹೋದ. ನಾನೇನು ಮಾಡಲಿ? ಎಲ್ಲಾ ಕಡೆಯೂ ಹುಡುಕಾಡಿಸಿ ನೋಡಿದೆ. ಗುಡ್ಡಗಳು, ಕಾಡುಗಳು ಹಳ್ಳಿಗಳು, ನಗರಗಳು ಎಲ್ಲಾ ಶೋಧಿಸಿಯಾಯಿತು. ಪ್ರಯೋಜನವಿಲ್ಲದೆ ಹೋಯಿತು. ನಾನೇ ದೋಷಿಯಾದೆ. ನನಗೇನೂ ತೋರುವುದಿಲ್ಲ ವರುಣ ಭಗವಾನ್!" ಎಂದನು,

"ಕಡೆಗೂ ನನ್ನನ್ನು ಮೋಸ ಮಾಡಿದೆಯಾ? ಜಲೋದರವನ್ನು ತೆಗೆದುಕೋ!" ಎಂದು



ಹರಿಶ್ಚಂದ್ರನನ್ನು ಶಪಿಸಿ, ವರುಣನು ತಟ್ಟನೆ ಅಲ್ಲಿಂದೆದ್ದು ಹೊರಟು ಹೋದನು.

ನರಳುವ ನರಿಯ ಮೇಲೆ ತಾಳೇಕಾಯಿ ಬಿದ್ದಂತೆ, ಹರಿಶ್ಚಂದ್ರನು ಮಗನ ಜಾಡು ತಿಳಿಯದೆ ದುಃಖದಿಂದಿರುವಾಗ, ವರುಣನ ಶಾಪ ಬಂದು ಅವನಿಗೆ ಜಲೋದರವ್ಯಾಧಿಯೂ ಶುರುವಾಯಿತು.

ಮುಂದೆ ಒಂದು ವರ್ಷ ಕಳೆಯಿತು. ರೋಹಿತನಿಗೆ ತಂದೆಯ ಆರೋಗ್ಯ ಕೆಟ್ಟು ಹೋಗಿರುವ ಸಮಾಚಾರ ಹೇಗೋ ಗೊತ್ತಾಯಿತು. ಅವನು ಕಳವಳಪಡುತ್ತ ತಂದೆಯನ್ನು ನೋಡಲು ಹೊರಟು ಅಡಗಿದ ಜಾಗದಿಂದ ಹೊರಬಿದ್ದನು. ಅದನ್ನು ತಿಳಿದು ಇಂದ್ರನು ಬ್ರಾಹ್ಮಣ ರೂಪದಲ್ಲಿ ಬಂದು ಅವನನ್ನು ತಡೆದು, "ತಂದೆಯ ಬಳಿಗೆ ಏಕೆ ಹೋಗುವಿ ? ತನ್ನ ರೋಗ ವಾಸಿಯಾಗಲಿಕ್ಕಾಗಿ ನಿನ್ನನ್ನು ವರುಣನಿಗೆ ಬಲಿಕೊಟ್ಟು ಬಿಡುತ್ತಾನೆ. ನಿಷ್ಕಾರಣವಾಗಿ ಏಕೆ ಸಾಯಲು ಹೋಗುವಿ ? ನಿನ್ನ ತಂದೆ ಸಾಯುವ ವರೆಗೂ ತಡೆದುಕೋ. ಆಮೇಲೆ ಹೋಗಿ ನಿಶ್ಚಿಂತೆಯಿಂದ ರಾಜ್ಯಭಾರ ಮಾಡು. ಅಷ್ಟರವರೆಗೆ ಮನಸ್ಸು ಕಲ್ಲು ಮಾಡಿಕೊಂಡಿರು." ಎಂದು ಸಲಹೆ ಮಾಡಿದನು.

ಮತ್ತೊಂದು ವರ್ಷ ಕಳೆಯಿತು. ತನ್ನ ತಂದೆ ಜಲೋದರ ರೋಗದಿಂದ ನರುಳುತ್ತಿದ್ದಾನೆಂದು ಗೊತ್ತಾಗಿ ರೋಹಿತನಿಗೆ ತಡೆಯಲಾಗಲಿಲ್ಲ. ಸಾಯಲಿಕ್ಕೇ ಸಿದ್ಧನಾಗಿ ಮತ್ತೊಂದು ಸಾರಿ ಮನೆಯ ಕಡೆಗೆ ಹೊರಟನು. ಈ ಸಾರಿ ಕೂಡಾ ಇಂದ್ರನು ಬಂದು, ಹೋಗ ಬೇಡವೆಂದು ಅವನನ್ನು ತಡೆದು ಹಿಂದಿರುಗಿಸಿದನು.

ಅಲ್ಲಿ ಹರಿಶ್ಚಂದ್ರನು ಜಲೋದರದ ಸಂಕಟವನ್ನು ಭರಿಸಿಕೊಳ್ಳಲಾಗದೆ, ಅದಕ್ಕೇನಾದರೂ ಉಪಾಯ ಹೇಳುವಂತೆ ವಸಿಷ್ಠನನ್ನು ಕೇಳಿದನು. ಅದಕ್ಕೆ ವಸಿಷ್ಠನು ಹೀಗೆಂದನು :

"ವರುಣನು ಬಲಿ ಕೇಳುವುದು ನಿನ್ನ ಮಗನನ್ನು ತಾನೇ? ಪುತ್ರರೆನಿಸುವವರು ಹತ್ತು ಬಗೆಯಾಗಿದ್ದಾರೆ. ಅವುಗಳಲ್ಲಿ ಕೊಂಡುಕೊಂಡವನು ಕಡಾ ಪುತ್ರನೆನಿಸುತ್ತಾನೆ. ಆದುದರಿಂದ ಯಾವ ಹುಡುಗನನ್ನಾದರೂ ಕೊಂಡುಕೊಂಡು ವರುಣನಿಗೆ ಬಲಿಕೊಟ್ಟು ಶಾಪದಿಂದ ವಿಮೋಚನೆ ಪಡೆಯಬಹುದು."

ವಸಿಷ್ಠನ ಸಲಹೆಯಂತೆ ಹರಿಶ್ಚಂದ್ರನು ತನಗಾಗಿ ಒಬ್ಬ ಮಗನನ್ನು ಕೊಂಡುಕೊಂಡು ಬರುವಂತೆ ಮಂತ್ರಿಯನ್ನು ಕಳುಹಿಸಿದನು. ಮಂತ್ರಿ ಎಲ್ಲೆಲ್ಲೋ ಹುಡುಕಿ ಹುಡುಕಿ, ಕಡೆಗೆ ಪರಮ ದರಿದ್ರನಾದ ಅಜೀಗರ್ತನೆಂಬ ಒಬ್ಬ ಬ್ರಾಹ್ಮಣನನ್ನು ಕಂಡು ಹಿಡಿದನು. ಅವನಿಗೆ ಮೂವರು ಪುತ್ರರಿದ್ದರು. ಶುನಃಪುಚ್ಛ, ಶುನಶ್ಶೇಪ, ಶುನೋಲಾಂಗೂಲ ಎಂದು ಆ ಮೂವರ ಹೆಸರುಗಳು.

ಅಜೀಗರ್ತನೊಂದಿಗೆ ಹರಿಶ್ಚಂದ್ರನ ಮಂತ್ರಿ "ಅಯ್ಯಾ, ನಮ್ಮ ರಾಜನಿಗೆ ಬಂದ ಜಲೋದರ

ರೋಗದಿಂದ ಬಿಡುಗಡೆಯಾಗಲು, ನಿನ್ನ ಒಬ್ಬ ಪುತ್ರನನ್ನು ನೂರು ಗೋವುಗಳ ಬೆಲೆಗೆ ಕೊಡುವಿಯಾ ? " ಎಂದು ಕೇಳಿದನು.

ಅಪ್ಪುದರಿದ್ರನಾದ ಅಜೀಗರ್ತನು, ಈ ಮಾತಿಗೆ ಆತ್ಮಾನಂದಗೊಂಡು, ತನ್ನ ಹಿರಿಯ ಮಗನ ಹೊರತು ಉಳಿದಿಬ್ಬರಲ್ಲಿ ಯಾರನ್ನಾದರೂ ಮಾರಲುಸಿದ್ಧನಾದನು. ಮೂರನೇ ಮಗನನ್ನು ತಾಯಿ ಕೊಡಲಾರೆನೆಂದಳು. ಆದುದರಿಂದ ಆ ಬ್ರಾಹ್ಮಣನು ಎರಡನೇ ಮಗನಾದ ಶನಶ್ಶೇಪನನ್ನು ಹರಿಶ್ಚಂದ್ರನ ಮಂತ್ರಿಗೆ ಮಾರಿಬಿಟ್ಟನು. ಮಂತ್ರಿ ಅವನನ್ನು ಹರಿಶ್ಚಂದ್ರನ ಬಳಿಗೆ ಕರೆದು ತಂದನು.

ಶುನಶ್ಶೇಪನನ್ನು ಯಜ್ಞ ಪಶುವನ್ನಾಗಿ ಮಾಡಿ ಯೂಪಸ್ತಂಭತ್ಕೆ ಕಟ್ಟಿ, ರಾಜನು ಯಾಗದೀಕ್ಷೆ ಕೈಕೊಂಡು, ಯಜ್ಞ ಮಾಡಲು ಪ್ರಾರಂಭಿಸಿದನು. ಇದನ್ನು ನೋಡಿ ಮುನಿಗಳಿಗೆಲ್ಲಾ ಬಹಳ ದುಃಖವಾಯಿತು. ಶುನಶ್ಶೇಪನು ತನಗೆ ಬರಲಿರುವ ಮರಣವನ್ನು ನೆನೆದು ಒಂದೇ ಸಮನೆ ಅಳಲು ತೊಡಗಿದನು. ಹುಡುಗನನ್ನು ವಧೆಮಾಡುವವನು ಕೂಡ ಹೃದಯ ಕರಗಿ ಇವನನ್ನು ಕೊಲ್ಲಲು ನನಗಾಗುವುದಿಲ್ಲವೆಂದನು.

ಆಗ ಹರಿಶ್ಚಂದ್ರನು ಸದಸ್ಯರನ್ನು ನೋಡಿ, "ಈಗ ಏನು ಮಾಡಬೇಕು ? " ಎಂದು ಕೇಳಿದನು. ಸಭೆಯಲ್ಲಿ ಗಜಿಬಿಜಿ ಮಾತುಗಳೇ ಹೊರಟುವಲ್ಲದೆ ನಿರ್ಣಯಿಸಿ ಹೇಳಲು ಯಾರಿಗೂ ಸಾಧ್ಯವಾಗಲಿಲ್ಲ. ಶುನಶ್ಶೇಪನಂತೂ ಕಲ್ಲುಕರಗಿ ಹರಿಯುವ ಹಾಗೆ ಅಳುತ್ತಲೇ ಇದ್ದಾನೆ.

ಆಗ ಸಭಾಸದರ ಮಧ್ಯದಿಂದ ಅಜೀಗರ್ತನು ತಟಕ್ಕನೆದ್ದು, "ರಾಜಾ, ಈ ಬಲಿ ಪಶುವನ್ನು ನಾನು ವಧಿಸುತ್ತೇನೆ. ನನಗೆ ಮೊದಲು ಕೊಟ್ಟುದಕ್ಕಿಂತ ಎರಡು ಪಾಲು ಗೋವುಗಳನ್ನು ಕೊಡುವಿರಾ ? " ಎಂದು ಕೇಳಿದನು.

ಹರಿಶ್ಚಂದ್ರನು ಸಂತೋಷಪಟ್ಟು ಒಪ್ಪಿಕೊಂಡನು. ಸಭೆಯಲ್ಲಿ ಹಾಹಾಕಾರಗಳೆದ್ದುವು. "ಎಂಥ ದಾರುಣ! ಇವನು ಬ್ರಾಹ್ಮಣನಲ್ಲ, ಪಿಶಾಚಿ ! ತನ್ನ ಲಾಭಕ್ಕಾಗಿ



ಸ್ವಂತ ಮಗನನ್ನೇ ಕೊಲೆಮಾಡಲು ಸಿದ್ಧನಾದ ಮಹಾಪಾಪಿ ! ಇವನ ಮುಖ ನೋಡಬಾರದು !" ಎಂದು ಎಲ್ಲರೂ ಅಜೀಗರ್ತನನ್ನು ಬಯ್ದರು.

ಅಷ್ಟರಲ್ಲಿ ವಿಶ್ವಾಮಿತ್ರನು ಅಲ್ಲಿಗೆ ಬಂದು, ಸಂಗತಿ ತಿಳಿದು, ಶುನಶ್ಶೇಪನನ್ನು ನೋಡಿ ಕನಿಕರಪಟ್ಟು, "ಹರಿಶ್ಚಂದ್ರಾ, ಪಾಪ ಭೂಯಿಷ್ಠವಾದ ಈ ಯಜ್ಞವನ್ನು ನಿಲ್ಲಿಸು. ನಿನ್ನ ಜೀವ ನಿನಗೆಷ್ಟು ಪ್ರೀತಿಯೋ ಈ ಹುಡುಗನಿಗೂ ಅವನ ಜೀವ ಅಷ್ಟೇ ಪ್ರೀತಿಯಲ್ಲವೇ ? ಶಾಪಗ್ರಸ್ತನಾದ ನಿನ್ನ ತಂದೆಯನ್ನು ನಾನು ಸ್ವರ್ಗಕ್ಕೆ ಕಳುಹಿಸಿದೆನು. ಆದಕ್ಕಾದರೂ ನನ್ನ ಮಾತುಕೇಳಿ ಈ ಬ್ರಾಹ್ಮಣ ಬಾಲನನ್ನು ಬಿಟ್ಟುಬಿಡು " ಎಂದನು.

"ಅಯ್ಯಾ ! ಮಹರ್ಷೇ ! ನಾನು ಈ ಜಲೋದರದ ಬಾಧೆಯನ್ನು ತಾಳಲಾಗದಿದ್ದೇನೆ. ದಯಮಾಡಿ ಯಾಗಭಂಗವಾಗುವಂತೆ ಮಾಡಬೇಡಿ. ನಾನು ಈ ಹುಡುಗನನ್ನು ಯಜ್ಞ ಪಶುವಾಗಲಿಕ್ಕೇ ಕೊಂಡುಕೊಂಡೆನು " ಎಂದನು ಹರಿಶ್ಚಂದ್ರ.

ವಿಶ್ವಾಮಿತ್ರನಿಗೆ ಕೋಪ ಬಂದಿತು. ಅವನು ಶುನಶ್ಶೇಪನ ಬಳಿಗೆ ಹೋಗಿ, "ಈ ರಾಜನು ನಿನ್ನನ್ನೇನೂ ಮಾಡಲಾರ. ನಾನು ನಿನಗೊಂದು ಮಂತ್ರವನ್ನು ಹೇಳುತ್ತೇನೆ. ಆದರಿಂದ ನಿನಗೆ ಸುಖವಾಗುತ್ತದೆ. ಇನ್ನೇನೂ ಹೆದರ ಬೇಡ!" ಎಂದು ಅಭಯವಿತ್ತು, ಅವನ ಕಿವಿಯಲ್ಲಿ ಒಂದು ದಿವ್ಯ ಮಂತ್ರವನ್ನು ಉಪದೇಶಿಸಿದನು.

ವಿಶ್ವಾಮಿತ್ರನು ಹೇಳಿಕೊಟ್ಟ ಮಂತ್ರವನ್ನು ಶುನಶ್ಶೇಪನು ಜಪಿಸುತ್ತಿರಲು, ವರುಣನೇ ಅಲ್ಲಿ ಪ್ರತ್ಯಕ್ಷನಾದನು. "ಯಜ್ಞ ಮುಗಿಯಿತು. ನಾನು ತೃಪ್ತನಾದೆ ! ಹರಿಶ್ಚಂದ್ರನ ಶಾಪ ಹಿಂದೆಗೆದುಕೊಂಡೆನು." ಎಂದು ಹೇಳಿ ವರುಣನು ಶುನಶ್ಶೇಪನನ್ನು ಬಿಡುಗಡೆ ಮಾಡಿ ಮಾಯವಾದನು. ಆಗಲೇ ಹರಿಶ್ಚಂದ್ರನ ಜಲೋದರ ವ್ಯಾಧಿಯೂ ಮಾಯವಾಯಿತು.

ಬಾಲಕ ಶುನಶ್ಶೇಪನು ಸಭೆಗೆ ನಮಸ್ಕಾರ ಮಾಡಿ "ಅಯ್ಯಗಳಿರಾ! ಈಗ ನನ್ನ ತಂದೆ ಯಾರೆಂಬುದನ್ನು ನೀವು ನಿರ್ಣಯಿಸಿದರೆ, ನಾನು ಅವರೊಂದಿಗೆ ಹೋಗುತ್ತೇನೆ " ಎಂದನು.

ಕೆಲವರು ಶುನಶ್ಶೇಪನ ತಂದೆ ಹರಿಶ್ಚಂದ್ರನೆಂದರು; ಕೆಲವರು ಅಜೀಗರ್ತನೆಂದರು ; ಮತ್ತೆ ಕೆಲವರು ವರುಣನೇ ಎಂದರು. ಒಬ್ಬೊಬ್ಬರು ಒಂದೊಂದು ಬಗೆಯಾಗಿ ಹೇಳಿದರು.

ವಸಿಷ್ಠನು ಮಾತ್ರ ವಿಶ್ವಾಮಿತ್ರನೇ ಶುನಶ್ಶೇಪನಿಗೆ ತಂದೆಯೆಂದು ಸ್ಪಷ್ಟವಾಗಿ ಹೇಳಿದನು. ಅಂತೆಯೇ ಶುನಶ್ಶೇಪನು ವಿಶ್ವಾಮಿತ್ರನೊಂದಿಗೇ ಸಂತೋಷದಿಂದ ಹೊರಟು ಹೋದನು.





# ದೇವೀಭಾಗವತ

ಕಡೆಗೂ ಹರಿಶ್ಚಂದ್ರನು ವರುಣನನ್ನು ಒಲಿಸಲು ನರಮೇಧಕ್ಕೆ ತಲೆಹಾಕಿದರೂ ವಿಶ್ವಾಮಿತ್ರನ ಪುಣ್ಯ ದಿಂದ ಎಲ್ಲವೂ ಸುಖಾಂತವಾಗಿ ಹೋದ ಮೇಲೆ ಹರಿಶ್ಚಂದ್ರನಿಗಾದ ಆನಂದಕ್ಕೂ ತೃಪ್ತಿಗೂ ಮೇರೆ ಯಿಲ್ಲದೆ ಹೋಯಿತು. ವಿಶ್ವಾಮಿತ್ರನನ್ನು ಅವನು ತುಂಬಾ ಸತ್ಕರಿಸಲು ನೋಡಿದನು. "ಅದೆಲ್ಲಾ ಮಹಾದೇವಿಯ ಮಂತ್ರ ಮಹಿಮೆ. ನನ್ನದೇನಿಲ್ಲ," ಎಂದು ಹೇಳಿ, ವಿಶ್ವಾಮಿತ್ರನು ಹೊರಟು ಹೋಗಿ ಬಿಟ್ಟಿದ್ದನು. ಅಂತಲೇ ಹರಿಶ್ಚಂದ್ರನ ಆನಂದದ ಗೌರವ ವರ್ಷಣವೆಲ್ಲವೂ ವಸಿಷ್ಠನ ಮೇಲೆಯೇ ಸುರಿಯಿತು. ತನಗೆ ಸರಿಯಾದ ಆಲೋಚನೆ ಹೇಳಿದ ಕುಲಪುರೋಹಿತ ವಸಿಷ್ಠನನ್ನು ತುಂಬಾ ಸನ್ಮಾನ ಗಳಿಂದ ಸಂತೋಷಪಡಿಸಿದನು. ಮಹಾದೇವಿಯನ್ನು ನೆನೆಯಲೇ ಇಲ್ಲ.

ಒಂದು ದಿನ ವಸಿಷ್ಠನು ದೇವೇಂದ್ರನನ್ನು ನೋಡಲು ಇಂದ್ರಸಭೆಗೆ ಹೋದನು. ಆ ದಿನ ವಿಶ್ವಾಮಿತ್ರನೂ ಇಂದ್ರಸಭೆಗೆ ಬಂದಿದ್ದನು. ಆಗ ವಸಿಷ್ಠನ ಶರೀರದ ಮೇಲ ಅನೇಕ ಬಹುಮಾನದ ಅಲಂಕಾರಗಳಿರುವುದನ್ನು ನೋಡಿ ವಿಶ್ವಾಮಿತ್ರನು ತನ್ನೊಳಗೆ ಮುಗುಳು ನಕ್ಕು ತಲೆದೂಗಿದನು. ದಿಕ್ಪಾಲಕರಲ್ಲೊಬ್ಬನು ವಸಿಷ್ಠನನ್ನು ನೋಡಿ "ಹೀಗೆ ನಿಮ್ಮನ್ನು ಸನ್ಮಾನಿಸಿದವನು ಯಾರೋ ?" ಎಂದು ಕೇಳಿದನು,

ವಸಿಷ್ಠನು ಹೆಮ್ಮೆಯಿಂದ, "ಯಾರೇಕೆ ಬಹುಮಾನಿಸುವರು ? ಚಂದ್ರನಂತಹ ಸತ್ಯ ಹರಿ ಶ್ಚಂದ್ರನು ನನ್ನ ಶಿಷ್ಯ ತಾನೇ ? ಹೇಳಿದ ಮಾತು ನಡೆಸುವುದರಲ್ಲಿ ವರುಣನನ್ನು ಮೆಚ್ಚಿಸಿ ಸತ್ಯ ಹರಿಶ್ಚಂದ್ರನೆನಿಸಿದನು. ಅವನಿಗೆ ಸರಿಯಾದ ರಾಜರು ಈಗ ಯಾರಿದ್ದಾರೆ ? ರಾಜಸೂಯ ಯಾಗ ಕೂಡಾ ಮಾಡಿದನು. ಎಲ್ಲಾ ರಾಜರನ್ನೂ ಮೆಚ್ಚಿಸಿದನು. ದಾನಧರ್ಮಗಳಿಂದ ಪ್ರಜೆಗಳನ್ನೂ ಮೆಚ್ಚಿಸಿದನು. ನಿಜ ಹೇಳ ಬೇಕೆಂದರೆ, ದಾನಧರ್ಮಗಳಲ್ಲಾಗಲಿ, ಶೌರ್ಯ ಪರಾಕ್ರಮಗಳಲ್ಲಿಯಾಗಲೀ, ಧರ್ಮ ಕಾರ್ಯಗಳಲ್ಲಿಯಾಗಲೀ, ಹರಿಶ್ಚಂದ್ರನಂಥವರು

೨೬. ಹರಿಶ್ಚಂದ್ರನ ಕಷ್ಟಗಳು



ಹದಿನಾಲ್ಕು ಲೋಕಗಳಲ್ಲಿಯೂ ಇಲ್ಲ" ಎಂದು ಹರಿಶ್ಚಂದ್ರನನ್ನು ಆಕಾಶದಷ್ಟೆತ್ತರಕ್ಕೆ ಹೊಗಳಿದನು. ವಸಿಷ್ಠನು ಹೇಳಿದುದನ್ನು ಕೇಳುತ್ತಿದ್ದಂತೆ ವಿಶ್ವಾಮಿತ್ರನಿಗೆ ಕೋಪದಿಂದ ಮೈ ಉರಿಯಿತು. "ಅಲ್ಲಯ್ಯಾ ವಸಿಷ್ಠಾ! ಕೇವಲ ಸುಳ್ಳುಗಾರನೂ, ಕಪಟಿಯೂ ಆದ ರಾಜನನ್ನು ಹೀಗೆ ತಿರುಗು ಮುರುಗು ಮಾಡಿ ಹೊಗುಳುವುದೆಂದರೇನು? ನಿಮ್ಮ ಹರಿಶ್ಚಂದ್ರನು ವರುಣನನ್ನು ಮೋಸಪಡಿಸಲಿಲ್ಲವೇ? ಸುಮ್ಮನೆ ಬಾಯಿ ಮಾತಿನಿಂದ ಪ್ರಯೋಜನವೇನಿದೆ? ಪಂಥ ಒಡ್ಡಿ ಹೇಳುತ್ತೇನೆ. ಹರಿಶ್ಚಂದ್ರನು ಸತ್ಯವಂತನಲ್ಲ. ದಾತನೂ ಅಲ್ಲ. ದುಷ್ಟನು. ಇದನ್ನು ನಾನು ನಿರೂಪಿಸದೇ ಹೋದರೆ ನನ್ನ ಪುಣ್ಯವೆಲ್ಲಾ ನಾಶವಾಗಿ ಹೋಗಲಿ. ಹಾಗೆ ನಾನು ನಿರೂಪಿಸಿಬಿಟ್ಟರೆ ನಿನ್ನ ಪುಣ್ಯವೆಲ್ಲಾ ನಾಶವಾಗಿ ಹೋಗುವುದಕ್ಕೆ ನೀನೂ ಒಪ್ಪಿಕೊಳ್ಳುವೆಯಾ?" ಎಂದನು ವಸಿಷ್ಠನನ್ನು ನೋಡಿ.

ವಸಿಷ್ಠನು ಕೂಡಲೇ ಪಂಥಕ್ಕೆ ಒಪ್ಪಿದನು. ಇಬ್ಬರೂ ಅಲ್ಲಿಂದ ತಮ್ಮ ತಮ್ಮ ಆಶ್ರಮಕ್ಕೆ ಹಿಂದಿರುಗಿದರು. ಈ ಪಂದ್ಯವನ್ನು ಕುರಿತು ವಸಿಷ್ಠನು ಭೂಮಿಯಲ್ಲಿ ಯಾರ ಹತ್ತಿರವೂ ಬಾಯಿ ಬಿಡಲಿಲ್ಲ. ಏನೂ ನಡೆಯದಂತೆ ಸುಮ್ಮನಿದ್ದು ಬಿಟ್ಟನು. ಮನಸ್ಸಿನಲ್ಲಿ ಮಾತ್ರ ಏನಾಗುವುದೋ ಎಂಬ ಭಯ!

ಒಂದು ದಿನ ಹರಿಶ್ಚಂದ್ರನು ವನವಿಹಾರ ಮಾಡುತ್ತ ಅರಣ್ಯದಲ್ಲಿ ತಿರುಗುತ್ತಿರಲು ಏನೋ ದುಃಖಾರ್ತಳಾಗಿ ರೋದಿಸುವ ಸ್ತ್ರೀಯೋರ್ವಳನ್ನು ನೋಡಿದನು. ಅವಳ ದಾರುಣವಾದ ರೋದನವನ್ನು ಕೇಳಿ ಹರಿಶ್ಚಂದ್ರನು ಮನಕರಗಿ ಅವಳ ಬಳಿಗೆ ಹೋಗಿ, "ಈ ಭಯಂಕರವಾದ ಅರಣ್ಯದಲ್ಲಿ ನೀನೇಕೆ ಬಂದೆ? ನಿನ್ನ ಗಂಡನು ಎಲ್ಲಿಗೆ ಹೋದನು? ನನ್ನ ರಾಜ್ಯದಲ್ಲಿ ಕ್ರೂರರೂ ರಾಕ್ಷಸರೂ ಯಾರೂ ಇಲ್ಲವಲ್ಲಾ? ನಿನಗೆ ಇಂತಹ ದುಃಖವನ್ನುಂಟು ಮಾಡಿದವನು ಯಾವನೆಂದು ಹೇಳು. ಅವನನ್ನು ವಿಚಾರಿಸುತ್ತೇನೆ" ಎಂದನು.

ಹರಿಶ್ಚಂದ್ರನು ಒತ್ತಾಯಪಡಿಸಿ ಕೇಳಿದ ಮೇಲೆ ಅವಳು ಹೀಗೆಂದಳು:

"ರಾಜಾ, ನಾನು ಭೂದೇವಿ. ವಿಶ್ವಾಮಿತ್ರನೆಂಬವನು ನನಗಾಗಿ ತಪಸ್ಸು ಮಾಡುತ್ತ ನನ್ನನ್ನು ತೊಂದರೆಪಡಿಸುತ್ತಿದ್ದಾನೆ. ನಾನು ಅವನಿಗೆ ವಶಳಾಗಲು ಸಾಧ್ಯವೇ ಇಲ್ಲ. ಅವನು ತಪಸ್ಸು ಬಿಡುವಂತೆ ಕಾಣುವುದೂ ಇಲ್ಲ. ನನ್ನ ಗತಿ ಏನಾಗುವುದೋ ಎಂದು ಹೆದರುತ್ತಿದ್ದೇನೆ."

ಅವಳ ಮಾತು ಕೇಳಿ ಹರಿಶ್ಚಂದ್ರನು, "ಅದಕ್ಕಾಗಿ ನೀನು ಅಳುವುದನ್ನು ನಿಲ್ಲಿಸು. ನಿನ್ನನ್ನು ತಪಸ್ಸಿನಿಂದ ಆಕರ್ಷಿಸಿ ನೋಯಿಸಿಕೊಂಡಿರುವ ಆ ವಿಶ್ವಾಮಿತ್ರನಿಂದ ತಪಸ್ಸನ್ನು ನಿಲ್ಲಿಸುತ್ತೇನೆ. ಚಿಂತೆಬಿಡು" ಎಂದು ಅವಳಿಗೆ ಮಾತುಕೊಟ್ಟು, ಹರಿಶ್ಚಂದ್ರನು ವಿಶ್ವಾಮಿತ್ರನ ಆಶ್ರಮಕ್ಕೆ ಹೋಗಿ ಅವನೊಂದಿಗೆ,



"ಅಯ್ಯಾ ಮಹಾಮುನೀ! ಸುಮ್ಮನೆ ತಪಸ್ಸು ಮಾಡಿ ದೇಹ ಪೀಡನೆಗೆ ಗುರಿಯಾಗುವ ಅಗತ್ಯ ವೇನಿದೆ? ನಾನು ರಾಜ್ಯಪಾಲನೆ ಮಾಡುವಾಗ ಪಾಪ ಬುದ್ಧಿಯಿಂದ ಲೋಕಪೀಡನೆಯಾಗುವಂತಹ ತಪಸ್ಸು ಮಾಡಲು ಸಾಧ್ಯವಿಲ್ಲ. ಒಳ್ಳೆಯದರಲ್ಲಿ ಹೇಳುತ್ತೇನೆ. ಭೂದೇವಿಯನ್ನು ನೋಯಿಸುವಂತಹ ಈ ಕೆಲಸ ಬಿಡು. ಇದರಲ್ಲಿ ಪುಣ್ಯವೂ ಇಲ್ಲ, ಪುರುಷಾರ್ಥವೂ ಇಲ್ಲ" ಎಂದನು.

ವಿಶ್ವಾಮಿತ್ರನು ಹರಿಶ್ಚಂದ್ರನಿಗೆ ಯಾವ ಪ್ರತ್ಯುತ್ತರವನ್ನೂ ಹೇಳದೆ, ಆಶ್ರಮವನ್ನು ಬಿಟ್ಟು ಮತ್ತೆಲ್ಲಿಗೋ ಹೊರಟುಹೋದನು. ಅದುವರೆಗೆ ವಸಿಷ್ಠನ ಮೇಲೆ ರುಷ್ಟನಾಗಿದ್ದ ವಿಶ್ವಾಮಿತ್ರನು ಈಗ ಹರಿಶ್ಚಂದ್ರನು ತನ್ನ ತಪಸ್ಸನ್ನು ಹಳಿಯುವುದನ್ನು ಕೇಳಿ, ಇನ್ನಷ್ಟು ಕೋಪಗೊಂಡನು. ಹರಿಶ್ಚಂದ್ರ ನನ್ನು ಮೋಸದಿಂದಲೇ ಗೆಲ್ಲಬೇಕೆಂಬ ನಿಶ್ಚಯಕ್ಕೆ ಬಂದು ವಿಶ್ವಾಮಿತ್ರನು, ಒಬ್ಬ ರಾಕ್ಷಸನನ್ನು ವಶ ಪಡಿಸಿಕೊಂಡು, ಅವನಿಗೊಂದು ಕೆಲಸವನ್ನು ಒಪ್ಪಿಸಿ ದನು. ಆ ರಾಕ್ಷಸನು ಹಂದಿಯ ರೂಪತಾಳಿ ಹರಿಶ್ಚಂದ್ರನ ಉಪವನದೊಳಗೆ ನುಗ್ಗಿ, ಭಟರನ್ನು ಹೆದರಿಸಿ ಓಡಿಸಿ, ಹೂಗಿಡ ಬಳ್ಳಿಗಳನ್ನು ನಾಶಮಾಡ ತೊಡಗಿದನು.

ಹೂಮಾಲೆ ಕಟ್ಟುವವರು, ಆ ಹಂದಿಯ ಮೇಲೆ ಅನೇಕ ಬಾಣಗಳನ್ನು ಪ್ರಯೋಗಿಸಿದರೂ ಅದಕ್ಕೇನೂ ಆಗಲಿಲ್ಲ. ಅದು ಸಾಧಾರಣ ಹಂದಿಯಲ್ಲವೆಂದು ಕೊಂಡು ಅವರು ಓಡಿ ಹೋಗಿ ರಾಜನೊಂದಿಗೆ ಮೊರೆಯಿಟ್ಟುಕೊಂಡರು.

ಹರಿಶ್ಚಂದ್ರನು ಕುದುರೆಯ ಮೇಲೇರಿ ಕೆಲವು ಸೈನಿಕರನ್ನು ಹಿಂದಿಟ್ಟುಕೊಂಡು ಉಪವನಕ್ಕೆ ಬಂದನು. ದೂರದಲ್ಲಿ ಗುರುಗುಟ್ಟಿಕೊಂಡಿದ್ದ ಹಂದಿಯನ್ನೂ, ಅದು ಧ್ವಂಸಮಾಡಿದ ಹೂವಿನ ಗಿಡಗಳನ್ನೂ ನೋಡಿ, ಮಹಾಕೋಪದಿಂದ ಅದರ ಮೇಲೆ ಬಾಣಗಳನ್ನು ಪ್ರಯೋಗಿಸಿದನು. ಅದು ಥಕ್ಕನೆ ಮಾಯವಾಗುತ್ತ, ಮತ್ತೆ ಕಾಣಿಸುತ್ತ ಹರಿಶ್ಚಂದ್ರನನ್ನು ನಾನಾ ರೀತಿ ಯಾಗಿ ಓಡಾಡಿಸಿ ದಣಿಸಿತು. ಕಡೆಗೆ ಆ ಹಂದಿ ಅರಣ್ಯಕ್ಕೆ ಓಡುವುದನ್ನು ನೋಡಿ, ಹರಿಶ್ಚಂದ್ರನೂ ಅದರ ಬೆಂಬತ್ತಿದನು.

ಹಂದಿಯೂ ಅದರ ಹಿಂದೆ ಹರಿಶ್ಚಂದ್ರನೂ ಓಡುತ್ತಿರಲು ರಭಸವಾಹಿನಿಯಾದೊಂದು ಕಾಡು ತೊರೆ ಅಡ್ಡ ಬಂದಿತು. ಹರಿಶ್ಚಂದ್ರನು ಕುದುರೆಯಿಂದ ಇಳಿದು ಅದಕ್ಕೆ ನೀರು ಕುಡಿಸಿ, ತಾನೂ ನೀರು ಕುಡಿದು, ಹಿಂದಿರುಗಿ ಹೋಗಲು ಯಾವ ದಾರಿಯೋ ಎಂದು ಆಲೋಚಿಸಿಕೊಂಡು ನಿಂತನು. ಹಾಳು ಹಂದಿ ಯಂತೂ ಇನ್ನು ಸಿಗುವ ಹಾಗಿಲ್ಲವೆಂದು ಗೊತ್ತಾಗಿ ಬೇಸರವಾಯಿತು.

ಆಗ ವಿಶ್ವಾಮಿತ್ರನು ವೃದ್ಧ ಬ್ರಾಹ್ಮಣನ ವೇಷ ದಲ್ಲಿ ಅವನ ಬಳಿಗೆ ಬಂದು, ಹರಿಶ್ಚಂದ್ರನ ನಮಸ್ಕಾರ ವನ್ನು ಸ್ವೀಕರಿಸಿ ಹರಸಿ, "ನೀನು ರಾಜನಲ್ಲವೇ?



ಈ ನಿರ್ಜನ ಪ್ರದೇಶಕ್ಕೆ ಒಬ್ಬಂಟಿಗನಾಗಿ ಏತಕ್ಕೆ ಬಂದೆ ?" ಎಂದು ಕೇಳಿದನು.

ಹರಿಶ್ಚಂದ್ರನು ವಿಶ್ವಾಮಿತ್ರನಿಗೆ ಹಿಂದಿಯ ಸಂಗತಿಯನ್ನೆಲ್ಲಾ ಹೇಳಿ, "ಈಗ ಹಿಂದಿರುಗಿ ಹೋಗುವ ದಾರಿ ಹೇಗೋ ತಿಳಿಯಲಿಲ್ಲ. ಯಾವ ದಿಕ್ಕಿಗೆ ಹೋಗಬೇಕೋ ನಿಮಗೆ ಗೊತ್ತಿದ್ದರೆ ದಯವಿಟ್ಟು ತಿಳಿಸಬೇಕು" ಎಂದನು.

ಅದಕ್ಕೆ ವಿಶ್ವಾಮಿತ್ರನು, "ರಾಜಾ, ಇದೊಂದು ಪುಣ್ಯತೀರ್ಥ. ಇಲ್ಲಿಗೆ ಬಂದ ಮೇಲೆ ಪಿತೃದೇವತೆಗಳಿಗೆ ತರ್ಪಣಕೊಟ್ಟು ಶಕ್ತಿಗೆ ತಕ್ಕ ಹಾಗೆ ದಾನ ಧರ್ಮಗಳನ್ನೂ ಮಾಡಬೇಕು. ನೀನು ಕೊಡುವ ದಾನ ತೆಗೆದುಕೊಳ್ಳಲಿಕ್ಕಾಗಿಯೇ ನಾನು ಬಂದೆನು. ನೀನು ನಿನಗೆ ತೋರಿದ್ದನ್ನು ದಾನ ಕೊಡುವೆಯಾದರೆ, ನಾನು ನಿನ್ನ ಹಿಂದೆ ಸ್ವಲ್ಪ ದೂರದವರೆಗೆ ಬಂದು ನಿನಗೆ ರಾಜಧಾನಿಗೆ ಹೋಗುವ ದಾರಿ ತೋರಿಸುತ್ತೇನೆ" ಎಂದನು.

ಆದನ್ನು ಕೇಳಿ ಹರಿಶ್ಚಂದ್ರನು ಹೀಗೆಂದನು : "ಸ್ವಾಮಿ, ನೀವು ಏನು ಕೇಳುವಿರೋ ಅದನ್ನೇ ದಾನ ಮಾಡುತ್ತೇನೆ. ನಿಮಗೆ ಏನು ಬೇಕು ? ಬಂಗಾರವೆ ? ಕುದುರೆಗಳೆ ? ಧನವೆ ? ಭೂಖಂಡವೆ ? ನಾನು ಈ ಮೊದಲು ರಾಜಸೂಯವನ್ನು ಮಾಡಿದಾಗ ಮುನಿಗಳ ಸಮಕ್ಷಮದಲ್ಲಿ ಯಾರು ಏನನ್ನು ಕೇಳಿದರೂ ಇಲ್ಲವೆನ್ನದೆ ಕೊಡುವೆನೆಂದು ದೀಕ್ಷೆ ಹಿಡಿದವನು. ನೀವು ತೇಜಸ್ವಿಗಳಾಗಿ ಮಹಾಪುರುಷರಂತೆ ಕಾಣುವಿರಿ. ಈ ತೀರ್ಥವೋ ಪವಿತ್ರವಾದುದು. ನಿಮಗೆ ಇಷ್ಟವಾದುದನ್ನು ನಿಃಶಂಕೆಯಿಂದ ಕೇಳಿರಿ. ತಪ್ಪದೆ ಕೊಡುತ್ತೇನೆ."

"ರಾಜಾ, ನೀನು ಅಷ್ಟು ದೊಡ್ಡವನಲ್ಲದಿದ್ದರೆ ಹೀಗೆ ಹೇಳಲಾರೆ. ನೀನು ಯಾರೆಂದು ನನಗೆ ಗೊತ್ತಿದೆ. ಸೂರ್ಯ ವಂಶದ ತ್ರಿಶಂಕುವಿನ ಮಗನಾಗಿ ಹುಟ್ಟಿದ ನಿನ್ನನ್ನು ಕುರಿತು ವಸಿಷ್ಠನು ತುಂಬಾ ಶ್ಲಾಘಿಸಿ ಹೇಳುವುದನ್ನು ಕೇಳಿದ್ದೇನೆ. ಅವನು ಎಂದಿಗೂ ಸುಳ್ಳಾಡುವವನಲ್ಲ. ನೀನು ಮಹಾದಾತನು. ಭೂಮಂಡಲದ ರಾಜನು. ಈಗ ನನ್ನ ಮಗನಿಗೆ ನೀನು ಮದುವೆ ಮಾಡಿಸಬೇಕು. ಆಮೇಲೆ ಮದುವೆಯ ಅಂಗವಾಗಿ ದಾನ ಕೇಳಲು ಬರುತ್ತೇನೆ" ಎಂದು ಹೇಳಿ ವಿಶ್ವಾಮಿತ್ರನು ಅತ್ತ ತಿರುಗಿ "ಹೀಗೆ ಬನ್ನಿ". ಎಂದು ಕರೆದನು.

ಕೂಡಲೇ ವಿಶ್ವಾಮಿತ್ರನು ಮಾಯದಿಂದ ಸೃಷ್ಟಿಸಿದ ಯುವಕನೂ ಹತ್ತು ವಯಸ್ಸಿನ ಕನ್ಯೆಯೂ ಅಲ್ಲಿಗೆ ಬಂದರು. "ಇವರೇ ಮದುವೆಯಾಗಬೇಕಾದ ವಧೂವರರು. ಇವರಿಗೆ ನಿನ್ನ ಹೆಸರಿನಲ್ಲಿ ನಾನು ಮದುವೆ ಮಾಡುತ್ತೇನೆ. ಅದರಿಂದ ನಿನಗೆ ರಾಜಸೂಯ ಯಾಗ ಮಾಡಿದುದಕ್ಕಿಂತಲೂ ಹೆಚ್ಚಿನ ಪುಣ್ಯವಿದೆ" ಎಂದನು.

ಹರಿಶ್ಚಂದ್ರನು ಹಾಗೆಯೇ ಆಗಲೆಂದು ಒಪ್ಪಿದನು. ಆಮೇಲೆ ವೃದ್ಧ ಬ್ರಾಹ್ಮಣ ರೂಪದ ವಿಶ್ವಾಮಿತ್ರನು



ನಗರಕ್ಕೆ ಹೋಗುವ ದಾರಿಯನ್ನು ತೋರಿಸಿ, ತಾನು ಮದುವೆಯ ಏರ್ಪಾಡುಗಳನ್ನು ಮಾಡಿ, ದಾನ ಪಡೆಯಲು ಅರಮನೆಗೆ ಬರುತ್ತೇನೆಂದು ಹೇಳಿ ತನ್ನ ಆಶ್ರಮಕ್ಕೆ ಹೋದನು.

ಮಾರನೇ ದಿನ ವಿಶ್ವಾಮಿತ್ರನು ಹರಿಶ್ಚಂದ್ರನ ಅರಮನೆಗೆ ಹೋದಾಗ ಹರಿಶ್ಚಂದ್ರನು ಅಗ್ನಿಗೃಹದಲ್ಲಿ ಸಂಧ್ಯಾವಂದನಾ ನಂತರದ ಅಗ್ನಿಕಾರ್ಯದಲ್ಲಿ ನಿರತನಾಗಿದ್ದನು.

ನಾನು ಸರಿಯಾದ ಸಮಯಕ್ಕೇ ಬಂದಿದ್ದೇನೆ. ದಾನ ಕೊಡಲೂ ಪಡೆಯಲೂ ಅಗ್ನಿಸಾಕ್ಷಿ ಪ್ರಜ್ವಲಿಸಿಕೊಂಡಿರುವ ಈ ಸಮಯವೇ ಒಳ್ಳೆಯದು. ನನಗೆ ಬೇಕಾದ ದಾನವನ್ನು ಕೇಳುತ್ತೇನೆ. ಕೊಟ್ಟು ಕೃತಾರ್ಥನಾಗು " ಎಂದನು ವಿಶ್ವಾಮಿತ್ರ.

"ರಾಜಾ, ನಿನ್ನ ಇದಿರಿನಲ್ಲಿರುವ ಈ ಅಗ್ನಿಯ ಸಾಕ್ಷಿಯಾಗಿ ನಿನ್ನ ಸಂಪೂರ್ಣ ರಾಜ್ಯವನ್ನು ಆನೆ ಕುದುರೆ ಮೊದಲಾದ ಸಮಸ್ತ ಸಂಪತ್ತುಗಳೊಂದಿಗೆ ನನಗೆ ದಾನ ಕೊಡು " ಎಂದನು ವಿಶ್ವಾಮಿತ್ರ.

ಹರಿಶ್ಚಂದ್ರನು ಹಿಂದು ಮುಂದು ಆಲೋಚನೆ ಮಾಡದೆ, "ಇದೋ ಕೊಟ್ಟೆನು " ಎಂದು ಮಂತ್ರೋಚ್ಚಾರ ಪೂರ್ವಕವಾಗಿ ಅದೆಲ್ಲವನ್ನೂ ದಾನವಾಗಿ ಕೊಟ್ಟನು.

ಆಗ ವಿಶ್ವಾಮಿತ್ರನು, "ರಾಜಾ, ದಕ್ಷಿಣೆಯಿಲ್ಲದ ದಾನವು ವ್ಯರ್ಥ. ಆದುದರಿಂದ ಈ ದಾನಕ್ಕೆ ತಕ್ಕ ದ್ರವ್ಯದ ದಕ್ಷಿಣೆ ಕೂಡಾ ಕೊಟ್ಟು ದಾನದ ಫಲವನ್ನು ಪಡೆ " ಎಂದನು.

" ಆ ದಕ್ಷಿಣೆ ಎಷ್ಟಿದ್ದೀತು ?" ಎಂದು ಹರಿಶ್ಚಂದ್ರನು ಪ್ರಶ್ನಿಸಿದನು.

"ಈ ದಾನಕ್ಕೆ ಸರಿಹೋಗುವ ದಕ್ಷಿಣೆ ಎರಡು ಖಂಡಿ ಬಂಗಾರ." ಎಂದನು ವಿಶ್ವಾಮಿತ್ರ. "ಆಗಲಿ ಕೊಡುತ್ತೇನೆ "ಂದು ಹರಿಶ್ಚಂದ್ರನು ಮಾತು ಕೊಟ್ಟನು. ವಿಶ್ವಾಮಿತ್ರನ ಕಪಟದ ಭಾರವು ಹರಿಶ್ಚಂದ್ರನನ್ನು ಆಶ್ಚರ್ಯಬೆರೆತ ಆಲೋಚನೆಗೆ ತಳ್ಳಿತು. ದಾನದೊಂದಿಗೆ ದಕ್ಷಿಣೆ ಕೊಡಬೇಕಾದುದು ನ್ಯಾಯವೂ ಸಹಜವೂ ಎಂತಲೇ ಅವನು ಹಿಂದು ಮುಂದು ಯೋಚಿಸದೆ ಕೊಡುವೆನೆಂದು ಒಪ್ಪಿದನು. ಇರುವುದನ್ನೆಲ್ಲಾ ದಾನ ಮಾಡಿದ ಮೇಲೆ ಎರಡು ಖಂಡಿ ಬಂಗಾರವನ್ನು ಎಲ್ಲಿಂದ ಕೊಡಲು ಸಾಧ್ಯ ? ವಿಶ್ವಾಮಿತ್ರನಂತಹ ತಪಸ್ವಿ ಕಾಲ ವೈಪರೀತ್ಯದಿಂದಲೇ ಧನಲೋಭಕ್ಕೆ ಒಳಗಾಗಿ ಹೀಗೆ ಮೋಸ ಮಾಡಲು ನೋಡುತ್ತಾನೆ ! ಕಾಲದ ಸೂತ್ರಧಾರಿಣಿಯಾದ ಮಹಾದೇವಿಯನ್ನು ಹರಿಶ್ಚಂದ್ರನಂತೂ ನೆನೆಯಲಿಲ್ಲ. ವಿಶ್ವಾಮಿತ್ರನು ದಾಂಭಿಕ ವಿನಯದಿಂದ ಅವಳ ದಿವ್ಯಮಂತ್ರ ಉಪದೇಶಿಸಿದನೇ ಹೊರತು, ತನ್ನ ರಾಜಸವನ್ನು ಬಿಡಲಿಲ್ಲ. ಅದಕ್ಕೆಂದೇ ಹೀಗೆಲ್ಲಾ ಆಡಿಸುತ್ತಿದ್ದಾಳೆ.

ದಕ್ಷಿಣೆಗೆ ನಾಳೆ ಬರುತ್ತೇನೆಂದು ಹೇಳಿ, ವಿಶ್ವಾಮಿತ್ರನು ಹೊರಟು ಹೋದನು. ಚಿಂತೆಯಲ್ಲಿರುವ



ರಾಜನನ್ನು ನೋಡಿ ರಾಣಿ, ಕಾರಣ ಕೇಳಿದಳು. ಹರಿಶ್ಚಂದ್ರನು ದಾನ ದಕ್ಷಿಣೆಗಳ ಸಮಾಚಾರ ಹೇಳಿ ಊಟವಿಲ್ಲದೆಯೇ ಆ ದಿನವನ್ನು ಕಳೆದನು. ಬೆಳಗಾಗುತ್ತಲೇ ವಿಶ್ವಾಮಿತ್ರನು ಬಂದು, " ರಾಜನೇ, ಇನ್ನೂ ಇಲ್ಲೇ ಇರುವೆಯಾ? ರಾಜ್ಯವನ್ನು ಬಿಟ್ಟು ಎತ್ತಾದರೂ ಹೋಗು. ನನಗೆ ಕೊಡುವೆನೆಂದ ದಕ್ಷಿಣೆ ಮಾತ್ರ ಬೇಗನೇ ಕೊಡು " ಎಂದನು.

" ಹೊರಟು ಹೋಗುತ್ತೇನೆ. ಎಲ್ಲವನ್ನೂ ಕೊಟ್ಟುಬಿಟ್ಟೆನಾದುದರಿಂದ ದಕ್ಷಿಣೆಗೆ ಸ್ವಲ್ಪಕಾಲ ತಾಳಿಕೊಳ್ಳಿ " .ಎಂದು ಹರಿಶ್ಚಂದ್ರನು ತನ್ನ ಹೆಂಡತಿಯನ್ನೂ, ಮಗನನ್ನೂ ಕರೆದುಕೊಂಡು ಹೊರಟನು.

ಅವರು ಮೂವರೂ ಉಟ್ಟ ಬಟ್ಟೆಯೊಂದಿಗೆ ಹೊರಟಿದ್ದರು. ರಾಜನ ಪರಿಸ್ಥಿತಿಯನ್ನು ನೋಡಿ ಪುರಜನರು ಕಣ್ಣೀರು ತುಂಬಿ ಮನಸ್ಸಿನಲ್ಲಿ ವೃದ್ಧ ಬ್ರಾಹ್ಮನನ್ನು ಬೈದುಕೊಂಡರು.

ಹೋಗುತ್ತಿರುವ ಹರಿಶ್ಚಂದ್ರನ ಹಿಂದೆಯೇ ಹೋಗುತ್ತ ವಿಶ್ವಾಮಿತ್ರನು, " ನನ್ನ ದಕ್ಷಿಣೆ ಬೇಗನೇ ಕೊಡುವುದು ಒಳ್ಳೆಯದು. ಇಷ್ಟವಿಲ್ಲದಿದ್ದರೆ ಕೊಡಲಾರೆನೆಂದು ಹೇಳಿಬಿಡು. ನಾನು ಮತ್ತೆ ಕೇಳಲಾರೆ. ಅಷ್ಟೇ ಅಲ್ಲ, ಬೇಕಾದರೆ ನೀನು ದಾನ ಕೊಟ್ಟುದನ್ನೆಲ್ಲಾ ನಿನಗೇ ತಿರುಗಿ ಕೊಡುತ್ತೇನೆ. ಮಾತು ಉಳಿಸಿಕೊಳ್ಳುವೆಯಾದರೆ ದಕ್ಷಿಣೆಯ ಬಂಗಾರ ಕೊಡಲೇಬೇಕು " ಎಂದನು.

" ಅಯ್ಯಾ, ನಿಮ್ಮ ಋಣವನ್ನು ತಪ್ಪದೆ ಕೊಟ್ಟು ತೀರಿಸುತ್ತೇನೆ. ಅದನ್ನು ತೀರಿಸದೆ ಅನ್ನವನ್ನು ಹೇಗೆ ತಿನ್ನಲಿ? ನನ್ನನ್ನು ನೋಡಿ ಎಲ್ಲರೂ ನಗಾಡಲಾರರೆ? ಸ್ವಲ್ಪ ವ್ಯವಧಿ ಕೊಡಿ. ದೈವಾನುಕೂಲವಾಗಿ ನನಗೆ ಧನವು ದೊರಕಿದ ಕೂಡಲೇ ನಿಮ್ಮ ದಕ್ಷಿಣೆ ಕೊಟ್ಟುಬಿಡುತ್ತೇನೆ. ಸಿಕ್ಕಿದಷ್ಟು ನೀವೇ ತೆಗೆದುಕೊಂಡು ದಕ್ಷಿಣೆಯ ಲೆಕ್ಕ ಇಟ್ಟುಕೊಳ್ಳಿ " ಎಂದನು ಹರಿಶ್ಚಂದ್ರ.

ಆದಕ್ಕೆ ವಿಶ್ವಾಮಿತ್ರನು, " ರಾಜಾ, ಹುಚ್ಚುಚ್ಚಾಗಿ ಮಾತಾಡಬೇಡ. ನಿನಗೆ ಧನವು ಎಲ್ಲಿ ಸಿಗುತ್ತದೆ? ಸಮಸ್ತ ಧನಕ್ಕೂ ಮೂಲವಾದ ರಾಜ್ಯವು ಈಗ ನನ್ನದು. ಹೀಗೆ ಅಂಕುಡೊಂಕಾಗಿ ಸುಳ್ಳಾಡದೆ ಕೊಡಲಾಗುವುದಿಲ್ಲವೆಂದು ಹೇಳಿಬಿಡು. ನಾನು ಮತ್ತೆ ನಿನ್ನನ್ನು ಕೇಳಲಾರೆ. ಆ ಮೇಲೆ ನಿನ್ನಿಷ್ಟ " ಎಂದನು.

" ನಾನು ಸುಳ್ಳೇಕೆ ಹೇಳಲಿ? ಹಣಕ್ಕಾಗಿ ಇಷ್ಟು ಸಂದೇಹವೇತಕ್ಕೆ? ನನ್ನ ಶರೀರವನ್ನು ಮಾರಿಯಾದರೂ ನಿಮ್ಮ ಬಂಗಾರ ಕೊಡುತ್ತೇನೆ. ನನ್ನನ್ನು ಪೀಡಿಸಬೇಕಾಗಿಲ್ಲ. ಆರೋಗ್ಯವಂತರಾಗಿ ನಾವು ಮೂವರಿದ್ದೇವೆ. ನಮ್ಮನ್ನು ಕೊಂಡುಕೊಳ್ಳುವವರಿರುವರೋ ಎಂದು ನೀವೇ ನೋಡಿ ಹೇಳಿರಿ. ಈ ಅಯೋಧ್ಯೆಯಲ್ಲಿ ಯಾರೂ ಇಲ್ಲದಿದ್ದರೆ ಕಾಶಿಯಲ್ಲಾದರೂ ನಮ್ಮನ್ನು ಮಾರಿಕೊಂಡು ನಿಮ್ಮ

ದಕ್ಷಿಣೆ ಕೊಡುತ್ತೇನೆ. ಒಂದು ತಿಂಗಳು ತಾಳಿರಿ" ಎಂದು ಹರಿಶ್ಚಂದ್ರನು ಮುಂದಕ್ಕೆ ನಡೆದನು.

ಅವರು ಕಾಶಿಗೆ ಹೋದರು. ಗಂಗಾ ಸ್ನಾನಮಾಡಿ, ತರ್ಪಣ ಬಿಟ್ಟ ಮೇಲೆ ಹರಿಶ್ಚಂದ್ರನು ತಮ್ಮೊಂದಿಗೆ ಬ್ರಾಹ್ಮಣ ರೂಪದಲ್ಲಿ ಬಂದ ವಿಶ್ವಾಮಿತ್ರನೊಂದಿಗೆ, "ನಾವು ಮೂವರಲ್ಲಿ ಯಾರನ್ನಾದರೂ ಮಾರಿ ನಿಮ್ಮ ಋಣ ತೀರಿಸುತ್ತೇನೆ" ಎಂದು ಹೊರಡುವಾಗ, ವಿಶ್ವಾಮಿತ್ರನು, "ಇದು ನ್ಯಾಯವೇ ? ಒಂದು ತಿಂಗಳಿಂದ ನಿಮ್ಮ ಹಿಂದೆ ನನ್ನನ್ನು ತಿರುಗಿಸಿದ್ದಾಯಿತು. ಇನ್ನೂ ತಿರುಗಲು ಹೇಳುವಿಯಾ ?" ಎಂದನು.

"ತಿಂಗಳು ತುಂಬಲು ಸಂಜೆಯವರೆಗೂ ಹೊತ್ತಿದೆ. ಅಷ್ಟರವರೆಗೆ ತಾಳಿರಿ" ಎಂದನು ಹರಿಶ್ಚಂದ್ರ. "ಈಗ ಹೋಗಿ ಮತ್ತೆ ಇಲ್ಲಿಗೇ ಬರುತ್ತೇನೆ, ಆಗ ಕೊಡದಿದ್ದರೆ ಶಪಿಸುತ್ತೇನೆ" ಎಂದು ವಿಶ್ವಾಮಿತ್ರನು ಹೊರಟು ಹೋದನು.

ಸಾಯಂಕಾಲದೊಳಗೆ ಎರಡು ಖಂಡಿ ಬಂಗಾರ ಕೊಡದಿದ್ದರೆ ಬ್ರಾಹ್ಮಣ ಶಾಪಕ್ಕೆ ಒಳಗಾಗ ಬೇಕಾಗುತ್ತದೆ. ಹರಿಶ್ಚಂದ್ರನಿಗೆ ಏನೂ ತೋರದಾಯಿತು. ಕೇಳಿದರೆ ಕೂಡಲೇ ಕೊಡುವ ಮಿತ್ರರಲ್ಲಿ ಕೂಡಾ ಕೈ ಚಾಚದ ಹರಿಶ್ಚಂದ್ರನಿಗೆ ಈಗ ಯಾವ ಮಿತ್ರರೂ ಸಹಾ ಇಲ್ಲ. ಬ್ರಾಹ್ಮಣನೊಬ್ಬನ ಋಣವನ್ನು ತೀರಿಸಲಾಗದೆ ತಾನು ಸತ್ತು ಹೋದರೆ. ಬ್ರಾಹ್ಮಣನ ಧನವನ್ನು ಅಪಹರಿಸಿದ ತಪ್ಪಿಗೆ ನರಕದಲ್ಲಿ ಹುಳುವಾಗಿ ಹುಟ್ಟಬೇಕು. ಆದುದರಿಂದ ತಾನು ತನ್ನನ್ನು ಮಾರಿಕೊಳ್ಳದೆ ಬೇರೆ ಗತಿ ಇಲ್ಲ.

ಗಂಡನ ಚಿಂತೆಯ ಮುಖವನ್ನು ನೋಡಿ, ಹೆಂಡತಿ ಶೈಬ್ಯ, "ಪ್ರಭೂ, ಸತ್ಯವಂತನಿಗಿಂತ ಹೆಚ್ಚಿನವರು ಯಾರೂ ಇರಲಾರರು. ಮಾತು ತಪ್ಪಿದವನು ಪಿಶಾಚಿಗೆ ಸಮಾನನು. ಯಯಾತಿರಾಜನು ನೂರು ಅಶ್ವಮೇಧಗಳನ್ನು ಮಾಡಿ, ಆ ಮೇಲೆ ರಾಜಸೂಯವನ್ನು ನೆರವೇರಿಸಿ ಅದರ ಫಲಿತವಾಗಿ ಸ್ವರ್ಗಕ್ಕೆ ಹೋಗಿ ಒಂದು ಸುಳ್ಳು ಹೇಳಿದ ಕಾರಣಕ್ಕಾಗಿ ಅಧೋಗತಿಗೆ ಬಿದ್ದನಂತೆ" ಎಂದಳು.

ಆವಳ ಮಾತು ಕೇಳಿ ಹರಿಶ್ಚಂದ್ರನು "ನೀನು ಏನೋ ಹೇಳಬೇಕೆಂದಿರುವಿ. ಧೈರ್ಯದಿಂದ ಹೇಳಿಬಿಡು" ಎಂದನು. ಅದಕ್ಕೆ ಶೈಬ್ಯಳು, "ಪತ್ನಿ ಎಂಬವಳು ಸಂತಾನಕ್ಕಾಗಿ ಬೇಕು. ನನ್ನಿಂದ ನಿಮಗೆ ಆ ಫಲ ಸಿಕ್ಕಿಯಾಗಿದೆ. ಈಗ ನನ್ನನ್ನು ಯಾರಿಗಾದರೂ ಮಾರಿ ಆ ಬ್ರಾಹ್ಮಣನ ಋಣ ತೀರಿಸಬಹುದಲ್ಲ ?" ಎಂದಳು.

ಆವಳ ಮಾತು ಕೇಳಿ ಹರಿಶ್ಚಂದ್ರನಿಗೆ ದುಃಖ ಉಕ್ಕಿತು. ತುಂಬ ಪ್ರಿಯಳಾಗಿ ಮಾತಾಡಿ ತನ್ನನ್ನು ಆನಂದಪಡಿಸುವ ಹೆಂಡತಿ, ಇಂತಹ ಕಠೋರವಾದ ಮಾತು ಹೇಳುವುದನ್ನು ಕೇಳ ಬೇಕಾಯಿತು. ದುಃಖಾವೇಗದಲ್ಲಿ ಹರಿಶ್ಚಂದ್ರನಿಗೆ ಸ್ಮೃಹೆ ತಪ್ಪಿತು.





# ದೇವೀಭಾಗವತ

ಪ್ರಪಂಚವನ್ನೆಲ್ಲಾ ಆಳುವ ಚಕ್ರವರ್ತಿಯಾಗಿದ್ದು, ಕೇಳಿದವರಿಗೆ ಇಲ್ಲವೆನ್ನದೆ ಅಪಾರವಾಗಿ ದಾನ ಧರ್ಮಗಳನ್ನು ಕೊಡುತ್ತ, ಸತ್ಯಸಂಧನೆಂಬ ಕೀರ್ತಿಗೆ ಪಾತ್ರನಾಗಿ, ಇಂದ್ರನಿಗೂ ವಿಷ್ಣುವಿಗೂ ಸಮಾನನೆಂದು ಎಲ್ಲರಿಂದಲೂ ಅನ್ನಿಸಿಕೊಂಡ ತನ್ನ ಪತಿಯಾದ ಹರಿಶ್ಚಂದ್ರನಿಗೆ ಇಂಥಾ ದುಸ್ಥಿತಿ ಏಕೆ ಬಂತೆಂದು ಶೈಬ್ಯಳಿಗೆ ಅರ್ಥವಾಗಲಿಲ್ಲ. ಅಂತಹ ತಪ್ಪು ಏನು ಮಾಡಿದನೋ ? ಒಂದುವೇಳೆ ತಿಳಿಯದೆ ಮಾಡಿದ ತಪ್ಪಿಗೆ ಇಷ್ಟು ಕಠಿಣ ಶಿಕ್ಷೆ ಬೀಳುವುದೆಂದರೇನು ? ದುಃಖಾ ವೇಗದಲ್ಲಿ ಅವಳಿಗೂ ಮೂರ್ಛೆ ಬಂದಿತು.

ತಂದೆ ತಾಯಿಗಳು ಸುಮ್ಮನೆ ಬಿದ್ದಿರುವುದನ್ನು ನೋಡಿ ಅವರ ಮಗ ರೋಹಿತನು ಹಸಿವೆಯಿಂದಲೂ ದಾಹದಿಂದಲೂ ಅಳಲಿಕ್ಕೂ ಶಕ್ತಿಯಿಲ್ಲದೆ ಅವರ ಪಕ್ಕದಲ್ಲಿ ದೀನನಾಗಿ ಕುಳಿತನು. ತನ್ನ ಹಸಿವೆಗೆ ಏನಾದರೂ ತಿನ್ನಬೇಕೆಂದು ನೋಡುತ್ತಿದ್ದನು. ಏನೂ ತೋರದೆ ಹೊಟ್ಟೆಯೊತ್ತಿಕೊಂಡು ಕುಳಿತಿದ್ದನು.

ಆಗ ಬ್ರಾಹ್ಮಣ ವೇಷದ ವಿಶ್ವಾಮಿತ್ರನು ಅಲ್ಲಿಗೆ ಬಂದು, ಮೂರ್ಛೆ ಹೋಗಿ ಬಿದ್ದಿರುವವನ್ನು ನೋಡಿ ತಲೆಯಾಡಿಸುತ್ತ, ಅವರ ಮುಖಕ್ಕೆ ತಣ್ಣೀರು ತಳಿದನು. ಅವರಿಬ್ಬರೂ ಮೂರ್ಛೆ ತಿಳಿದು ಎದ್ದರು. ಇದಿರಿನಲ್ಲಿ ದುರುದುರು ನೋಡುವ ಬ್ರಾಹ್ಮಣನನ್ನು ನೋಡಿ, ತಡಬಡಿಸಿಕೊಂಡು ಇಬ್ಬರೂ ಕೈ ಮುಗಿದು ನಿಂತರು.

"ಏನಯ್ಯಾ ಹರಿಶ್ಚಂದ್ರಾ ! ಹೇಳಿದ ಮಾತು ಉಳಿಸಿಕೊಳ್ಳುವ ಗೊಡವೆಯಿಲ್ಲದೆ, ಹೀಗೆ ಬಿದ್ದು ಕೊಂಡರೆ ಏನರ್ಥ ? ಮಾತು ಉಳಿಸಿಕೊಳ್ಳ ಬೇಕಾದರೆ ನನ್ನ ದಕ್ಷಿಣೆ ಎರಡು ಖಂಡಿ ಚಿನ್ನ ಕೊಟ್ಟು ಬಿಡು. ಹಗಲು ಇನ್ನು ಅರ್ಧ ಭಾಗವಷ್ಟೇ ಇದೆ. ಸೂರ್ಯನು ಅಸ್ತಮಿಸುವುದರೊಳಗೆ ದಕ್ಷಿಣೆಯ ಹಣಕೊಡದೇ ಹೋದರೆ ನಿನ್ನನ್ನು ನಿಶ್ಚಯವಾಗಿ ಶಪಿಸಿಬಿಡುತ್ತೇನೆ. ಆಮೇಲೆ ನನ್ನನ್ನು ದೂರಿ ಪ್ರಯೋಜನವಿಲ್ಲ. ಜಾಗ್ರತೆ !" ಎಂದನು ಕಠಿಣವಾಗಿ. ಹೀಗೆ ಹೇಳಿ ಬ್ರಾಹ್ಮಣ ರೂಪದ ವಿಶ್ವಾಮಿತ್ರನು

೨೭. ಹರಿಶ್ಚಂದ್ರನ ಬಂಧ ವಿಮುಕ್ತಿ



ಅಲ್ಲಿಂದ ಹೊರಟುಹೋದನು. ಸ್ವಲ್ಪ ಹೊತ್ತಿಗೆಲ್ಲಾ ವಿಶ್ವಾಮಿತ್ರನ ಮಾಯೆಯಿಂದ ವೇದಾಧ್ಯಯನ ಪರನಾದಂತಹ ಇನ್ನೊಬ್ಬ ಬ್ರಾಹ್ಮಣನು ಆ ದಾರಿಯಾಗಿ ಬಂದನು. ಅವನ ಹಿಂದೆ ಅನೇಕ ಮಂದಿ ಬ್ರಾಹ್ಮಣರೂ ಇದ್ದರು.

ಹರಿಶ್ಚಂದ್ರನ ಹೆಂಡತಿ ಆ ಬ್ರಾಹ್ಮಣ ಮುಖ್ಯನನ್ನು ನೋಡಿ, ತನ್ನ ಪತಿಯೊಂದಿಗೆ, "ಅಲ್ಲಿ ನೋಡಿ. ಒಬ್ಬ ವೇದಜ್ಞನಾದ ಬ್ರಾಹ್ಮಣನು ಅನೇಕಮಂದಿ ಬ್ರಾಹ್ಮಣರೊಂದಿಗೆ ಬರುತ್ತಿದ್ದಾನೆ. ಅವನನ್ನು ಕೇಳಿದರೆ ಬೇಕಾಗುವ ಧನ ಸಿಗಬಹುದು. ರಾಜನಾಗಿರುವ ನೀವು ಉಳಿದ ವರ್ಣದವರಿಗೆಲ್ಲ ತಂದೆಯಾಗುವುದರಿಂದ ಅವರು ನಿಮಗೆ ಮಗನ ಹಾಗಾಗುವರು. ಮಕ್ಕಳಿಂದ ಧನವನ್ನು ಕೇಳಿ ಪಡೆಯುವುದರಿಂದ ತಪ್ಪೇನೂ ಇಲ್ಲವಷ್ಟೆ? ಕಷ್ಟ ಬರುವುದು ಯಾರಿಗೂ ಸಹಜ. ದಾಕ್ಷಿಣ್ಯಪಡದೆ ಕೇಳಿರಿ" ಎಂದಳು.

ಅವಳ ಮಾತು ಕೇಳಿ ಹರಿಶ್ಚಂದ್ರನು, "ಏನೆಂದೆ? ಕ್ಷತ್ರಿಯಜನ್ಮ ಎತ್ತಿದ ನಾನು ಕೈನೀಡಿ ಒಬ್ಬರನ್ನು ಹೇಗೆ ಕೇಳಲು ಸಾಧ್ಯ? ಪಡೆದುಕೊಳ್ಳುವ ಅಧಿಕಾರವು ಬ್ರಾಹ್ಮಣನೊಬ್ಬನಿಗೇ ಇರುತ್ತದೆ. ಉಳಿದವರ್ಣದವರಿಗೆ ಬ್ರಾಹ್ಮಣರು ಗುರುಗಳಿದ್ದ ಹಾಗೆ. ಗುರುಗಳಿಗೆ ಕೊಡಬೇಕೇ ಹೊರತು, ಕೈ ನೀಡಿ ಕೇಳುವುದು ಧರ್ಮವಲ್ಲ. ಕ್ಷತ್ರಿಯ ಧರ್ಮವಂತೂ ಅಲ್ಲವೇ ಅಲ್ಲ. ಇದನ್ನು ತಿಳಿದೂ ಇದಕ್ಕೆ ವಿರುದ್ಧವಾದ ಕಾರ್ಯವನ್ನು ಮಾಡಲು ಹೇಳುವೆಯಾ?" ಎಂದನು.

"ಕಾಲಪರಿಸ್ಥಿತಿಗೆ ತಕ್ಕ ಹಾಗೆ ಮಾನಾವಮಾನಗಳೂ, ದಾನಕೊಡುವುದೂ ಪಡೆಯುವುದೂ ನಡೆಯುತ್ತವೆ. ಗುರುವಾಗಿ ಧರ್ಮ ಪೋಷಕನಾಗಿರಬೇಕಾಗಿದ್ದ ಬ್ರಾಹ್ಮಣನು ಇಷ್ಟೊಂದು ಅನ್ಯಾಯದಿಂದ ಪೀಡಿಸುವುದುಂಟೇ? ಅವನ ದುರಾಶೆ ನ್ಯಾಯವೇನು?" ಎಂದಳು ರಾಣಿ.

ಆದಕ್ಕೆ ಹರಿಶ್ಚಂದ್ರನು, "ದೇವೀ! ನೀನು ಸಹನೆ ಕಳೆದು ಬ್ರಾಹ್ಮಣರನ್ನು ದೂಷಿಸುವುದು ಸರಿಯಲ್ಲ. ಹೆಣ್ಣಾದವಳು ಸಹನೆಯ ಮೂರ್ತಿಗಳಾಗಿರಬೇಕು. ನಿನ್ನಲ್ಲಿ ಅದು ಕಡಿಮೆಯಾಗಿರಲು ಕೂಡಾ ಆ ಕಾಲಯೋಗ ಪರಿಸ್ಥಿತಿಗಳೇ ಕಾರಣವೆನ್ನಬೇಕು. ಅದು ಬಿಡು. ನಾನಂತೂ ಕತ್ತಿಯಿಂದ ನಾಲಗೆಯನ್ನಾದರೂ ಕೊಯಿದು ಕೊಂಡೇನೇ ಹೊರತು ಒಬ್ಬರನ್ನು ದೇಹಿ ಎಂದು ಕೇಳುವೆನೆಂದು ತಿಳಿಯಬೇಡ, ತ್ರಿಶಂಕು ಮಹಾರಾಜನ ಮಗನು ಅಷ್ಟೊಂದು ದೀನನಾಗಲಾರನು. ಕೈಲಾದರೆ ಭುಜಬಲದಿಂದ ಧನ ಸಂಪಾದಿಸುವೆನೇ ಹೊರತು ಬೇಡಿ ಹಣ ಸಂಪಾದಿಸಲಾರೆನು. ಹಾಗೆ ಮಾಡಿದರೆ ನನ್ನ ಹಿರಿಯರ ಧವಳ ಕೀರ್ತಿಗೆ ಕೂಡಾ ಕಳಂಕ!" ಎಂದನು.

"ಸರಿ. ಯಾಚನೆ ಮಾಡಲು ಅಭ್ಯಂತರವಿದ್ದರೆ ನನ್ನನ್ನು ಮಾರಿ ನಿಮ್ಮ ಕೀರ್ತಿಯನ್ನು ಕಾಪಾಡಿಕೊಳ್ಳಿರಿ. ಮಾರುವುದಕ್ಕೂ, ಅಂದಣ ವೇರಿಸಲಿಕ್ಕೂ,



ಇಳಿಸಲಿಕ್ಕೂ ಮತ್ತೇನೇ ಮಾಡಲಿಕ್ಕೂ ಹೆಂಡತಿ ಎಂಬ ವ್ಯಕ್ತಿ ಉಪಯೋಗ ಬೀಳುತ್ತಾಳಷ್ಟೆ ? ನಿಮ್ಮ ಸತ್ಯವನ್ನು ಕಾಪಾಡಿ, ಕೊಟ್ಟಮಾತು ಉಳಿಸಿಕೊಂಡು, ಆಶಬಾಕ ಬ್ರಾಹ್ಮಣನನ್ನು ತೃಪ್ತಿಬಡಿಸಲು ಬೇರೆ ಉಪಾಯವೇನಿದೆ ? ಗಡು ಮೀರಿಹೋದರೆ ಕೆಟ್ಟ ಶಾಪ ಕೊಡುವುದಾಗಿ ಎಚ್ಚರಿಸಿದ್ದಾನೆ. ಆ ಗಡು ಸಮೀಪದಲ್ಲೇ ಇದೆ" ಎಂದು ಹೆಂಡತಿ ಹೇಳಿದ ಮಾತುಗಳನ್ನು ಕೇಳಿ ಹರಿಶ್ಚಂದ್ರನಿಗೆ ದುಃಖವು ಉಕ್ಕಿ ಬಂತು. ಅದನ್ನು ನೋಡಿ ಅವಳು ಹರಿಶ್ಚಂದ್ರನಿಗೆ ಸಮಾಧಾನ ಹೇಳುತ್ತ, "ಧೈರ್ಯವಾಗಿರಿ. ನಾನೇನು ಹೇಳಿದೆ ? ನನ್ನನ್ನು ಮಾರಿಬಿಡಿ ಎಂದೆ. ಜೂಜಾಟಕ್ಕಲ್ಲ, ಮಧುಪಾನಕ್ಕಲ್ಲ. ಭೋಗಭಾಗ್ಯಗಳಿಗೂ ಅಲ್ಲ. ನಿಮ್ಮ ಸತ್ಯವನ್ನು ನಿಲ್ಲಿಸಲಿಕ್ಕಾಗಿ ಹೆಂಡತಿಯನ್ನು ಮಾರುವುದು ತಪ್ಪೇನೂ ಅಲ್ಲ. ನಿಮ್ಮ ವಿಷಯ ನನಗೆ ಗೊತ್ತಿದೆ. ನನ್ನ ವಿಷಯ ನಿಮಗೆ ಗೊತ್ತಿದೆ. ಒಳ್ಳೆಯ ಕಾಲ ಕೂಡಿ ಬಂದಾಗ ಮತ್ತೆ ನನ್ನನ್ನು ಕೊಂಡು ಕೊಂಡರಾಯಿತು" ಎಂದು ಹರಿಶ್ಚಂದ್ರನನ್ನು ಅನೇಕ ವಿಧವಾಗಿ ಹೇಳಿ ಒಪ್ಪಿಸಿದಳು.

ಆಗ ಹರಿಶ್ಚಂದ್ರನು ಅವಳೊಂದಿಗೆ, "ಸರಿ. ನಿನ್ನ ಮಾತು ಕೇಳಿ, ಯಾರೂ ಮಾಡದ ಕೆಲಸವನ್ನು ಮಾಡುತ್ತೇನೆ. ಯಾವ ಯುಗದಲ್ಲಿಯೂ ಹೆಂಡತಿಯನ್ನು ಮಾರಿಕೊಂಡ ಪಾಪಾತ್ಮನಿರಲಾರ. ನಾನೊಬ್ಬ ಭಾಗ್ಯ ಹೀನನಾದವನು. ನೀನು ಹೇಳಿದಂತೆ ಬೇರೆ ದಾರಿ ಯಾವುದೂ ನಮಗಿಲ್ಲ. ಅದಕ್ಕೇ ಹತ್ತು ಮಂದಿಯ ಮುಂದೆ ತಲೆಬಗ್ಗಿಸುವ ಕಾರ್ಯವನ್ನು ಮಾಡುತ್ತೇನೆ." ಎಂದನು.

ಅವನು ತನ್ನ ಹೆಂಡತಿಯನ್ನು ಒಂದು ಕಡೆಯಲ್ಲಿ ನಿಲ್ಲಿಸಿ ಗದ್ಗದ ಸ್ವರದಿಂದ ದಾರಿಯಲ್ಲಿ ಹೋಗುವವರನ್ನು ನೋಡಿ ಹೀಗೆ ಹೇಳ ತೊಡಗಿದನು :

"ನಾಗರಿಕರೇ ! ಕರುಣಾ ಶಾಲಿಗಳೇ ! ಇವಳು ನನ್ನ ಹೆಂಡತಿ. ಇವಳನ್ನು ಯಾರಿಗಾದರೂ ಚಾಕರಿ ಮಾಡಲು ಬಿಟ್ಟುಕೊಡುತ್ತೇನೆ. ತಕ್ಕ ಹಣ ಸಿಕ್ಕಿದರೆ ಮಾರಿಬಿಡುತ್ತೇನೆ. ಎಲ್ಲಾ ಮನೆಗೆಲಸಗಳನ್ನೂ ಚೆನ್ನಾಗಿ ಮಾಡುತ್ತಾಳೆ. ಸಾಧುವಾಗಿ ಹೇಳಿದ್ದು ಕೇಳಿಕೊಂಡಿರುತ್ತಾಳೆ. ಬನ್ನಿರಯ್ಯಾ ! ಕೊಳ್ಳುವಶಕ್ತಿ ಇದ್ದವರು ಮುಂದೆ ಬನ್ನಿ !"

ಅವರ ಸುತ್ತಲೂ ಅನೇಕರು ಬಂದು ನಿಂತರು. ಹೆಂಡತಿಯನ್ನು ಮಾರಬೇಕಾದ ಅಗತ್ಯವೇನು ಬಂತೆಂದು ಕೆಲವರು ಪ್ರಶ್ನೆ ಮಾಡಿದರು.

ಅಂಥವರಿಗೆ ಹರಿಶ್ಚಂದ್ರನು ಹೀಗೆಂದನು : "ಅಯ್ಯಾ, ಅದೆಲ್ಲಾ ನಿಮಗೇಕೆ ? ಅರ್ಧಸತ್ತ ನಾನು ಮಹಾ ಪಾಪಿ ! ಪರಮ ಕಿರಾತಕನಾದ ರಾಕ್ಷಸನಂಥವನು. ನನ್ನ ಹೆಸರು ನೆನೆಯುವುದೂ ಮಹಾ ಪಾಪ ! ಅಂತಹ ನನ್ನನ್ನು ಕುರಿತು ನಿಮಗೇಕೆ ? ಬೇಕಾದರೆ ಇವಳನ್ನು ತಕ್ಕ ಬೆಲೆ ಕೊಟ್ಟು ಕೊಂಡುಕೊಳ್ಳಿ" ಎಂದು ಹುಚ್ಚನಂತೆ ಕಿರಿಚಿಕೊಂಡು ಹೇಳಿದನು. ಅದನ್ನು ಕೇಳಿ ಅನೇಕರಿಗೆ ಅನುತಾಪ



ವಾಯಿತು. ಕೆಲವರಿಗೆ ಕಂಬನಿ ತುಂಬಿತು. ಆಗ ವಿಶ್ವಾಮಿತ್ರನು ಮತ್ತೊಬ್ಬ ಮುದುಕ ಬ್ರಾಹ್ಮಣನ ವೇಷದಲ್ಲಿ ಬಂದು, "ನನ್ನ ಹತ್ತಿರ ಇರುವ ಧನಕ್ಕೆ ಅಳತೆಯೇ ಇಲ್ಲ. ಸುಕುಮಾರಿ ಯಾದ ನನ್ನ ಹೆಂಡತಿ ಯಾವ ಕೆಲಸವನ್ನೂ ಮಾಡುವುದಿಲ್ಲ. ನೀನು ಕೇಳುವಷ್ಟು ಹಣ ಕೊಡು ತ್ತೇನೆ. ನಿಜಕ್ಕೂ ನಿನ್ನ ಹೆಂಡತಿಯನ್ನು ಮಾರು ವಿಯಾ ?" ಎಂದು ಕೇಳಿದನು. ಪ್ರತ್ಯುತ್ತರ ಕೊಡಲು ಹರಿಶ್ಚಂದ್ರನಿಗೆ ಬಾಯಿ ಏಳಲೇ ಇಲ್ಲ. ಅವನು ಸುಮ್ಮನೆ ತಲೆತಗ್ಗಿಸಿಕೊಂಡಿರಲು, ಮತ್ತೆ ವಿಶ್ವಾ ಮಿತ್ರನು ಅವನನ್ನು ನೋಡಿ, "ಮೂವತ್ತೆರಡು ಲಕ್ಷಣಗಳಿರುವ ಸ್ತ್ರೀಗೆ ಒಂದು ಕೋಟಿ ಅಥವಾ ಒಂದು ಖಂಡಿ ಚಿನ್ನವೆಂದು ಶಾಸ್ತ್ರದಲ್ಲಿ ಹೇಳಿದೆ. ಈ ಸ್ತ್ರೀಯನ್ನು ಆ ಬೆಲೆಗೆ ಕೊಂಡು ಕೊಳ್ಳುತ್ತೇನೆ" ಎಂದನು. ಹರಿಶ್ಚಂದ್ರನ ಬಾಯಿಯಿಂದ ಮಾತೇ ಹೊರಡಲಿಲ್ಲ. ಬ್ರಾಹ್ಮಣನು ಒಂದು ಖಂಡಿ ಚಿನ್ನದ ನಾಣ್ಯಗಳನ್ನು ಅವನ ಮುಂದೆ ಸುರಿದು ಅವನ ಹೆಂಡತಿ ಯೊಂದಿಗೆ, "ಈಗ ನೀನು ನನ್ನ ಸೇವಕಿ. ದಾಸಿ, ಕೂಡಲೇ ಇತ್ತಬಾರದೆ, ಹಾಗೆ ನಿಂತಿರುವೆಯಲ್ಲಾ ? ನಡೆ ಹೋಗೋಣ !" ಎನ್ನುತ್ತ ಅವಳ ತಲೆ ಕೂದಲು ಹಿಡಿದು ಎಳೆದನು.

"ಅಯ್ಯಾ, ನನ್ನ ಮೇಲೆ ಕೈ ಹಾಕಬೇಡಿ. ನಾನಾಗಿಯೇ ಬರುತ್ತೇನೆ. ನಾನು ನನ್ನ ಮಗನನ್ನು ಬಿಡಲಾರೆ. ಪತಿವ್ರತೆಯಾದ ನನ್ನನ್ನು ಹೀಗೆಲ್ಲಾ ಮುಟ್ಟಿ ಎಳೆಯಬಾರದು. ಕುಟುಂಬಸ್ಥರಾದ ನಿಮಗೆ ತಿಳಿಯದ್ದೇನಿದೇ ?" ಎಂದಳು.

ರೋಹಿತನು "ಅಮ್ಮಾ ! ಅಮ್ಮಾ !" ಎಂದು ಅವಳ ಹಿಂದೆ ಹೋದನು. ಆ ಬ್ರಾಹ್ಮಣನು ಅವಳ ಕೂದಲನ್ನು ಬಿಟ್ಟು, "ಹೋಗಾಚೆ" ಎಂದು ರೋಹಿತನನ್ನು ಹೊಡೆದನು.

ಅದನ್ನು ನೋಡಿ ಹರಿಶ್ಚಂದ್ರನ ಹೆಂಡತಿ, ಆ ಬ್ರಾಹ್ಮಣನೊಂದಿಗೆ, "ಅಯ್ಯಾ, ನನ್ನನ್ನು ಕೊಂಡು ಕೊಂಡ ಹಾಗೆಯೇ ನನ್ನ ಮಗನನ್ನು ಕೂಡಾ ಕೊಂಡುಕೊಳ್ಳಿ. ನನಗೆ ಅವನೊಬ್ಬನೇ ಮಗ. ಅವನಿಲ್ಲದಿದ್ದರೆ ನಾನು ಕೆಲಸ ಸರಿಯಾಗಿ ಮಾಡ ಲಾರೆನು. ಅವನಿದ್ದರೆ ಅವನೂ ನಿಮಗೆ ಸಣ್ಣ ಪುಟ್ಟ ಕೆಲಸಗಳಿಗೆ ಉಪಯೋಗವಾಗುವನು. ನನ್ನನ್ನು ಕೊಂಡುಕೊಂಡ ದಯಾಳುವಾದ ನಿಮಗೆ ಅವ ನೊಂದು ಹೊರೆಯಾಗಲಾರನು. ಅವನಿಗೂ ಒಂದು ಬೆಲೆ ಕಟ್ಟಿ ಕೊಂಡುಕೊಳ್ಳಿ ಸ್ವಾಮಿ !" ಎಂದಳು.

"ಅದೂ ಒಳ್ಳೆಯದೆ. ಅವನೂ ನನ್ನ ಸೇವಕ ನಾಗಿರಲಿ. ಅವನಿಗೆ ನೂರು ಚಿನ್ನದ ನಾಣ್ಯಗಳನ್ನು ಕೊಡುತ್ತೇನೆ" ಎಂದು ಹೇಳಿ ಮತ್ತೆ ನೂರು ನಾಣ್ಯ ಗಳನ್ನು ಕೊಟ್ಟು, ಅವನನ್ನೂ ಕೊಂಡುಕೊಂಡು ತನ್ನ ಹಿಂದೆ ಬರಲು ಹೇಳಿದನು.

ಶೈಬ್ಯಳು ಗಂಡನಿಗೆ ಪ್ರದಕ್ಷಿಣೆಮಾಡಿ ತನ್ನ ತಲೆ ಯನ್ನು ಅವನ ಪಾದಗಳ ಮೇಲೆ ಇಟ್ಟು, "ಎಷ್ಟು

ಜನ್ಮಗಳಾದರೂ ನೀವೇ ನನ್ನ ಗಂಡನಾಗಿರಬೇಕು!" ಎಂದಳು. ಅವಳು ಪರರ ಮನೆಯಲ್ಲಿ ಹೇಗೆ ಚಾಕರಿ ಮಾಡುವಳೋ, ಏನೇನು ಕಷ್ಟಗಳನ್ನು ಇದಿರಿಸ ಬೇಕಾಗುವುದೋ, ತಾನಿಲ್ಲದೆ ಹೇಗೆ ಬದುಕುವಳೋ ಎಂದು ಊಹಿಸಲಾಗದೆ ಹರಿಶ್ಚಂದನು ತಹತಹಿಸಿ ದನು. ತನ್ನ ಮಗನು ತನಗೆ ದೂರನಾಗುವನೆಂದು ಕೊಂಡು ಹೆಚ್ಚಿನ ಸಂಕಟವನ್ನು ಅನುಭವಿಸಿದನು. ರಾಜ್ಯತ್ಯಾಗಕ್ಕಿಂತಲೂ ಪುತ್ರತ್ಯಾಗವು ಅವನನ್ನು ವಿಶೇಷವಾಗಿ ನೋಯಿಸುತ್ತಿತ್ತು. ಇದೆಲ್ಲದರ ಮೇಲೆ ಈಗ ಒಮ್ಮೆಗೇ ಅವನು ಕೇಳುವವರಿಲ್ಲದ ಒಬ್ಬಂಟಿಗ ನಾಗುತ್ತಾನೆ.

ಆ ಬ್ರಾಹ್ಮಣನು ತನ್ನ ಹೆಂಡತಿಯನ್ನೂ ಮಗ ನನ್ನೂ ಸಿಡಿಮಿಡಿಯಾಗಿ ಕೋಪಿಸುತ್ತ ಕರೆದುಕೊಂಡು ಹೋಗುವುದನ್ನು ನೋಡಿ, ಹರಿಶ್ಚಂದ್ರನು ಏನೂ ಮಾಡಲಾಗದೆ ಮಿಡುಕಿದನು. ಅವನ ಶೋಕಕ್ಕೆ ಮೇರೆ ಇಲ್ಲದಾಯಿತು.

ಹಾಗಿರುವಾಗ ವಿಶ್ವಾಮಿತ್ರನು ಅದೇ ವೃದ್ಧ ಬ್ರಾಹ್ಮಣ ರೂಪದಲ್ಲಿ ಬಂದು, "ಎಲ್ಲಿ ನನ್ನ ದಕ್ಷಿಣೆ?" ಎಂದು ಕೈ ನೀಡಿದನು.

ಹರಿಶ್ಚಂದ್ರನು ತನ್ನ ಮಗನನ್ನೂ, ಹೆಂಡತಿ ಯನ್ನೂ ಮಾರಿ ಬಂದ ಧನವನ್ನೆಲ್ಲಾ ವಿಶ್ವಾಮಿತ್ರನಿಗೆ ಕೊಟ್ಟನು. "ಒಂದು ಖಂಡೀ, ಮೇಲೆ ಕೊಸರಾ! ಪೂರ್ತಿ ಎಲ್ಲಿದೆ?" ಎಂದು ಕೇಳಿದ ವಿಶ್ವಾಮಿತ್ರ.

"ಇನ್ನೂ ಅಸ್ತಮನವಾಗಲಿಲ್ಲ. ಸ್ವಲ್ಪತಾಳಿರಿ" ಎಂದನು ಹರಿಶ್ಚಂದ್ರ. "ನೋಡುತ್ತೇನೆ" ಎಂದು ಬ್ರಾಹ್ಮಣನು ಹೊರಟು ಹೋದನು.

ಹರಿಶ್ಚಂದ್ರನು ತನ್ನನ್ನು ತಾನು ಮಾರಿಕೊಳ್ಳಲು ಸಿದ್ಧನಾದನು. ಅಷ್ಟರಲ್ಲಿ ವಿಕೃತಾಕಾರನಾದ ಚಾಂಡಾಲ ನೊಬ್ಬನು ಆ ದಾರಿಯಾಗಿ ಬಂದು ಹರಿಶ್ಚಂದ್ರ ನೊಂದಿಗೆ, "ನೋಡೋಯ್, ನಾನು ಪ್ರವೀರನೆಂಬ ಸ್ಮಶಾನಾಧಿಕಾರಿ. ನನ್ನ ಕೈ ಕೆಳಗೆ ಕೆಲಸ ಮಾಡು



ವಿಯಾ? ಶವಗಳ ಮೇಲಿನ ಬಟ್ಟೆಯನ್ನು ತೆಗೆಯುವುದು ಸ್ಮಶಾನ ಶುಲ್ಕ ವಸೂಲು ಮಾಡುವುದು ನಿನ್ನ ಕೆಲಸ. ನಾನು ಹೇಳುವ ಬೇರೆ ಕೆಲಸವನ್ನೂ ಒಮ್ಮೊಮ್ಮೆ ಮಾಡಬೇಕು" ಎಂದನು.

"ನಾನು ಬ್ರಾಹ್ಮಣ ಕ್ಷತ್ರಿಯರಿಗೆ ಮಾತ್ರವೇ ಮಾರಲ್ಪಡುತ್ತೇನೆ. ನಿನ್ನ ಚಾಕರನಾಗಲಾರೆನು" ಎಂದನು ಹರಿಶ್ಚಂದ್ರ.

"ಮಾರಲ್ಪಡುವೆನೆಂದು ಹೇಳಿ ಈಗ ಮಾತು ತಪ್ಪಿಸುವೆಯಾ? ಸುಳ್ಳುಗಾರನಿಗೆ ಎಷ್ಟೋ ನೆವನ ಗಳು!" ಎಂದನು ಪ್ರವೀರ.

ಸುಳ್ಳುಗಾರನೆನಿಸಿಕೊಳ್ಳುವುದಕ್ಕಿಂತಲೂ ಚಾಂಡಾಲನ ಸೇವೆಗೆ ತನ್ನನ್ನು ಮಾರಿಕೊಳ್ಳುವುದೇ ಒಳ್ಳೆಯದೆಂದು ಹರಿಶ್ಚಂದ್ರ ಮಹಾರಾಜನಿಗೆ ತೋರಿತು. ಅಷ್ಟರಲ್ಲಿ ಬ್ರಾಹ್ಮಣ ರೂಪದ ವಿಶ್ವಾ ಮಿತ್ರನು ಉಳಿದಿರುವ ತನ್ನ ದಕ್ಷಿಣೆಯನ್ನು ಕೇಳಲು



ಬಂದೇ ಬಂದು ಬಿಟ್ಟನು. ಹೊತ್ತು ಮುಳುಗಲು ಇನ್ನು ಹೆಚ್ಚು ಹೊತ್ತಿಲ್ಲ. ಈಗ ಹರಿಶ್ಚಂದ್ರನಿಗೆ ತನ್ನನ್ನು ಮಾರಿಕೊಳ್ಳಬೇಕಾದ ನಿರ್ಬಂಧವೇ ಬಂದಿತು. ಬೇರೆ ಉಪಾಯವಿರಲಿಲ್ಲ. ಅವನು ವಿಶ್ವಾಮಿತ್ರನ ಕಾಲಿಗೆ ಬಿದ್ದು "ಸ್ವಾಮಿ, ಇನ್ನೊಬ್ಬರೇಕೆ? ನೀವೇ ನನ್ನನ್ನು ಕೊಂಡು ಕೊಂಡುಬಿಡಿ. ದಕ್ಷಿಣೆ ಪೂರ್ತಿ ಕೊಡುವೆನೆಂಬ ನನ್ನ ಮಾತನ್ನು ಉಳಿಸಲಿಕ್ಕಾಗಿ ನೀವೇ ನನ್ನನ್ನು ಕೊಂಡುಕೊಂಡು ನಿಮ್ಮಿಷ್ಟ ಬಂದಂತೆ ನನ್ನಿಂದ ಚಾಕರಿ ಮಾಡಿಸಿಕೊಳ್ಳಿ" ಎಂದು ಪ್ರಾರ್ಥಿಸಿದನು.

"ಹಾಗೇನು? ಒಹಳ ಒಳ್ಳೇದಾಯಿತು, ಇನ್ನು ನೀನು ನನ್ನ ಸೊತ್ತು" ಎಂದು ವಿಶ್ವಾಮಿತ್ರನು ಪ್ರವೀರನೊಂದಿಗೆ, "ಇವನೀಗ ನನ್ನ ದಾಸ. ನನಗೆ ಇವನಿಂದ ಪ್ರಯೋಜನವೇನಿಲ್ಲ. ನನಗೆ ಹಣಬೇಕು. ನಿನಗೆ ಆಳು ಬೇಕು. ಆ ಹಣ ಕೊಟ್ಟು ನೀನು ಇವನನ್ನು ಕೊಂಡುಕೋ" ಎಂದನು,

ಪ್ರವೀರನು ಹಾಗೆಯೆ, ವಿಶ್ವಾಮಿತ್ರನು ಕೇಳಿದಷ್ಟು ಧನವನ್ನು ಕೊಟ್ಟು ಹರಿಶ್ಚಂದ್ರನನ್ನು ತನ್ನ ಸೇವಕನಾಗಿ ಕೊಂಡುಕೊಂಡನು. ಆಗ "ಮಾತು ತಪ್ಪದ ಹರಿಶ್ಚಂದ್ರ! ಸತ್ಯಹರಿಶ್ಚಂದ್ರ!" ಎಂದು ಆಕಾಶವಾಣಿ ಎಲ್ಲೆಲ್ಲಿಯೂ ಮೊಳಗಿತು! ಹರಿಶ್ಚಂದ್ರನಿಗೂ ಅವನ ಮಾಯೆಯ ಚಾಂಡಾಲನಿಗೂ ಅದಾವುದೂ ಕೇಳಲಿಲ್ಲ. ಚಾಂಡಾಲನು ಹರಿಶ್ಚಂದ್ರನನ್ನು ಕರೆದುಕೊಂಡು ಹೋಗಿ ಸ್ಮಶಾನದಲ್ಲಿ ಶವಗಳ ಮೇಲಿನ ಬಟ್ಟೆ ತೆಗೆಯಲು ನಿಯಮಿಸಿದನು.

ಊರಿನ ದಕ್ಷಿಣದಿಕ್ಕಿನಲ್ಲಿ ಸ್ಮಶಾನವಿದ್ದಿತು. ರಾತ್ರೀ ಹಗಲೂ ಶವಗಳು ಬರುತ್ತಾ ಇದ್ದುವು. ಅವುಗಳಿಗೆ ಹಣ ವಸೂಲು ಮಾಡಿ, ಶವಗಳ ಮೇಲಿನ ಬಟ್ಟೆ ತೆಗೆದು ದಹನಮಾಡುವುದು ಹರಿಶ್ಚಂದ್ರನ ಕೆಲಸ.

ಹೀಗಿರಲು ಬ್ರಾಹ್ಮಣನು ಕೊಂಡುಕೊಂಡ ಶೈಬ್ಯಳು, ಅಲ್ಲಿ ಚಾಕರಿ ಮಾಡುತ್ತಿರಲು, ರೋಹಿತನು ಯಜಮಾನನಿಗಾಗಿ ಸಮಿಧೆಗಳನ್ನು ತರಲು ಕಾಡಿಗೆ ಹೋದನು. ಆಗ ಅವನು ಒಂದು ಹುತ್ತದ ಮೇಲೆ ಕಾಲಿಟ್ಟು ಹಾವಿನ ಕಡಿತದಿಂದ ಬಿದ್ದನು. ಆ ಸಂಗತಿ ಕೇಳಿ ಆಳುತ್ತಾ ಕುಳಿತ ಶೈಬ್ಯಳನ್ನು ನೋಡಿ, "ಅಷ್ಟು ಹಣ ಸುರಿದು ನಿನ್ನನ್ನು ಕೊಂಡುಕೊಂಡದ್ದು ಕೆಲಸ ಮಾಡಲಿಕ್ಕೋ ಅಳಲಿಕ್ಕೋ! ಸಾಯಂಕಾಲ ಲಕ್ಷ್ಮಿ ಬರುವ ಹೊತ್ತಿನಲ್ಲಿ ಅಳುವೆಯಾ?" ಎಂದು ಬೈದು ಕೂಗಾಡಿದನು.

ಅವಳು ಅರ್ಧರಾತ್ರಿಯವರೆಗೂ ಅಲ್ಲಿ ಕೆಲಸ ಮಾಡಿದ ಮೇಲೆ ಹೊರಡಲು ಸಾಧ್ಯವಾಯಿತು. "ಸತ್ತ ಮಗ ಅತ್ತರೆ ಬರುತ್ತಾನೆಯೆ? ನನಗೂ ನೂರು ನಷ್ಟ! ಹುಂ, ಬೇಗ ಹೋಗಿ ದಹನ ಮಾಡಿಸಿ ಬೆಳಗಾಗುವಷ್ಟರಲ್ಲಿ ಬಾ" ಎಂದು ಹೇಳಿ ಯಜಮಾನನು ಅವಳನ್ನು ಕಳುಹಿಸಿದನು.

ಅರ್ಧರಾತ್ರಿಯಲ್ಲಿ ಅವಳು ಮಗನನ್ನು ಹುಡುಕುತ್ತಾ ಹೋಗಿ, ರೋಹಿತನ ಶವವನ್ನು ನೋಡಿ

ಎದೆಯೊಡೆಯುವಂತೆ ಅಳುತ್ತಾ ಕುಳಿತಳು. ಆಗ ವನ ಪಾಲಕಭಟರು ಬಂದು, "ರಾತ್ರಿಯಲ್ಲಿ ಮಕ್ಕಳನ್ನು ಕೊಂದು ತಿನ್ನುವ ಪಿಶಾಚಿ!" ಎಂದುಕೊಂಡು, ಅವಳನ್ನು ಕೂದಲು ಹಿಡಿದು ಎಳೆದುಕೊಂಡು ಹೋಗಿ ಸ್ಮಶಾನದ ಹತ್ತಿರವಿದ್ದ ಪ್ರವೀರನಿಗೆ ಅವಳನ್ನು ಒಪ್ಪಿಸಿ, "ಈ ರಕ್ಕಸಿಯನ್ನು ವಧಿಸು" ಎಂದರು. ಅವನು ಹರಿಶ್ಚಂದ್ರನನ್ನು ಕರೆದು ಅವನ ಕೈಗೆ ಕತ್ತಿಯನ್ನು ಕೊಟ್ಟು, ಅವಳನ್ನು ವಧಿಸಲು ಹೇಳಿದನು.

ಹರಿಶ್ಚಂದ್ರನು ಅವಳ ಗುರುತು ಹಿಡಿಯದೆ, "ನಿನ್ನ ತಲೆಕಡಿಯುತ್ತೇನೆ, ಸಿದ್ಧಳಾಗು" ಎಂದನು.

"ಅಯ್ಯಾ, ತುಸುತಾಳು. ನನ್ನ ಮಗ ಸತ್ತಿದ್ದಾನೆ. ಬೇಗ ಹೋಗಿ ಅವನನ್ನು ತಂದು ದಹನ ಮಾಡಿದ ಮೇಲೆ ತಲೆ ಕಡಿ" ಎಂದಳು ಶೈಬ್ಯ.

ಧರ್ಮ ಬುದ್ಧಿಯ ಹರಿಶ್ಚಂದ್ರನು ಅವಳನ್ನು ಹೋಗಲು ಬಿಟ್ಟನು. ಅವಳು ಹೋಗಿ ಮಗನ ಶವವನ್ನು ತಂದು ಅಳುತ್ತಾ ಕುಳಿತಳು. ಹರಿಶ್ಚಂದ್ರನು ತನ್ನ ವಿಧಿಯಂತೆ ಶವದ ಮೇಲಿನ ಬಟ್ಟೆಯನ್ನು ಎಳೆದುಕೊಂಡನು.

ಈಗ ತನ್ನ ಹೆಂಡತಿಯ ಹಾಗು ಮಗನ ಗುರುತು ಹಿಡಿದು ಹರಿಶ್ಚಂದ್ರನು ದುಃಖವನ್ನು ತಾಳಲಾರದವನಾದನು. ಶೈಬ್ಯಳಿಗೂ ಅವನು ತನ್ನ ಪತಿಯೆಂದು ತಿಳಿಯಿತು. ಕಡೆಗೆ ತಮ್ಮ ಗತಿ ಹೇಗಾಯಿತೆಂದು ಇಬ್ಬರಿಗೂ ತಿಳಿಯಿತು. ಹರಿಶ್ಚಂದ್ರನು ಮಗನ ಶವವನ್ನು ಅಪ್ಪಿ ಹಿಡಿದು ಮೂರ್ಛೆ ಹೋದನು.

ತನ್ನಂತೆ ಮೂರ್ಛೆ ತಿಳಿದೆದ್ದ ಮೇಲೆ ಶೈಬ್ಯಳು ನಡೆದ ಸಂಗತಿಯನ್ನೆಲ್ಲಾ ಗಂಡನೊಂದಿಗೆ ಹೇಳಿದಳು. ಹರಿಶ್ಚಂದ್ರನು ಹೆಂಡತಿಯೊಂದಿಗೂ ಮಗನೊಂದಿಗೂ ಚಿತೆಯಲ್ಲಿ ಹಾರುವುದೆಂದು ನಿಶ್ಚಯಿಸಿ ಅದರ ಮೇಲೆ ಮಗನ ಶವವನ್ನು ಮಲಗಿಸಿದಾಗ, ಅವನ ಮನಸ್ಸಿನಲ್ಲಿ ಮಿಂಚಿನಂತೆ ಮಹಾದೇವಿ ಮಿಂಚಿ ನಗುತ್ತಾ, ಇದೆಲ್ಲಾ ತಾನು ಆಡಿಸಿದ ಆಟವೆಂದೂ, ವಸಿಷ್ಠ ವಿಶ್ವಾಮಿತ್ರರ ಅಹಂಕಾರಕ್ಕೆ ಪಾಠ ಕಲಿಸಲು "ನಿನ್ನನ್ನು ಪುಟಹಾಕಬೇಕಾಯಿತೆಂ"ದೂ ಹೇಳಿ ಏನೋ ಸೈಗೆ ತೋರಿಸಿ ಮಾಯವಾದಳು. ಕೂಡಲೇ ಇಂದ್ರನು ದೇವತೆಗಳೊಂದಿಗೆ ಅಲ್ಲಿ ಪ್ರತ್ಯಕ್ಷನಾದನು. ಅಮೃತವರ್ಷದಿಂದ ರೋಹಿತನು ಎದ್ದನು. ಚಾಂಡಾಲನು ಯಮನಾಗಿ ನಿಂತನು. ಇಂದ್ರನು ಹರಿಶ್ಚಂದ್ರನೊಂದಿಗೆ, "ಸತ್ಯ ಹರಿಶ್ಚಂದ್ರಾ! ನಿನ್ನ ಕೀರ್ತಿ ಅಜರಾಮರ! ರೋಹಿತನಿಗೆ ಪಟ್ಟಾಭಿಷೇಕ ಮಾಡಿ ಸ್ವರ್ಗಕ್ಕೆ ಬರುವೆಯಂತೆ. ಈಗ ಅತಿಥಿಯಾಗಿ ನಮ್ಮೊಂದಿಗೆ ಪತ್ನೀ ಸಮೇತನಾಗಿ ಬಾ" ಎಂದು ತನ್ನೊಂದಿಗೆ ಕರೆದುಕೊಂಡು ಹೋದನು. ವಿಶ್ವಾಮಿತ್ರನು ವಸಿಷ್ಠನ ಮುಂದೆ ತಲೆ ತಗ್ಗಿಸಲು, ವಸಿಷ್ಠನು ತನ್ನದೂ ತಪ್ಪಿದೆ ಎಂದುಕೊಂಡು ಸುಮ್ಮನಿದ್ದನು. —(ಸಂಪೂರ್ಣ)

